ಎರಡನೇ ವರುಷದ ಎರಡನೆಯ ಪುಷ್ಪ

# ಬಾಳಿನ ಗಿಡ

(ಸ್ವತಂತ್ರ ಸಾಮಾಜಿಕ ಕಾದಂಬರಿ)

ಬರೆದವರು:
ಎಂ. ಹರಿದಾಸ್ ರಾವ್

ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

# ಲೇಖಕನ ಅರಿಕೆ

ಭಾರತದಲ್ಲಿ ಬ್ರಿಟಿಶರ ಆಳಿಕೆ ಆರಂಭವಾದಂದಿನಿಂದ ಹಳ್ಳಿಜನ ಪೇಟೆ ಪಟ್ಟಣಗಳಿಗೆ ನದಿಯಂತೆ ಹರಿದು ಬರತೊಡಗಿದರು. ಶ್ರೀಮಂತರು ಸುಖ ವಿಲಾಸ ಬಯಸಿ ಬಂದರು. ನೌಕರಿ, ಉದ್ಯೋಗ, ವ್ಯಾಪಾರಗಳನ್ನು ಅಪೇಕ್ಷಿಸಿ ಮಧ್ಯಮ ವರ್ಗದವರು ನುಸುಳಿದರು. ನಾನಾ ಗ್ರಾಮ ಕೈಗಾರಿಕೆಗಳಿಂದ ಜೀವಿಸುತ್ತಿದ್ದ ಬಡವರೂ ಒಕ್ಕಲತನದಲ್ಲುದ್ಯುಕ್ತರಾಗಿದ್ದ ರೈತರೂ ನಗರಗಳಲ್ಲಿ ಒಂದೊಂದಾಗಿ ತಲೆ ಎತ್ತಲಾರಂಭಿಸಿದ ಗಿರಣಿ ಹಾಗೂ ಕಾರ್ಖಾನೆಗಳಲ್ಲಿ ಕೂಲಿಕಾರರಾಗಿ ಸೇರಿಕೊಂಡರು. ಒಬ್ಬೊಬ್ಬರು ಒಂದೊಂದು ಕಾರಣ ಹಾಗೂ ಆಶೆಯಿಂದ ಹಳ್ಳಿಯನ್ನು ತೊರೆಯುವಂತಾಯಿತು. ನಮ್ಮ ನಾಡಿನ ಇಂದಿನ ಅನೇಕ ರಾಜಕೀಯ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳ ಮೂಲ ಇಲ್ಲಿದೆ. ಇದನ್ನರಿತಿದ್ದ ಮಹಾತ್ಮಾ ಗಾಂಧಿಯವರು "ಪುನಃ ಹಳ್ಳಿಗಳಿಗೆ ತಿರುಗಿ" ಎಂದು ಪದೇ ಪದೇ ಸಾರಿದುದುಂಟು. ಅನ್ನದ ಅಭಾವ ಉಂಟಾಗಿರುವ ಈ ಕಾಲದಲ್ಲಿ, "ಹಳ್ಳಿಗಳಿಗೆ ತಿರುಗಿರಿ. ಹೆಚ್ಚು ಆಹಾರ ವಸ್ತುಗಳನ್ನು ಬೆಳೆಸಿರಿ" ಎಂದು ಮುಂದಾಳುಗಳೂ ಮುಂದಾಳುಗಳೂ ಕೂಗುತ್ತಿರುವರು. ಆದರೆ ಆ ಮಾತನ್ನು ಕೃತಿಯಲ್ಲಿಳಿಸುವವರು ವಿರಳ. ಮಾತಿನಷ್ಟು ಕೃತಿ ಸುಲಭವೂ ಇಲ್ಲ.

ಈ ಕಾದಂಬರಿಯಲ್ಲಿ, ಕಲಾವಳಿಯಲ್ಲಿ ಹುಟ್ಟಿ ಬೆಳೆದು ದೊಡ್ಡವರಾಗಿ ಸೇವಾನಿವೃತ್ತರಾದ ಶಾಲಾ ಉಪಾಧ್ಯಾಯರೊಬ್ಬರು ಮಲೆನಾಡಿನ ಒಂದು ಹಳ್ಳಿಗೆ ತೆರಳಿ, ಕಾಡನ್ನು ಕಡಿದು ಆ ಪಡಭೂಮಿಯಲ್ಲಿ ಅಕ್ಕಿ ಕಂಗು ತೆಂಗು ಗಿಡಗಳನ್ನು ಬೆಳೆಸಿ ಬಾಳಿದುದನ್ನೇ ವರ್ಣಿಸಲಾಗಿದೆ. ಅವರಿವರು ಹೇಳಿದರೆಂದು ಅವರು ಹಳ್ಳಿಗೆ ತಿರುಗಿದವರಲ್ಲ. ಪರಿಸ್ಥಿತಿಯ ಒತ್ತಾಯಕ್ಕೆ ಸಿಲುಕಿ ತೆರಳಿದರು. ಮಕ್ಕಳ ಮೇಲಿನ ಪ್ರೇಮದ ಎಳೆ ಅವರನ್ನು ಎಳೆದು ತಂದಿತು. ಅಲ್ಲಿ ಬಂದು ಘೋರಾರಣ್ಯದ ಮಧ್ಯೆ ನೆಲೆಸಿದ ಮೇಲೆ ರೋಗರುಜೆ, ಕಾಡ

ಪ್ರಾಣಿಗಳ ಹಾವಳಿ, ಮಕ್ಕಳ ಅಗಲಿಕೆ, ಬಡತನ ಮೊದಲಾದ ಅನೇಕ ದೈಹಿಕ ಮತ್ತು ಮಾನಸಿಕ ಕಷ್ಟ ಪರಂಪರೆಗಳು ಒಂದರ ಮೇಲೊಂದು ಎರಗಿದರೂ ಹತಾಶರಾಗದೆ ಮಣ್ಣಿಗಂಟಿಕೊಂಡು ಊರ್ಜಿತಗೊಳಿಸಿದರು. ಮಕ್ಕಳ ಹಿತ ಅಭಿವೃದ್ಧಿಗಳಿಗಾಗಿ ಹಗಲಿರುಳು ದುಡಿದರು. ಮಕ್ಕಳ ವಿಚಿತ್ರ ಗುಣ ಸ್ವಭಾವಗಳಿಂದ ತನಗಾದ ದುಃಖವನ್ನು ನುಂಗಿಕೊಂಡ ಅವರ ಸುಖಕ್ಕೇ ನೆರವಾದರು. ಮಕ್ಕಳ ಹಿತಚಿಂತನೆಯಲ್ಲೇ ಕಾಲಕಳೆದ. ಅವರ ಶ್ರೇಯಸ್ಸನ್ನೇ ಬಯಸಿ, ಅತ್ಯಂತ ಪ್ರೇಮಾತಿಶಯದಿಂದ ತಮ್ಮ ಜೀವನವನ್ನೇ ಧಾರೆಯೆರೆದರು. ಇಂಥ ದಿವ್ಯ ಪ್ರೇಮ, ತ್ಯಾಗ ಮತ್ತು ಸಾಹಸೀ ಜೀವನವೇ "ಬಾಳಿನ ಗಿಡ" ವಾಗಿ ಬೆಳೆದಿದೆ. ಅಂಥ ಜೀವಗಳಿಗೆ ನಿಸರ್ಗ ಒಲಿಯುತ್ತದೆ. ದೇವರೂ ಒಲಿದಾನು.

ಮಂಗಳೂರು, ಕೊಡಗು, ಕಾರವಾರ್ ಹಾಗೂ ಮೈಸೂರಿನ ಶಿವಮೊಗ್ಗ ಜಿಲ್ಲೆ ಮೊದಲಾದ ಈ ಮಲೆನಾಡು ಭಾಗಗಳಲ್ಲಿ "ಬಾಳಿನ ಗಿಡ" ದಲ್ಲಿ ನಿರೂಪಿಸಿದಂತಹ ಅನೇಕ ಜನರುಂಟು. ಈ ಕಾದಂಬರಿಯ ನಾಯಕ ಕಾಲ್ಪನಿಕ ವ್ಯಕ್ತಿಯಲ್ಲ. ದಕ್ಷಿಣ ಕನ್ನಡಜಿಲ್ಲೆಯ ಮಲೆನಾಡಿನಲ್ಲಿ ಆ ಜೀವ ವನ್ನುಕಣ್ಣಾರೆ ಕಂಡಿದ್ದೇನೆ. ನಾನು ಬದುಕಿರುವುದೆಷ್ಟು ಸತ್ಯವೋ ಅಷ್ಟೇ ನಿಜ ಈ ಮಾತು. ದಕ್ಷಿಣ ಕನ್ನಡ ಜಿಲ್ಲೆಯ ಕಥೆಯಾಗಿರುವದರಿಂದ ಆ ಜಿಲ್ಲೆ ಯಲ್ಲಿ ಹಾಗೂ ಆ ಮಲೆನಾಡಿನಲ್ಲಿ ಬಳಕೆಯಲ್ಲಿರುವ ಅನೇಕ "ದೇಸಿ" ಪದಗ ಳನ್ನು ನಾನು ಬಳಸಿಕೊಂಡಿದ್ದೇನೆ. ಕರ್ನಾಟಕದ ಇನ್ನಿತರ ಭಾಗಗಳ ಜನರೂ ಅವುಗಳನ್ನು ಅರಿತುಕೊಳ್ಳಲೆತ್ನಿಸುವುದು ಅನುಚಿತವಲ್ಲ.

ಈ ಕಥೆಯಲ್ಲಿ ನಾಯಕ ನಾಯಕಿಯರೇ ಮುಖ್ಯ. ಹೆಚ್ಚಾಗಿ ಆದಿಯಿಂದ ಅಂತ್ಯದ ವರೆಗೆ ಅವರ ಚಿತ್ರವೇ ವಿಧ ವಿಧದ ಬಣ್ಣಗಳಿಂದ ಬಿಡಿಸಲ್ಪಟ್ಟಿದೆ. ಉಳಿದಪಾತ್ರಗಳು ಹಿನ್ನೆಲೆಯಲ್ಲಿವೆ. ಪೋಷಕವಾಗಿ ಅಲ್ಲಲ್ಲಿ ಸುಳಿದು ಹಾಯ್ದು ಹೋಗುತ್ತವೆ. ಇದು ಆಕಸ್ಮಿಕವಲ್ಲ. ನನ್ನ ಉದ್ದೇಶವೇ ಹಾಗಿದೆ. ಮುಖ್ಯ ಪಾತ್ರಗಳ ನಿರೂಪಣೆ, ಪೋಷಣೆಗಳು ಪರಿಪೂರ್ಣವಾಗುವುದರೊಳಗೆ ಕಥೆ ಬಹಳ ಬೆಳೆದು ಬಿಟ್ಟಿತು. ಕೊನೆಯ ಒಂದೆರಡು ಅಧ್ಯಾಯಗಳನ್ನೂ ಸಂಕ್ಷೇಪಿಸಬೇಕಾಯ್ತು. ಹೀಗಿರುವಾಗ ಉಳಿದ ವ್ಯಕ್ತಿಗಳ ಚಿತ್ರಗಳನ್ನು ಕಡೆ ಮುಟ್ಟಿಸಲೆತ್ನಿಸುತ್ತಿದ್ದರೆ ಕಾದಂಬರಿ ಇದರ ಎರಡು ಮೂರರಷ್ಟಾಗುತಿತ್ತು.

ಶವನ್ನು ಒಂದು ತಿಂಗಳೊಳಗೆ ಬರೆಯುತ್ತಿದ್ದೆನಾದರೂ ಇಂಥಾ ದುರ್ದಿನಗಳಲ್ಲಿ ಮುದ್ರಣದ ಭಾರ ಹೊರುವ ಸಾಮರ್ಥ್ಯ ನನ್ನಲ್ಲಿಲ್ಲ. "ವ್ಯವಹಾರ" ಜಗತ್ತು "ಕಲಾವಿದ" ನನ್ನು ಕೊಲ್ಲಲೆತ್ನಿಸಿದೆ.

ಈ "ಬಾಳಿನ ಗಿಡ" ಕಾದಂಬರಿಯ ಹನ್ನೆರಡು ಅಧ್ಯಾಯಗಳನ್ನು ಹನ್ನೆರಡು ದಿನಗಳಲ್ಲಿ ನಾನು ಬರೆದು ಮುಗಿಸಿದ್ದೇನೆ. ಒಮ್ಮೆ ಬರೆದುದನ್ನು ತಿದ್ದಲಿಲ್ಲ. ಒಂದು ಅಧ್ಯಾಯ ಬರೆದಾಗ ಹಿಂದಿನದು ಮುದ್ರಣವಾಯ್ತು. ಆದುದರಿಂದ "ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ" ಎಂದು ನಾನು ಸೂಚಿಸಿದರೆ ಅದು ಅಹಂಕಾರದ ಮಾತಲ್ಲ. ಹಾಗೆ ನಾನು ಬರೆಯಲು ಪರಿಸ್ಥಿತಿಯೇ ಕಾರಣ. ಈ ರೀತಿ ಬರೆಯದೆ ಗತ್ಯಂತರವಿಲ್ಲ. ನಾನು ಸಾವು ಮತ್ತು ಬದುಕುಗಳೊಳಗಿನ ಭೀಕರ ಬಡಿದಾಟದ ಸುಳಿಯಲ್ಲಿ ಸಿಲುಕಿದ್ದೇನೆ ಈ ಹೋರಾಟವೂ ಇಂದು ನಿನ್ನೆಯದಲ್ಲ. ಇದರಲ್ಲಿ ಯಾವುದಕ್ಕೆ ಜಯ? ನಾನೂ ಕುತೂಹಲದಿಂದ ಕದನವನ್ನು ಕಾಣುತಿದ್ದೇನೆ. ಇಲ್ಲ, ಬದುಕು ಕೈಹಿಡಿಯಲೊಲ್ಲದು. ಸಾವೂ ಸಮೀಪ ಸುಳಿಯುವುದಿಲ್ಲ. ಏಕೆಂದರೆ ಅದಕ್ಕೆ ನಾನು ಅಂಜದಿದ್ದುದನ್ನು ಕಂಡು ಅದೂ ಭಯಪಡುತ್ತಿದೆ. ನನ್ನದು ತ್ರಿಶಂಕುಸ್ವರ್ಗ! ಆದುದರಿಂದ ಸಜ್ಜನರು, ಸಹೃದಯರು, ಸುಜ್ಞಾನಿಗಳು, ಅಂತಃಕರಣವುಳ್ಳವರು, ರಸಿಕರು, ವಿದ್ಯಾಪಕ್ಷಪಾತಿಗಳು "ಈ ಗದ್ಯಕಾವ್ಯ" ದಲ್ಲಿರುವ ಆನಂದವನ್ನು ಅನುಭವಿಸಲಿ. ಕಬ್ಬಿನ ರಸ ಹೀರುವವರು ತೊಗಟೆಯನ್ನು ಚೆಲ್ಲುವಂತೆ ಸಣ್ಣ ಸಣ್ಣ ಕುಂದು ಕೊರತೆಗಳನ್ನು ಕ್ಷಮಿಸಲಿ. ಅಜ್ಞಾನ, ಮದ, ಮತ್ಸರವುಳ್ಳವರೊಡನೆ ನನ್ನ ಜಗಳವಿಲ್ಲ.

**ಹುಬ್ಬಳ್ಳಿ**

**ಎಂ. ಹರಿದಾಸರಾವ್**

೨೫ ನವಂಬರ್, ೪೯

## ಇದೇ ಲೇಖಕನ ಇನ್ನಿತರ ಗ್ರಂಥಗಳು

| | | |
|---|---|---|
| (೧೯೪೮) | ದ್ವಿತೀಯ ಮಹಾಯುದ್ಧ | (ಮುಗಿದಿದೆ) |
| (೧೯೪೯) | ಉಕ್ಕಿನ ಮನುಷ್ಯ | (ಮುಗಿದಿದೆ) |
| (೧೯೫೬) | ಎಚ್ಚೆತ್ತ ಆಗ್ನೇಯ ಏಷ್ಯ | ೧—೮—೦ |
| (೧೯೫೭) | ಮರುಭೂಮಿಯ ಅರಬರು | ೧—೮—೦ |
| (೧೯೫೮) | ಕ್ರಿಸ್ಮಸ್ ಕಾಣಿಕೆ ಮತ್ತು ಇತರ ಕಥೆಗಳು | ೧—೦—೦ |
| (೧೯೫೮) | ಬದುಕಿನ ದಾರಿ (ಕಾದಂಬರಿ) | ೧—೪—೦ |

# ಒಂದನೆಯ ಅಧ್ಯಾಯ

ಸಂಜೆಯ ಗಾಳಿ ಬೀಸಲಾರಂಭಿಸಿದೆ. ಮೊದಲು ಮೆಲುವಾಗಿ ಗಾಳಿ ಬಂತು. ತೆರೆತೆರೆಯಂತೆ. ಅದರ ಮೈ ಸೋಂಕಿಗೆ ತೆಂಗಿನ ಮರಗಳ ಗರಿಗಳು ಮೆಲ್ಲಗೆ ಅಲುಗಿದವು. ಗಾಳಿಯ ಭರ ಹೆಚ್ಚಾದಂತೆ ತೋಟದಲ್ಲಿ ನಾದಲಹರಿ ಎದ್ದಿತು. ಈ ಗಾನಕ್ಕೆ ಮನ ಸೋತ ಗಾಳಿ, ತೆಂಗು ಕಂಗುಗಳ ಮಡಲುಗಳ ಮೇಲೆ ನಲಿಯ ತೊಡಗಿದೆ. ಭಕ್ತರಂತೆ ಸೋಗೆಗಳು ಸಹಸ್ರ ಚಾಮರ ಸೇವೆ ಸಲ್ಲಿಸುತ್ತಿವೆ. ಹರ್ಷದಿಂದ ತೆಂಗಿನ ಮರಗಳು ಒಂದನ್ನೊಂದು ಆಲಿಂಗಿಸುವಂತೆ ಬಾಗಿದುವು. ಗರಿಗಳ ಒಲಿಯ ತುದಿಯಲ್ಲಿದ್ದ ಹಕ್ಕಿಗಳ ಗೂಡುಗಳು ಉಯ್ಯಾಲೆಯಂತೆ ತೂಗಲಾರಂಭಿಸಿದುವು. ಹೊಟ್ಟೆಯ ಮೊಟ್ಟೆ ಮರಿ ಜಗುಳಬಹುದೆಂಬ ಭೀತಿಯಿಂದ ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತ ಸೋಗೆಯಿಂದ ಸೋಗೆಗೆ ಮರದಿಂದ ಮರಕ್ಕೆ ಹಾರ ತೊಡಗಿವೆ. ಗಾಳಿಯ ಸ್ಪರ್ಶಸುಖದಿಂದ ಮದವೇರಿದ ಅಳಿಲು ಇನಿಯಳನ್ನು ಕರೆಯಲು ಪ್ರೇಮಗಾನಕ್ಕೆ ತೊಡಗಿತು. ದೂರದಿಂದ ಹಾರಿ ಬಂದ ಕಾಗೆ ಸೋಗೆಯ ಮೇಲೆ ಕುಳಿತು ಕೊರಳು ಕೊಂಕಿಸಿ, "ಕ್ರಾಂ, ಕ್ರಾಂ, ಕ್ರಾಂ" ಎಂದು ಸೊಲ್ಲು ಎತ್ತಿತು. "ಕ್ರಾಂ, ಕ್ರಾಂ, ಕ್ರಾಂ"!

ಕಾಗೆಯ ರಾಗಕೇಳಿದ ಸೀತಮ್ಮನವರು ಮನೆಯೊಳಗಿಂದ ಹೊರ ಜಗಲಿಗೆ ಬಂದು ಬೆನ್ನು ಬಗ್ಗಿಸಿ, ತೋಟದ ಕಡೆ ನೋಡಿ, "ನೆಂಟರ ಕಾಗೆ ಇನ್ನೊಮ್ಮೆ ಕೂಗೇ! ನೆಂಟರ ಕಾಗೆ ಇನ್ನೊಮ್ಮೆ ಕೂಗೆಲ" ಎಂದು ಬಯಸಿ ನುಡಿದರು. ಜಗಲಿಯಲ್ಲಿ ಗೋಡೆಗೊರಗಿ ಕನ್ನಡಕ ಹಾಕಿಕೊಂಡು ಏನನ್ನೋ ಓದುತ್ತ ಕುಳಿತಿದ್ದ ಗೋವಿಂದರಾಯರಿಗೆ ಹೆಂಡತಿಯ ಈ ಮಾತು ಕೇಳಿ ನಗು ಬಂತು. "ಹಾಂ, ಕಾಗೆ ಶುಭ ಶಕುನದ ಪಕ್ಷಿ! ಅದರ ಅಂದ ಚಂದ ಬಣ್ಣಿಸಿ ಫಲವಿಲ್ಲ! ತೇಟ್ ಮದಿಮಾಳ್ ಪಕ್ಕಿ!" ಎಂದು ವ್ಯಂಗ್ಯ ಧ್ವನಿ ತೆಗೆದರು.

ಈ ಪರಿಹಾಸದ ಮಾತು ಕೇಳಿ ಸೀತಮ್ಮನವರು ಉತ್ತರ ಕೊಡದೆ ಬಿಡಲಿಲ್ಲ. ಕಾಗೆ ಎಂದರೆ ನಿಮಗೆಲ್ಲ ತಾತ್ಸಾರ. ಹೌದು. ಅದು ಥಳಕು ಪಳ

ಕಿನ ಹಕ್ಕಿಯಲ್ಲ. ಆದರೆ, ಅದರ ಗುಣ ಕೋಗಿಲೆಗೂ ಬರಲಿಕ್ಕಿಲ್ಲ. ಒಂದೊಂದು ಸಂದರ್ಭದಲ್ಲಿ ಅದು ಒಂದೊಂದು ರಾಗ ಎಳೆಯುತ್ತದೆ.. ಒಂದಗಳು ಕಂಡರೆ ತನ್ನ ಒಳಗವನ್ನು ಕರೆಯಲು ಎತ್ತುವ ಸ್ವರವೇ ಬೇರೆ. ಒಂದು ಕಾಗೆ ಮರಣ ಹೊಂದಿದರೆ ಸಾವಿರ ಕಾಗೆಗಳು ಒಂದು ರೆಕ್ಕೆಗಳಿಂದ ಎದೆ ಎದೆ ಬಡಿದುಕೊಂಡು ಅಳುವ ಧ್ವನಿಯೋ ಇನ್ನೊಂದು ತೆರ. ನೆಂಟರು ಬರುವ ಕಾಲಕ್ಕೆ, ಕ್ರಾಂ, ಕ್ರಾಂ" ಎಂದು ಶೋಭಾನೆ ಹಾಡಿದರೆ ಮರಣದ ವಾರ್ತೆ ಮುಟ್ಟಿ ವಾಗ ಅಪಸ್ವರವನ್ನೇ ತೆಗೆಯುತ್ತದೆ. ಕತ್ತಲೆ ಕರಗಿ ಬೆಳಕು ಹರಿಯುವ ಮೊದಲೇ ಎದ್ದು ಜಗತ್ತನ್ನು ಎಚ್ಚರಿಸುವ ಕರ್ತವ್ಯ ಬುದ್ಧಿ ಅದಕ್ಕುಂಟು. ಅದು ಕೂಗಿದಾಗಲೇ ಬೆಳಗಾಯಿತೆಂದು ತಿಳಿದು ಮುಸುರೆ ತಿಕ್ಕಲು ನಾನೂ ಏಳುತ್ತೇನೆ. ಮತ್ತೇನು ನಮ್ಮ ಮನೆಯಲ್ಲಿ ಗಡಿಯಾರ ಇದೆಯೇನು?' ಎಂದು ಅವರು ಅಣಕಿಸಿದರು.

ಕಾಕಸ್ವರದ ಸತೀ ಗೀತವನ್ನು ಕೇಳಿ ಗೋವಿಂದರಾಯರಿಗೆ ಇನ್ನಷ್ಟು ನಗು ಬಂದಿತೇನೊ ನಿಜ. ಆದರೆ, "ಗಡಿಯಾರವಿದೆಯೇನು ಮನೆಯಲ್ಲಿ?" ಎಂದು ಆಡಿದ ಕೊಂಕು ನುಡಿ ಮನಸ್ಸಿಗೆ ಬರಲಿಲ್ಲ. ನಾನೆಲ್ಲಿ ಬಯ್ದು ಮಾರಾಯತೀ. ಕಾಗೆಯನ್ನು ಮೈನಾದಂತೆ ಗೂಡಿನಲ್ಲಿಟ್ಟು ಸಾಕಿಬಿಡು ನನ್ನಡ್ಡಿಯಿಲ್ಲ" ಎಂದವರು ಉತ್ತರವಿತ್ತರು.

"ಸಾಕುತ್ತಿದ್ದೆನಲ್ಲ! ಉಣಲು ನಮಗೇ ಅನ್ನವಿಲ್ಲದಾಗ ಅದಕ್ಕೊಂದು ಮುಷ್ಟಿ ಅಗಳು ಎಲ್ಲಿಂದ ತರಲಿ?" ಎಂದು ಸೀತಮ್ಮನವರು ಸಂಸಾರದ ಸ್ಥಿತಿಯನ್ನು ಒಂದೇ ಮಾತಿನಲ್ಲಿ ಬಣ್ಣಿಸಿ, ಒಳಗೆ ನಡೆದರು.

ಸಂಸಾರದ ಸುಖ ದುಃಖದ ಕರುಳಿನ ಮಾತು ಅವರ ಬಾಯಿಂದ ಜಾರಿದೊಡನೆಯೇ ಗೋವಿಂದರಾಯರು ವಿಹ್ವಲರಾದರು. ಸಂಭಾಷಣೆಯ ಕಾಲಕ್ಕೆ ಮೂಗಿನ ತುದಿಯವರೆಗೆ ಬಂದಿದ್ದ ಕನ್ನಡಕವನ್ನು ಮೆಲ್ಲಗೆ ತೆಗೆದು ಉಟ್ಟ ಬೈರಾಸಿನ ತುದಿಯಿಂದ ಅದರ ಗಾಜುಗಳನ್ನು ಮೃದುವಾಗಿ ಒರಸಿ, ಮಡಚಿಟ್ಟರು. ಆ ಮೇಲೆ ಸೊಂಟಕ್ಕೆ ಸಿಕ್ಕಿಸಿದ್ದ ನಸ್ಯದ ಬುರುಡೆಯನ್ನು ತೆಗೆದು ಎಡ ಅಂಗೈ ಮೇಲೆ ಸುರಿದು, ಬಲಕೈ ಬೆರಳಿನಿಂದ ಚಿಟಕೆ ನಸ್ಯವನ್ನು ಮೂಗಿಗೇರಿಸಿ ಎಡಗೈಯಿಂದ ಮತ್ತೆ ಮೂಗನ್ನು ಒರಸಿಕೊಂಡರು. ಒಂದೆರಡು ನಿಮಿಷಗಳ

ಮೇಲೆ, "ಹೊ, ಹೊ, ಹೋ" ಎಂದು ಅವರು ಸೀನುವುದು ಅಡಿಗೆಯ ಮನೆ ಯವರೆಗೂ ಪ್ರತಿಧ್ವನಿಸುತ್ತಿತ್ತು.

ನಸ್ಯದ ಮಹಿಮೆ ಬಹಳ ದೊಡ್ಡದು. ಮೂಗಿನ ಸೊಳ್ಳೆಗಳು ನಸ್ಯಕ್ಕೆ ಬ್ರಹ್ಮರಂಧ್ರ. ಈ ನಾಳಗಳಿಗೆ ನಸ್ಯ ತುರುಕಿಸಿದೊಡನೆಯೇ ವಿದ್ಯುಚ್ಛಕ್ತಿಯಂತೆ ಪರಿಣಾಮ. ನರನಾಡಿಗಳಿಗೆ ಚುರುಕು ಹತ್ತಿ ಅದು ನೆತ್ತಿಗೇರಿ, ಮಿದುಳನ್ನು ಅಲುಗಿಸಿ, ಚಿತ್ತವನ್ನು ಚಿಗುರಿಸುವುದು. ಆದುದರಿಂದಲೇ ಅದನ್ನು 'ಮಿದುಳಿನ ಟಾನಿಕ್' ಎಂದು ಕರೆದವರುಂಟು. ಆಲಸಿಕೆ, ನಿದ್ದೆ, ತೂಕಡಿಕೆ ಮೊದಲಾದ ದೌರ್ಬಲ್ಯಗಳೆಲ್ಲ ಈ ದಿವ್ಯೌಷಧಿಯ ಸೇವನೆಯಿಂದ ಪರಿಹಾರ. ಅದರ ಪ್ರಭಾವದಿಂದ ಹೊಸ ಹಳೆ ಭಾವಗಳೆಲ್ಲ ಸ್ಫುರಿಸತೊಡಗುವವು. ಗೋವಿಂದ ರಾಯರಿಗಾದರೂ ಅಷ್ಟೆ. ಗೋಡೆಗೊರಗಿ ಕುಳಿತ ಅವರು ಹಿಂದಿನ ಮುಂದಿನ ಸ್ಮರಣೆಗಳಲ್ಲೇ ತಲ್ಲೀನರಾದರು.

ಅವರಿಗೆ ಈಗ ೫೫ ವರುಷಗಳು ದಾಟಿವೆ ಮಾತ್ರ. ಸರಕಾರೀ ಲೆಕ್ಕದಂತೆ ಅಷ್ಟು. ಆದರೆ ಜಾತಕವನ್ನು ತೆಗೆದು, ಜನಿಸಿದ ಸಂವತ್ಸರ, ಮಾಸ, ನಕ್ಷತ್ರಗಳನ್ನು ಗುಣಿಸಿದರೆ ಮೂರು ವರುಷ ಹೆಚ್ಚಾದೀತು. ಸಣ್ಣವರಿದ್ದಾಗ ಶಾಲೆಯಲ್ಲಿ ಮೂರು ವರುಷ ಕಡಿಮೆ ಬರೆಸಿದ್ದರು ಅವರ ತಂದೆ. ಏಕೆಂದರೆ ಅವರು ಶಾಲೆಗೆ ಪ್ರವೇಶಿಸುವಾಗಲೇ ಹತ್ತು ಹನ್ನೆರಡು ವರುಷಗಳಾಗಿದ್ದವು. ಈಗ ಆ ವಯಸ್ಸಿನಲ್ಲಿ ಶಾಲೆಗೆ ಕಾಲಿಟ್ಟರೆ ನಕ್ಕಾರು. ನಿಜ. ನಾಲ್ಕೈದು ವರುಷದೊಳಗೆ ಮಕ್ಕಳನ್ನು ಶಾಲೆಗಳಿಗೆ ನೂಕಿ ಬಿಡುವ ತಂದೆ ತಾಯಂದಿರೇ ಹೆಚ್ಚು. "ಅ, ಆ, ಇ, ಈ," ಮೊದಲ್ಗೊಂಡು ಮಕ್ಕಳು ಎಲ್ಲವನ್ನೂ ಶಾಲೆಯಲ್ಲೇ ಕಲಿಯಬೇಕು. ಆದರೆ ೫೦-೬೦ ವರುಷಗಳ ಹಿಂದೆ ಹೀಗಿರಲಿಲ್ಲ. ಶಾಲೆಗಳಿದ್ದುದೇ ವಿರಳ. ನಗರಗಳಲ್ಲೂ ಒಂದೆರಡು ಶಾಲೆಗಳು. ಇದ್ದ ಶಾಲೆಗಳೂ ದೂರ. ವಯಸ್ಸಿಗೆ ಬರುವವರೆಗೆ ಉಸುಕು, ಹಲಗೆಗಳನ್ನು ಉಪಯೋಗಿಸಿ ಮನೆಗಳಲ್ಲೇ ಸ್ವಲ್ಪ ಕಲಿಯುತ್ತಿದ್ದುದು ರೂಢಿ. ಶಾಲೆಗೆ ಸೇರಿದಾಗ ಒಂದೆರಡು ದರ್ಜೆಗಳನ್ನು ಬಿಟ್ಟು ಮೇಲಿನ ದರ್ಜೆಗಳಿಗೆ ಅರ್ಹತೆ ಪಡೆಯುತ್ತಿದ್ದರು. ಆದರೂ ಎಂಟನೇ ಕ್ಲಾಸಿಗೆ ಬಂದಾಗ ಅನೇಕರಿಗೆ ಗಡ್ಡ ಮೀಸೆ ಬರುತ್ತಿತ್ತು. ಮೆಟ್ರಿಕ್ ವರ್ಗದಲ್ಲಿ ಭೀಮಕಾಯರನ್ನೂ ಸಂಸಾರಿಗರನ್ನೂ ಕಾಣ ಬಹುದಾಗಿತ್ತು. ಗೋವಿಂದ ರಾಯರಿಗೂ ಮೆಟ್ರಿಕ್ ಪರೀಕ್ಷೆ ಮುಗಿದಾಗ ೨೫ ವರುಷ ದಾಟಿತ್ತು. ಆ

ಮೇಲೆ ಉದ್ಯೋಗವನ್ನಾರಂಭಿಸಿ, ಈ ೫೫ ವರುಷಗಳ ವರೆಗೂ ದುಡಿದರು ಸರಕಾರೀ ಕಾನೂನಿನನ್ವಯ ಈ ೫೫ಕ್ಕೇ ಅವರು ಸೇವಾನಿವೃತ್ತರಾದರು.

ಹಿಂದೆ ಮೆಟ್ರಿಕ್ ಪಾಸಾದವರು ದೊಡ್ಡ ದೊಡ್ಡ ಸರಕಾರೀ ಹುದ್ದೇದಾರರಾಗಿದ್ದರು. ಕೆಲವರು ಕಲೆಕ್ಟರರಾದುದೂ ಉಂಟು. ಆದರೆ, ಗೋವಿಂದರಾಯರು ಫೇಲಾಗಿದ್ದುದರಿಂದ ಅವರ ಹಣೆಬರಹ ಸ್ವಲ್ಪ ಓರೆಯಾಯಿತು. ಶಾಲಾ ಉಪಾಧ್ಯಾಯರ ಕೆಲಸಕ್ಕೆ ಸೇರಿ, ಒಂದೆರಡು ವರುಷಗಳ ಮೇಲೆ ಟ್ರೇನಿಂಗ್ ಪಡೆದುಕೊಂಡು ಬಂದು ಅದೇ ಕೆಲಸದಲ್ಲಿ ಕೊನೆಯುವರೆಗೂ ಸ್ಥಿರವಾಗಿ ನಿಂತರು. ಕೆಲಸ ಸ್ಥಿರವಾಗಿದ್ದರೂ ಒಂದೇ ಕಡೆ ಸ್ಥಿರಪಟ್ಟ ಇದ್ದಿಲ್ಲ. ಶಾಲಾ ಮಾಸ್ತರನ್ನು ಇಲ್ಲಿಂದ ಅಲ್ಲಿಗೆ ವರ್ಗಾಯಿಸಿ ಮನ ಬಂದಂತೆ ಕುಣಿಸುವ ಅಧಿಕಾರಿಗಳ ಆಟ ಚೆಲ್ಲಾಟ ಹುಚ್ಚಾಟಗಳ ಪರಂಪರೆ ಪ್ರಾಚೀನ ಕಾಲದಿಂದ ನಡೆದು ಬಂದುದು. ಹೆಚ್ಚು ಕಡಿಮೆ ೩೦ ವರುಷಗಳ ತಮ್ಮ ಉಪಾಧ್ಯಾಯ ವೃತ್ತಿಯಲ್ಲಿ ಗೋವಿಂದರಾಯರು ಉಡುಪಿ, ಹಿರಿಯಡ್ಕ, ಮಲ್ಪೆ, ಕಟಪಾಡಿ, ಕಾಪು, ಎರ್ಮಾಳ್, ಪಡುಬಿದ್ರಿ, ಶಿರ್ವ ಮೊದಲಾದ ಉಡುಪಿ ತಾಲೂಕಿನ ಎಲ್ಲ "ಹಾಯರ್ ಎಲಿಮೆಂಟರಿ" ಶಾಲೆಗಳನ್ನು ನೋಡಿದರು. ಆಗಾಗ ತಾಲೂಕಿನಿಂದ ತಾಲೂಕಿಗೆ ನೆಗೆದುದೂ ಇದೆ. ಸೇವಾನಿವೃತ್ತರಾಗುವ ಒಂದು ವರುಷದ ಮೊದಲು ಹುಟ್ಟೂರಿಗೆ ಸಮೀಪವಿರುವ ಉಡುಪಿಗೆ ಮತ್ತೆ ಮರಳಿದರು.

ಹುಟ್ಟೂರು ಬೈಲೂರು. ಉಡುಪಿಯಿಂದ ಸುಮಾರು ಎರಡು ಮೈಲುಗಳ ದಾರಿ. ಸಣ್ಣ ಹಳ್ಳಿ ಬೈಲೂರು. ಪೂರ್ವದಿಂದ ಪಶ್ಚಿಮಕ್ಕೆ ಉದ್ದಕ್ಕೂ ಭತ್ತದ ಬೈಲು ಸಾಲು. ಬೈಲು ಊರು ಆಗಿದ್ದುದರಿಂದಲೇ ಹಳ್ಳಿಗೆ "ಬೈಲೂರು" ಎಂದು ಹೆಸರು ಬಂದಂತೆ ತೋರುತ್ತದೆ. ಈ ಬೈಲು ಗದ್ದೆಗಳ ಎರಡು ಅಂಚುಗಳಲ್ಲೂ ನೀರು ಹರಿವ ತೋಡುಗಳು. ಅವುಗಳ ಒದಿಗಳಲ್ಲಿ ಬೈಲಿನ ಉತ್ತರ ಮತ್ತು ದಕ್ಷಿಣದ ಉನ್ನತ ಸ್ಥಳಗಳಲ್ಲಿ ಅಲ್ಲೊಂದು ಇಲ್ಲೊಂದು ಮನೆಗಳು. ಮನೆಗಳ ಸುತ್ತು ಮುತ್ತು ಬೆಟ್ಟು ಗದ್ದೆಗಳಿರುವುದೂ ಉಂಟು. ಬೆಟ್ಟು ಗದ್ದೆಗಳನ್ನು ದಾಟಿದರೆ ಕುರುಚಲು ಗಿಡಗಳಿಂದ ತುಂಬಿದ ಗುಡ್ಡಗಳು. ಅದನ್ನು ದಾಟಿದರೆ ಮತ್ತೊಂದು ಇಂತಹುದೇ ಹಳ್ಳಿ. ಈ ಹಳ್ಳಿಗಳಲ್ಲಿ ಹಂಚಿನ ಮನೆಗಳು ಕಡಿಮೆ. ಬಲ್ಲಾಳರ ಮನೆ, ಗುತ್ತಿನ ಶೆಟ್ಟರ ಮನೆ, ದೇವಸ್ಥಾನಗಳಿಗಷ್ಟೇ ಹಂಚು. ಉಳಿದ ಮನೆಗಳೆಲ್ಲ ಮುಳಿ ಹುಲ್ಲು ಅಥವಾ

ಛತ್ತದ ಹುಲ್ಲುಗಳಿಂದ ಹೊದಿಸಲ್ಪಟ್ಟಿವೆ. ಗೋವಿಂದರಾಯರ ಮನೆಯ ಮಾಡಿಗೂ ಛತ್ತದ ಹುಲ್ಲೇ.

ಇದು ಅವರ ಸ್ವಂತ ಮನೆಯೇನೂ ಅಲ್ಲ. ಅವರಿಗೆ ಸ್ವಂತ ಮನೆಯಿಲ್ಲ. ಹುಟ್ಟೂರು ಬೈಲೂರೇನೋ ನಿಜ. ಅವರು ಹುಟ್ಟಿದಾಗ ಹಂಚಿನ ಸ್ವಂತ ಮನೆಯೂ ಇದ್ದಿತು. ಆದರೆ ಅವರ ಅಣ್ಣ ತಮ್ಮಂದಿರಿಗೆಲ್ಲ ಬುದ್ಧಿ ಬರುವ ವಯಸ್ಸಿಗೆ ಹಂಚಿನ ಮನೆ ಉಳಿಯಲಿಲ್ಲ. ಹಿರಿಯರೊಂದಿಗೆ ಅವರು ಮಾಡಿದ ಆಸ್ತಿ ಪಾಸ್ತಿಯೂ ಸಾಲದ ಸಮುದ್ರದಲ್ಲಿ ಮುಳುಗಿತು. ಅಣ್ಣ ತಮ್ಮಂದಿರೆಲ್ಲ ಬೆಳೆದ ಮೇಲೆ ಹಕ್ಕಿಗಳಂತೆ ಒಂದೊಂದು ಕಡೆ ಹಾರಿ ಹೋದರು. ತಾಯಿಯೊಂದಿಗೆ ಗೋವಿಂದರಾಯರು ಇದೇ ಊರಲ್ಲಿ ಇರಲು ಬಯಸಿದರು. ಆಸ್ತಿ ನುಂಗಿದ ಒಲ್ಲಾಳರು ಊರಿಂದ ಅವರನ್ನು ಓಡಿಸದೆ, ವಾಸಿಸಲು ಸಣ್ಣ ಗುಡಿಸಲನ್ನು ಕೊಡುವ ಔದಾರ್ಯ ಪ್ರದರ್ಶಿಸಿದರು. ಕಲಿವ ಕಾಲಕ್ಕೆ ತಾಯಿ ಒಬ್ಬಂಟಿಗರೇ ಈ ಮನೆಯಲ್ಲಿ ಜೀವ ಹಿಡಿದುಕೊಂಡು ಬದುಕಿದುದೂ ಉಂಟು. ಸೀತಮ್ಮ ಮನೆಗೆ ಬಂದ ಮೇಲೂ ಕೆಲವು ವರುಷಗಳ ವರೆಗೆ ಅವರು ಬದುಕಿದ್ದರು. ಮೊಮ್ಮಕ್ಕಳು ಮರಿ ಹುಟ್ಟಿ ಬೆಳೆವ ಕಾಲಕ್ಕೆ ಅವರು ಕಣ್ಮುಚ್ಚಿದರು. ಅಂದಿನಿಂದ ಸೀತಮ್ಮನವರೇ ಈ ಮನೆಯ ಒಡತಿಯಾಗಿ ಬಾಳಿ ಬದುಕುತ್ತ ಬಂದಿದ್ದಾರೆ. ಗೋವಿಂದರಾಯರಿಗೆ ಆಗಾಗ ವರ್ಗವಾಗುತ್ತಿದ್ದರೂ ಹೋದಲ್ಲಿ ಹೆಂಡತಿ, ಮಕ್ಕಳ ಗಂಟು ಮೂಟೆಯನ್ನು ಕಟ್ಟಿಕೊಂಡು ಅವರು ತೆರಳುತ್ತಿದ್ದಿಲ್ಲ. ಶಾಲೆಯ ಸಮೀಪದ ದೇವಸ್ಥಾನದ ಪೌಳಿಯಲ್ಲಿ ಕಟ್ಟಿದ ಚಿಕ್ಕ ಕೋಣೆಯೊಂದನ್ನು ಹಿಡಿದು ತಾವೇ ಕೈ ಬಾಯಿ ಸುಟ್ಟುಕೊಂಡಿದ್ದರು. ವಾರದ ಕೊನೆಯ ರಜಾ ದಿನಗಳೆರಡರಲ್ಲಿ ಅವರ ಸವಾರಿ ಊರಿಗೆ ಬರುತ್ತಿತ್ತು. ಹೀಗೆ ಇಷ್ಟು ವರುಷಗಳ ವರೆಗೆ ಅವರ ಸಂಸಾರ ರಥ ಸಾಗಿತು.

ಇಷ್ಟರ ವರೆಗೆ ಚಕ್ರ ತಿರುಗಿತು. ನಿಜ. ಒಮ್ಮೊಮ್ಮೆ ಗಾಲಿ ಕೆಸರಿನಲ್ಲಿ ಹೂತು ಹೋದುದೂ ಇದೆ. ಕೊರಕಲು, ಕಲ್ಲು ಮುಳ್ಳು, ಕಾಡುನಾಡು, ಏರು ತಗ್ಗುಗಳ ದಾರಿಯನ್ನು ತುಳಿಯಬೇಕಾಗಿತ್ತು. ಮಕ್ಕಳುಮರಿ, ಅವರ ವಿದ್ಯೆ, ಮದುವೆ ಮುಂಜಿ, ಹುಟ್ಟು ಸಾವುಗಳ ಸುಖ ದುಃಖದ ತೆರೆಗಳ ಇಳಿತ ಭರತಗಳನ್ನು ಅನುಭವಿಸಿದುದುಂಟು . ಸುಖದ ನೆರಳಲ್ಲಿ ದುಃಖ ಕರಿ ಮುಸುಕನ್ನು ಹಾಕಿಕೊಂಡೇ ಅಡಗಿ ಕಾಡುತ್ತಿತ್ತು. ಕಷ್ಟದ ಮಡುವಿನಲ್ಲಿ ತೊಳಲಿದಾಗ

ಸಂತೋಷದ ಹೆಣ್ಣು ಕಣ್ಣು ಮುಂದೆ ಕುಣಿದು ಮುಗುಳು ನಗೆ ಬೀರಿ ಪರ್ಷ ನೀಡಿದುದುಂಟು. ಯಾವುದೂ ಶಾಶ್ವತವಾಗಿರಲಿಲ್ಲ. ಉದ್ಯೋಗವಿದ್ದು ದೊಂದು ಸಮಾಧಾನ. ಯೌವನ ವಿದ್ದುದೊಂದು ಆಶೆ. ಅವುಗಳ ಬಲವೇ ಎಲ್ಲವನ್ನೂ ಸ್ಥೈರಿಸುವ ಬಲ. ಬಂಡೆಗಲ್ಲಿನಂತೆ ಅಚಲ ಧೈರ್ಯ ಉತ್ಸಾಹಗಳನ್ನು ಕೊಟ್ಟುವು. ಆದರೆ ಈಗ ಎರಡೂ ಕೈ ಬಿಟ್ಟಿವೆ. ತಲೆ ಹಣ್ಣಾಗಿದೆ. ಕೈ ಕಾಲುಗಳು ಸಣ್ಣಾಗಿವೆ. ಕಣ್ಣಿನಲ್ಲಿ ತೇಜವಿಲ್ಲ. ಮೈಯಲ್ಲಿ ರಕುತದ ಛಾಯೆ ಕುಂದಿದೆ. ಮೊದಲಿನ ದಾರಿಯಲ್ಲಿ ಹತ್ತು ಮೈಲು ನಡೆದೇನು, ಹತ್ತು ವರುಷ ನಡೆದೇನು ಎಂಬ ಆತ್ಮ ವಿಶ್ವಾಸವಿಲ್ಲ. ಇನ್ನು ಕೆಲವು ವರುಷಗಳ ಮಾಸ್ತ್ರ ಕೆಲಸವನ್ನೇ ಮುಂದರಿಸುವುದು ದುಸ್ತರವಿದ್ದಿಲ್ಲ. ದೊಡ್ಡ ದರ್ಜೆಗಳಲ್ಲದಿದ್ದರೆ ಬಾಲಕ ಕೀಲಕ ದರ್ಜೆಯ ಹುಡುಗರಿಗೆ "ಕಾ, ಕಾ" ಹೇಳಿಕೊಡಬಹುದಿತ್ತು. ಆದರೆ ೫೫ಕ್ಕೆ ನಿವೃತ್ತಿ ಎಂಬ ಕಾನೂನನ್ನು ಮಾಡಿ ಹಾಕಿದ್ದಾರಲ್ಲ! ೫೫ನೇ ವಯಸ್ಸಿಗೆ ಮನುಷ್ಯ ಮುಟ್ಟಿದೊಡನೆಯೇ ಅವನಿಗೆ ಅಪ್ಪಣೆ! ಉದ್ಯೋಗದಿಂದ ನೂಕಿ ಬಿಡುವರು. ೫೫ರ ಮೇಲೆ ಯಾವ ದಾರಿ? ಈ ಇಳಿ ವಯಸ್ಸಿನ ದಾರಿ ಹಿಡಿದಾಗ ಜೀವನಕ್ಕೆ ಯಾವ ಹೊಸ ದಾರಿ? ಯಾವ ದಾರಿ ಹಿಡಿಯಲು ಹಿಡಿ ಹಣ ಬೇಕು. ಜೀವನ ನಿರ್ವಾಹ ಮಾಡುವುದೇ ಶಾಲಾ ಮಾಸ್ತ್ರರಿಗೊಂದು ಅಶ್ವಮೇಧ ಯಾಗ ಮಾಡಿದಂತೆ. ಜೀವ ಉಳಿಸುವ ಪ್ರಶ್ನೆಯೇ ಬಗೆಹರಿಯದಿದ್ದಾಗ ಹಣ ಉಳಿಸುವ ಆಶೆ ಸಫಲವೆಲ್ಲಿ? ಇನ್ನಿತರ ಸರಕಾರೀ ನೌಕರರಂತೆ ಶಾಲಾ ಮಾಸ್ತ್ರರಿಗೆ ಪೆನ್ಶನ್ ಸೌಕರ್ಯವಿದ್ದರೆ ಅದೊಂದು ಮಾತು ಬೇರೆ. ಅವರ ಹಣೇ ಬರಹಕ್ಕೆ ಸರಿಯಾಗಿ "ಪ್ರಾವಿಡೆಂಟ್ ಫಂಡ್"! ಅದೂ ಪೂರಾ ದೊರೆಯುತ್ತಿದ್ದರೆ ಸಾವಿರಾರು ರೂಪಾಯಿಗಳಾದರೂ ಬರುತ್ತಿತ್ತು. ಮಕ್ಕಳ ಮದುವೆ ಮುಂಜಿಗಳಿಗಾಗಿ ಆ ನಿಧಿಯಿಂದಲೇ ಸಾಲ ಪಡೆದು ತಿಂದು ತೇಗಿದುದರಿಂದ ಉಳಿದುದು ಬರೇ ಐದು ನೂರು.

ಐದು ನೂರು ಐದು ತಿಂಗಳು ಬಂದೀತೆ? ಕುಟುಂಬವನಿಗೆ ಕುಡಿಕೆ ಹಣ ಸಾಲದು. ಹತ್ತು ಮುಡಿ ಅಕ್ಕಿ ಬೆಳೆ ಬರುವ ಒಂದು ಚಿಕ್ಕ ಆಸ್ತಿಯ ಮೇಲೆ ಇಷ್ಟೇ ಹಣ ಹಾಕಲಾದೀತೇ? ಉಡುಪಿಯ ತೆಂಕ ಪೇಟೆಯಲ್ಲಾಗಲಿ, ಸಂತೆ ಕಟ್ಟೆಯಲ್ಲಾಗಲಿ ಒಂದು ಸಣ್ಣ ನಸ್ಯದ ಅಂಗಡಿ ತೆರೆಯಲು ಬರಬಹುದೇ? "ರಾಮಕೃಷ್ಣಾ! ರಾಮಕೃಷ್ಣಾ"!.

"ರಾಮಕೃಷ್ಣಾ! ಮುಕುಂದಾ, ಮಾಧವಾ, ಮಧು ಸೂಧನಾ" ಎಂದು ಎರಡೂ ಅಂಗೈಗಳನ್ನು ಕೆಳಗೆ ಮೇಲೆ ತಿರುಗಿಸುತ್ತಾ ಸೀತಮ್ಮ ಜಗಲಿಗೆ ಬಂದು, "ಬರೇ ಅಷ್ಟೇ ಏಕೆ? ಕೈಯಲ್ಲಿ ತಾಳ ತಂಬೂರಿ ತೆಗೆದುಕೊಂಡು ಬಿಡಿ. ಪಸಂದವಾಗುತ್ತದೆ" ಎಂದು ಮಾತನ್ನೆಸೆದರು.

ಗೋವಿಂದರಾಯರು ಒಮ್ಮೆಂದೊಮ್ಮೆ ಹೌ ಹಾರಿ, "ಅಲ್ಲಿಗೆ ಬಂದವನೇ"! ಎಂದರು.

"ಅದೇ ಹೇಳಿದೆನಲ್ಲ. ರಾಮ ಕೃಷ್ಣ ಎಂದು ಬರೇ ಬಾಯಲ್ಲಿ ಆಡುತ್ತ ಕುಳಿತುಕೊಳ್ಳುವುದು ಬೇಡ; ತಾಳ ತಂಬೂರಿಯನ್ನು ತೆಗೆದು ಕೊಳ್ಳಿಂತ. ಆವಾಗಿಂದ ನಾನು ಒಳಗಿಂದಲೇ ಇಣಿಕಿ ನೋಡುತ್ತಿದ್ದೇನೆ. ಆಕಾಶವೇ ಕಳಚಿ ಬಿದ್ದವರಂತೆ ತಲೆ ಮೇಲೆ ಕೈ ಇಟ್ಟುಕೊಂಡು ಯೋಚಿಸುತ್ತಿದ್ದಾರೆ. ಏನು ಅಂಥಾ ಮಹಾ ಯೋಚನೆ "

"ಅದನ್ನೇ ಯೋಚಿಸುತ್ತಿದ್ದೇನೆ. ಏನು ಮಾಡೋಣ, ಎಲ್ಲಿಗೆ ಹೋಗೋಣವೆಂದು. ಎಲ್ಲಕ್ಕೂ ನೀನೊಬ್ಬಳಿದ್ದೀಯಲ್ಲ ಮಾರಾಯತಿ. ಅದೇ ಬಂದಿರುವುದು ಪೇಚು."

"ಹೋ, ಹೋ, ನನ್ನಿಂದ ನಿಮಗೆ ಪೇಚು. ನಾನು ಅಡ್ಡ ಬಂದೆ ಅಲ್ಲ! ಅದಕ್ಕಾಗಿ ಇಷ್ಟು ಚಿಂತೆ! ನನಗೇನು ಮಕ್ಕಳು ಮರಿ ಇಲ್ಲವೆಂದು ಮಾಡಿದಿರೇನು?"

"ಹೋ, ಹೋ, ಇದ್ದಾರೆ. ಅತಿರಥರು, ಮಹಾರಥರು, ಕುಂಭಕರ್ಣ ವಿಭೀಷಣರು! ತೊಲೆಭಾರ ತೂಗಿಸಿದ್ದಾರೆ ನಿನಗೆ!"

"ಕುಂಭವಿರಲಿ, ಕರ್ಣನಿರಲಿ, ತೊಲೆಭಾರ ತೂಗಿಸಬೇಕೆಂದು ನಾನು ಇಷ್ಟರ ವರಗೆ ಬಯಸಿಲ್ಲ; ಇನ್ನು ಬಯಸುವುದೂ ಇಲ್ಲ. ದೊಡ್ಡ ಮಗ ರಾಜಾ ಇದ್ದಾನೆ. ಅವನ ಹೆಂಡತಿ ಮಕ್ಕಳ ಚಾಕರಿ ಮಾಡಿದರೆ ಒಂದು ಮುಷ್ಠಿ ಅನ್ನ ಹಾಕದೇ ಇರಲಾರ."

"ಎಲ್ಲ ನಾಲ್ಕು ದಿನ"

"ನಾಲ್ಕು ದಿನ ಇರಲಿ; ಆರು ದಿನ ಇರಲಿ. ಅವನು ಒದ್ದು ಹೊರಗೆ ಹಾಕುವ ತನಕ ಹೋಗುವುದಿಲ್ಲ. ಹೊರಗೆ ಹಾಕಿದಾಗ ನೋಡಿಕೊಂಡ. ಶಿವರಾಯನಲ್ಲಿ ನಾಲ್ಕು ದಿನ ತೆರಳುತ್ತೇನೆ.. "ಮನೆಯೊಳಗೆ ಯಾರಿಲ್ಲ. ಹೆಂಡತಿ

ಯೊಬ್ಬಳೇ. ಬಾರಮ್ಮ" ಎಂದು ಈಗಲೇ ಅವನು ಬಾಯಿ ಬಾಯಿ ಬಿಡುತ್ತಿದ್ದಾನೆ."

"ಅವನಾ? ಪಕ್ಕಾ ವ್ಯಾಪಾರಿ. ಕಾಸಿಗೆ ಕಾಸು ಗಂಟು ಹಾಕುವವನು."!

"ಅಷ್ಟೊತ್ತಿಗೆ ಹರಿಗೆ ಪರೀಕ್ಷೆ ಮುಗಿದು ಏನಾದರೂ ಕೆಲಸ ದೊರೆ ತೀತು. ಮೋಹನನೂ ದೊಡ್ಡವನಾಗುತ್ತಾನೆ"

"ಅಂತೂ ಮನಸಿನೊಳಗೆ ಒಹಳ ಮಂಡಿಗೆ ತಿನ್ನುತ್ತಿದ್ದೀ. ಆದರೆ ಮೋದರೆ ಹತ್ತು ಬೆಳೆದರೆ ಎಂಬ ಗಾದೆ ನಿಂಗೊತ್ತಿಲ್ಲ"

ಗೊತ್ತಿಲ್ಲವೆಂದು ನೀವು ತಿಳಿದುಕೊಂಡಿದ್ದೀರಿ. ಎಲ್ಲ ಗೊತ್ತಿದೆ. ಸುಮ್ಮಗೆ ೩೦ ವರುಷ ಆಗಿಲ್ಲ. ನಾಲ್ಕು ಗಂಡು ಎರಡು ಹೆಣ್ಣು ಮಕ್ಕಳು ದಾರಿಯಲ್ಲಿ ಸಿಕ್ಕಿಲ್ಲ. ಅವನ್ನು ಒಬ್ಬರ ಕೈಗೆ ಹಾಕಿದ ಮಾತ್ರಕ್ಕೆ ಕರುಳು ಕಡಿಯಲಿಲ್ಲ. ಗುಲಾಬಿ ಮನೆಯಲ್ಲಿ ಹತ್ತು ದಿನಗಳಿದ್ದರೆ ಇನ್ನೊಂದು ಹತ್ತು ದಿನ ಕಮಲಿ ಮನೆಗೆ ಹೊಕ್ಕಿದರೆ ತಪ್ಪೇನು? ನನ್ನ ಒಗ್ಗೆ ನೀವು ಗುರುಗುಂಜಿಯಷ್ಟು ವ್ಯಸನ ಮಾಡಬೇಡಿ. ನೋಡಿ. ಬಂದಿರುವುದು ನಿಮಗೆ ಪಜೀತಿ. ಕೈಯಲ್ಲಿ ಕಾಸಿಲ್ಲ ಮೈಯಲ್ಲಿ ಬಲವಿಲ್ಲ ಎಂದನ್ನುತ್ತಾರಲ್ಲ ಪುರಂದರ ದಾಸರು"

ದಾಸರ ಹಾಡಿನ ಈ ಪಲ್ಲವಿ ಕೇಳಿ ಗೋವಿಂದರಾಯರು ಮುಗುಳು ನಕ್ಕರು. "ಕೈಯಲ್ಲಿ ಕಾಸಿಲ್ಲಂತ ಹಂಗಿಸಬೇಡ ನೋಡು. ಫಂಡಿನ ಹಣ ಬಂದಿದೆ. ಸಂತೆ ಕಟ್ಟೆಯಲ್ಲೊಂದು ನಸ್ಯದ ಅಂಗಡಿ ತೆಗೆದು ಬಿಡುತ್ತೇನೆ."

"ನಸ್ಯದ ಅಂಗಡಿ ತೆರೆಯುತ್ತೀರಿ! ನಾನು ಜೀವದಿಂದಿರುವವರೆಗೆ ಅದೆಲ್ಲ ಸುಳ್ಳು. ಲಗ್ನವಾಗಿ ಇಷ್ಟು ವರುಷವಾದರೂ ಒಂದು ಬಳೆ ಮಾಡಿಸಿಲ್ಲ, "ಫಂಡಿನ ಹಣ ಬರಲಿ. ಮಾಡಿಸುತ್ತೇನೆ" ಎಂದು ಹಿಂದೊಮ್ಮೆ ಹೇಳಿದ್ದೀರಿ."

"ಆಯ್ತು. ಪಸಂದ ಆಯ್ತು. ಫಂಡಿನ ಹಣದಿಂದ ನಿನಗೆ ನಾಲ್ಕು ಬಳೆ ಮಾಡಿಸಿದರಾಯ್ತು! ನಿನಗೆ ಇನ್ನು ಯೌವನ ಉಕ್ಕುತ್ತದೆ.! ಮೊನ್ನೆ ಮೊನ್ನೆ ಲಗ್ನ ಆಗಿದೆ.! ಇದ್ದ ಆರು ಕಾಸು ನಿನಗೆ ಕೊಡುತ್ತೇನೆ; ನೀನು ಮಕ್ಕಳ ಮನೆಗೆ ಹೋಗುತ್ತೀ. ಮತ್ತೆ ನಾನೆಲ್ಲಿ ಕಾಶಿಗೆ ಹೋಗಲಿ?"

"ಕಾಶಿಗೆ ಹೋಗುತ್ತೀರಾ? ಉಡುಪಿಯಲ್ಲಿ ಒಬ್ಬಳು ಕಾಶಿ ಇದ್ದಾಳಲ್ಲ?" ಎಂದು ಸೀತಮ್ಮನವರು ಹೇಳಿ ನಕ್ಕರು.

"ಹೌದು. ನೀನು ಹೇಳಿದುದು ನಿಜ" ಎಂದ ಗೋವಿಂದರಾಯರು ಪುನಃ
ಒಂದು ಚಿಟಿಕೆ ನಸ್ಯ ಏರಿಸಿ ಹೇಳಿದರು. "ಹಾಂ, ಆ ಕಾಶಿ ಕತೆ ನಿನಗೆ ಹೇಳಿಲ್ಲ
ನೋಡು. ಮರೆತು ಬಿಟ್ಟೆ. ಮೊನ್ನೆ ಆದಿತ್ಯವಾರ ನಾನು ಶ್ರೀ ಕೃಷ್ಣ ದೇವಸ್ಥಾ
ನದಿಂದ ಅದೇ ದಾರಿಯಿಂದ ಬಂದೆ. ನಸ್ಯ ಬೇಕಾಗಿತ್ತು. ಅವಳ ಅಂಗಡಿಗೆ ತೆರ
ಳಿದೆ. ಮಾತಿಗೆ ಮಾತು ಬಂದಾಗ, "ಮಾಸ್ಟ್ರೆ, ನಿಮಗೆ ಪೆನ್ಸಿಲ್ ಆಗಿದೆಯಂತಲ್ರಿ
ಹೌದೇನ್ರೀ?" ಎಂದು ಕೇಳಿದಳು. ಹೌದು, ಕಾಶಮ್ಮ. ಬರೆಯಲಿಕ್ಕೆ ಬೂಕೂ
ಇಲ್ಲ. ಏನು ಮಾಡೋಣ. ಬೇರೆ ಕೆಲಸವೂ ಇಲ್ಲ" ಎಂದೆ.

ಸೀತಮ್ಮನವರಿಗೆ ನಗು ತಡೆಯಾಗಲಿಲ್ಲ. ಸೆರಗಿನ ತುದಿಯನ್ನು ಬಾಯಿಗೆ
ತಂದು ಕೊಂಡರು.

ಗೋವಿಂದರಾಯರು ನಗುವಿನ ನಡುವೆ ಮಾತು ಮುಂದುವರಿಸಿ
"ಕಾಶಮ್ಮ, ನಸ್ಯ ಕೊಡುವ ಕೆಲಸ ನನಗೆ ಕೊಟ್ಟು ಬಿಡು. ನನಗೂ
ಹೊತ್ತು ಹೋಗುವುದಿಲ್ಲ" ಎಂದೆ. 'ಅದಕ್ಕೇನಡ್ಡಿ ಮಾಸ್ಟ್ರೇ. ನನಗೆ ಪರಮ
ಗುಣ" ಎಂದು ಬಾಯಿ ಅಗಲಿಸಿದಳು''

ಸತೀತ್ವದ ಅಸೂಯೆಯ ಕಿಡಿ ಸೀತಮ್ಮನವರ ಎದೆಯಲ್ಲಿ ಒಂದು ಕ್ಷಣ
ಮಿಂಚಿ, " ಊಟಕ್ಕೆ ಅವಳಲ್ಲೇ ಹೋಗಬೇಕಾದೀತು." ಎಂದರು.

"ಹಾಂ, ಅದಕ್ಕೇಕೆ ಚಿಂತೆ ಶ್ರೀಕೃಷ್ಣನಿರುವ ತನಕ. ದಿನಾ ಭೋಜನ
ಶಾಲೆಗೆ ತೆರಳಿದರಾಯಿತು.."

"ನಿಮ್ಮೊಡನೆ ಮಾತನಾಡುತ್ತ ಕುಳಿತರೆ ಮಂಗು ಮದಿಮಾಳಾದಿತು
ಬೇಳೆ ಬೇಯಿಸಲು ಹಾಕಿ ಬಂದಿದ್ದೇನೆ. ಏನಾಯಿತೋ ಏನೋ" ಎಂದುಸುರಿ
ಸೀತಮ್ಮ ಒಳಗೆ ಹೊರಳುವಷ್ಟರಲ್ಲಿ "ಅಮ್ಮಾ, ಅಮ್ಮಾ, ಯಾರೋ ಬರುತ್ತಿ
ದ್ದಾರೆ" ಎಂದು ಕೂಗುತ್ತಾ ಎಂಟು ಹತ್ತು ವರುಷದ ಮೋಹನ ಓಡಿ ಬಂದ.

"ಯಾರೋ? ಯಾರು?" ಎಂದು ಸೀತಮ್ಮನವರು ಜಗಲಿಯ ಅಂಚಿಗೆ
ಬಂದು ನಿಲುಕಿದರು. ಗೋವಿಂದರಾಯರು ಒಳಗೆ ತೆರಳಿ ಸಣ್ಣ ಧೋತರವ
ನ್ನುಟ್ಟು ಕೊಳ್ಳುತ್ತಾ ಅಂಗಳದ ವರೆಗೆ ಬಂದರು. ಅಂಗಳದ ಮುಂದೆ ತೆಂಗು
ಕಂಗುಗಳ ಸಣ್ಣ ತೋಟ. ಅವುಗಳ ಒಳಗಿಂದ ಆಚೆಯ ಭತ್ತದ ಬೈಲನ್ನು
ಕಾಣಲು ಸಾಧ್ಯ. ಬೇಸಿಗೆಯಾಗಿದ್ದುದರಿಂದ ಗದ್ದೆಯಲ್ಲಿ ಭತ್ತದ ಬೆಳೆಯಿದ್ದಿಲ್ಲ.
ಕೊಯ್ದ ಭತ್ತದ ಬುಡಗಳಷ್ಟೇ ಇವೆ. ಆದುದರಿಂದ ಗದ್ದೆಯ ಒಣಗಿದ

ಹುಣಿಸೆ ಮೇಲಿಂದ ಜನ ಬರುತಿದ್ದುದು ಗೋವಿಂದರಾಯರ ಮನೆಯಂಗಳ ದಿಂದಲೇ ಕಾಣಲು ಶಕ್ಯ. ಅವರೂ ಕಂಡರು. ಮೋಹನ ಹೇಳಿದಂತೆ ಯಾರೋ ನಡೆದು ಬರುತ್ತಿದ್ದರು. ದೊಡ್ಡ ಆಳು. ಧೋತರದ ಚುಂಗು ಕಾಲಿನ ಪಾದದ ವರೆಗೂ ಹರಿ ಹಾಯುತ್ತಿದೆ. ಮೇಲೆ ಕೋಟು. ತಲೆಯ ಮೇಲೆ ಏನೂ ಇಲ್ಲ. ಅವನ ಬೆನ್ನ ಹಿಂದೆ ಟ್ರಂಕು ಮತ್ತು ಹಾಸಿಗೆಯನ್ನು ಹೊತ್ತುಕೊಂಡು ಬರುವ ಆಳು. ಈ ದೃಶ್ಯವನ್ನು ನೋಡಿದ ಸೀತಮ್ಮನವರು, "ಬಹುಶಃ ರಾಜಾ ಬಂದಾ ಎಂದು ತೋರುತ್ತದೆ. ನಡಿಗೆ ಮಾತ್ರ ಹಾಗೇ ಇದೆ. ಮುಂಜಾನೆಯಿಂದ ಕಾಗೆ ಕೂಡಾ "ಕ್ರಾಂ. ಕ್ರಾಂ" ಎಂದು ಕರೆಯುತ್ತಿತ್ತು." ಎಂದರು.

"ನಿನಗದೇ ಚಿಂತೆ. ನಾನು ಮೊದಲೇ ಹೇಳಿದ್ದೆನಲ್ಲ. ಈಗ ಅವನು ಬರಲು ರಜೆ ಇದೆಯೇನು? ಬಂದರೆ ಹೆಂಡತಿ ಮಕ್ಕಳನ್ನು ಯಾಕೆ ಬಿಟ್ಟು ಬರುತ್ತಾನೆ. ನಿನ್ನದು ಅಧಿಕ ಪ್ರಸಂಗ" ಎಂದು ಗೋವಿಂದರಾಯರು ಪ್ರತ್ಯುತ್ತರ ಕೊಟ್ಟರು. ಮೋಹನ ಮಾತ್ರ ನೋಡುತ್ತ ನಿಂತಿರದೆ ತೋಟದೊಳಗಿಂದ ನುಸುಳಿ, ಬೈಲು ಸೇರಿದ. ಕೆಲವು ನಿಮಿಷಗಳಾದ ಮೇಲೆ ಜೀವ ಬಿಡುವವರಂತೆ ಶ್ವಾಸ ಬಿಡುತ್ತಾ ಓಡಿ ಬಂದು "ದೊಡ್ಡಣ್ಣ ಬಂದ. ಹೌದು, ದೊಡ್ಡಣ್ಣ!" ಎಂದುಸುರಿದ. "ಹಾಲನ್ನು ಒಲೆಯ ಮೇಲಿಟ್ಟು ತುರುತ್ತೇನೆ" ಎಂದು ಸೀತಮ್ಮನವರು ನಾಲ್ಕು ಹೆಜ್ಜೆಗಳಲ್ಲೇ ಮನೆ ಸೇರಿದರು. ಹಾಲು ಹೊರಗೆ ಅವರು ತರುವದಕ್ಕೂ "ಏನಮ್ಮ?" ಎಂದು ಮಗ ಕೇಳುವದಕ್ಕೂ ಸರಿ ಹೋಯ್ತು.

# ೨ನೆಯ ಅಧ್ಯಾಯ

ರಾಜಾ ಅವರ ಹಿರಿ ಮಗ. ರಾಘವ, ರಾಘವೇಂದ್ರ ಮೊದಲಾದವುಗಳೆಲ್ಲ ಎಳೆ ವಯಸ್ಸಿನ ಅವನ ಸರ್ವ ನಾಮಗಳು. ಶಾಲೆಯಲ್ಲಿ ಹೆಸರು ದಾಖಲು ಮಾಡಿಸಿದುದು ಮಾತ್ರ ರಾಘವೇಂದ್ರನೆಂದು. ಆದರೆ ನಾಮಕರಣ ಮಾಡಿದಂದಿನಿಂದಲೂ ಅಚ್ಚು ಮೆಚ್ಚಿಂದ 'ರಾಜಾ' ಎಂದೇ ಕರೆಯುತ್ತಿದ್ದಾರೆ. ಅವನಿಗೀಗ ಮೂವತ್ತು ವರುಷವಾಗಿದ್ದರೂ 'ರಾಜಾ' ಎಂದು ಸಂಬೋಧಿಸಲು ಗೋವಿಂದರಾಯರಿಗೆ ಸಂಕೋಚವಾಗುವುದಿಲ್ಲ. ಮಗ ತನಗಿಂತ ಒಂದು ಮೊಳ ಎತ್ತರ, ಎರಡಂಗುಲ ದಪ್ಪ ಬೆಳೆದು ತಂದೆಯ ಸರಿಸಾಟಿಯಾಗಿದ್ದರೂ "ರಾಜಾ" ಎಂದು ಕರೆಯಲು ಸೀತಮ್ಮನವರಿಗೆ ಲಜ್ಜೆಯಾಗುವದಿಲ್ಲ. ಅವನು ಮನೆಗೆ ಬಂದ ಮೇಲೆ, "ರಾಜಾ, ರಾಜಾ" ಎಂದಂದುಕೊಂಡು ನೂರು ಸಲ ಮನೆಯ ಒಳಗಿಂದ ಹೊರಗೆ ಹೊರಗಿಂದ ಒಳಗೆ ಸುತ್ತಿ ಸುಳಿದರು. "ಮಾಣಿ ವಿಜಯಾ ಹೇಗಿದ್ದಾನೆ? ಪುಟ್ಟ ಪುಟ್ಟ ಮಾತನಾಡುತ್ತಾನೋ?" ಎಂದು ಒಮ್ಮೆ ಕೇಳುವರು, "ಸುಭಾಷಿಣಿ ಚೆನ್ನಾಗಿದ್ದಾಳಾ? ಬಂದಾಗ ಅವಳನ್ನು ಕರೆದುಕೊಂಡು ಬರಬಹುದಿತ್ತು" ಎಂದು ಮತ್ತೊಮ್ಮೆ ಸೊಸೆಯ ಮಾತನ್ನೆತ್ತುವರು. ತಾಯಿ ಮಗನದ್ದೇ ರಾಮಾಯಣ. ಅಣ್ಣ ತಂದಿದ್ದ ಕಲ್ಲು ಸಕ್ಕರೆ ದ್ರಾಕ್ಷಿಗಳನ್ನು ಮಂಗನಂತೆ ಬಾಯಿ ತುಂಬಾ ತುರುಕಿಸಿಕೊಂಡ ಮೋಹನ ಅತ್ತಿಂದಿತ್ತ ಕುಣಿಯುತ್ತಿದ್ದ. ಗೋವಿಂದರಾಯರಿಗೆ ನಸ್ಯದ ಹಂಬಲ. ಹಳೇ ಬರುಡೆಗಳಲ್ಲಿ ಅವನು ತಂದ ಪೊಟ್ಣ ಬಿಚ್ಚಿ ತುಂಬಿಸಲು ಆರಂಭಿಸಿದರು. ಒಂದು ಚಿಟಿಕೆ ಏರಿಸಿ, "ಅವ್ವಲ್, ಅವ್ವಲ್ ಪೊಡಿ. ಉಡುಪಿದ್ದಲ್ಲ. ಇಲ್ಲಿ ಹೊಗೆ ಸೊಪ್ಪು ಕರಿ ಮಾಡಿಬಿಡುತ್ತಾರೆ. ಸರಿಯಾಗಿ ತುಪ್ಪ ಸುಣ್ಣವನ್ನು ಬೆರಸುವದಿಲ್ಲ. ಎಲ್ಲಿ ಮಂಗಳೂರಿಂದ ತಂದಿಯಾ?' ಎಂದು ನಡುವೆ ಪ್ರಶ್ನಿಸಿದರು.

"ಹೌದು. ಅವಳೂ ತವರು ಮನೆಗೆ ತೆರಳದೆ ಬಹಳ ಸಮಯವಾಗಿತ್ತು ಮಗುವನ್ನು ನೋಡಬೇಕೆಂದು ಅಲ್ಲಿ ಬಹಳ ಆಸೆ ಪಡುತ್ತಿದ್ದರು. ಹೇಗೂ

ನಾಲ್ಕು ದಿನ ರಜೆ ತೆಗೆದುಕೊಂಡಿದ್ದೆ. ಒಬ್ಬಳನ್ನೇ ಬಿಟ್ಟು ಬರುವುದರ ಬದಲು ಮಂಗಳೂರಿಗೆ ಕಳಿಸಿ ಬಂದೆ."

" ನಾಲ್ಕೇ ದಿನ ರಜೆ."? ಎಂದು ಸೀತಮ್ಮನವರು ಉದ್ಗಾರ ತೆಗೆದರು.

"ಅಯ್ಯೋ ಅಷ್ಟು ದೊರೆತುದೂ ಪುಣ್ಯ. ಒಂದು ಕ್ಷಣ ಪುರುಸೊತ್ತಿಲ್ಲ. ಯಾವಾಗಲೂ ಸರ್ಕೀಟ್. ಒಂದು ವಾರ ಬೆಳ್ತಂಗಡಿಯಲ್ಲಿದ್ದರೆ ಮೂರುವಾರ ಹಳ್ಳಿಗಳಲ್ಲಿ ಸಂಚಾರ."

"ಅಂಥ ಕೆಲಸವೇನು?" ಎಂದು ಯಾರೂ ಕೇಳಲಿಲ್ಲ. ರಾಜನ ಕೆಲಸದ ಆದಿ ಪುರಾಣಗಳೆಲ್ಲ ಅವರಿಗೆ ಗೊತ್ತು. ಮೊದಲು ಅವನು ತಾಲೂಕು ಪಂಚಾಯತ್ ಬೋರ್ಡ್ ಇಲಾಖೆಯಲ್ಲಿ ಗುಮಾಸ್ತನಾಗಿದ್ದ. ಆ ಮೇಲೆ ಪಂಚ್ಯಾತ್ ಸುಪರ್‌ವೈಜರ್ ಕೆಲಸ ಲಭಿಸಿತು. ಪುತ್ತೂರು ತಾಲೂಕಿನ ಬೆಳ್ತಂಗಡಿ ಅವನ ಕೇಂದ್ರ. ಅದರ ಸುತ್ತು ಮುತ್ತಲಿನ ಹಳ್ಳಿಗಳೆಲ್ಲ ಅವನ ಕಾರ್ಯ ಕ್ಷೇತ್ರ. ಈ ಸಣ್ಣ ಪಟ್ಟಣಕ್ಕೆ ಪುತ್ತೂರು, ಮಂಗಳೂರಿಂದ ಮೋಟಾರ್ ಸೌಕರ್ಯವಿದೆ. ಬೆಳ್ತಂಡಿ ಮಾರ್ಗವಾಗಿ ಚಾರ್ಮಾಡಿ ವರೆಗಿನ ಘಾಟಿ ಮೋಟಾರ್ ಲೈನ್ ಕೂಡಾ ಇದೇ. ಬೆಳ್ತಂಗಡಿಯಿಂದ ಚಾರ್ಮಾಡಿಗೆ ತೆರಳುವ ದಾರಿಯಲ್ಲೇ ಉಜಿರೆ, ನಿಡಿಗಲ್, ಮುಂಡಾಜೆಗಳು ಸಿಗುವವು. ಹಳ್ಳಿಗಳೆಂದರೆ ಹಳ್ಳಿಗಳಲ್ಲ. ಪೇಟೆಗಳೆಂದರೆ ಪೇಟೆಗಳಲ್ಲ. ರಸ್ತೆಯ ಬದಿಯಲ್ಲಿ ಸಾಲಾಗಿ ಹತ್ತಿಪ್ಪತ್ತು ಅಂಗಡಿ ಮತ್ತು ಮನೆಗಳು. ಅಷ್ಟೆ. ಈ ಮಂಗಳೂರು-ಚಾರ್ಮಾಡಿ ರಾಜ ಮಾರ್ಗದ ತೆಂಕು ದಿಕ್ಕಿನಲ್ಲಿ ನೆರಿಯ, ಧರ್ಮಸ್ಥಳ ಊರುಗಳು. ಬಡಗು ಬದಿಯಲ್ಲಿ ಪಶ್ಚಿಮ ಘಟ್ಟ ಸಾಲು ಮತ್ತು ಈ ಸಾಲಿನಲ್ಲಿ ಕುದುರೆ ಮುಖ, ಎಳ್ನೀರ್ ಘಾಟಿ ಮತ್ತು ಬಲ್ಲಾಳ ರಾಯದುರ್ಗ ಈ ಮೂರು ಉನ್ನತ ಶಿಖರಗಳು. ಅವುಗಳ ನೆರಳಲ್ಲಿ ಬೆಳೆದಿರುವ ನಾವೂರು, ಇಂದಬೆಟ್ಟು, ಬಂಗಾಡಿ, ಮಿತ್ತಬಾಗಿಲ್, ಕಡಿರುದ್ಯಾವರ ಗ್ರಾಮಗಳು. ದೂರದಿಂದ ಕಂಡಾಗ ಎಲ್ಲ ಮಲೆನಾಡು ಆದರೆ ಒಳಗೆ ನುಸುಳಿದಾಗ ಕಾಡಿನ ಮಧ್ಯೆ ಬೈಲು ಹಳ್ಳಿಗಳಿವೆ. ಈ ಹಳ್ಳಿಗಳಲ್ಲಿ ಪಂಚ್ಯಾತ್ ಬೋರ್ಡುಗಳನ್ನು ಸ್ಥಾಪಿಸುವುದು ಸೂಪರ್ ವೈಜರರ ಕಾರ್ಯ. ಅವುಗಳ ಆಡಳಿತೆಯ ಮೇಲ್ತನಿಖೆಯು ಹೊಣೆ ಬೇರೆ. ಶಾಲೆ, ಲೈಬ್ರರಿ, ರಸ್ತೆ ಮೊದಲಾದವುಗಳನ್ನಾರಂಭಿಸುವ ಪಂಚ್ಯಾತ್ ಬೋರ್ಡುಗಳಿಗೆಲ್ಲ ಸಲಹೆ ಸೂಚನೆ ಕೊಡಬೇಕು. ಆದುದರಿಂದ ಸದಾ ತಿರುಗಾಟ ತಪ್ಪಿದ್ದಲ್ಲ. ಈ ಕೆಲ

ಸಕ್ಕೆ ಸೇರಿದ್ದೆ ಸೇರಿದ್ದು. ಊಟವಿಲ್ಲ ನಿದ್ದೆಯಿಲ್ಲ. ಈಗ ಬಂದರು. **ಮತ್ತೆ ಹೊರ**ಟರು. ಒಂದು ವಾರ ಸವು ನಿಶ್ಚಿಂತ ಮನೆಯಲ್ಲಿ ತಂಗಿದುದಿಲ್ಲ" ಎಂದು ಜೈಲೂರಿಗೆ ಬಂದಾಗಲೆಲ್ಲ ಸುಭಾಷಿಣಿ ಅತ್ತೆ ಮಾವಂದಿರ ಮುಂದೆ ಹೇಳಿದ್ದುಂಟು.

ಹೊತ್ತು ಮುಳುಗಿ ಕತ್ತಲಾಗುತ್ತ ಬಂತು. ಕತ್ತಲೆ ತನ್ನ ಕರಿ ಸೆರಗಿನಿಂದ ಸೂರ್ಯನನ್ನು ಮರೆಸಿ ಸುತ್ತಲೂ ಕಾಲು ಚಾಚತೊಡಗಿತ್ತು. ಸೂರ್ಯನಷ್ಟೇ ಅದರದು ವಿಶ್ವಾಕಾರ. ಸೂರ್ಯನದು ಬೆಳಕಿನ ಕಿರಣ. ಕತ್ತಲೆಯು ಕಿರಣಕರಿದು. ಅಷ್ಟೆ. ಹೊಲ, ನೆಲ, ಜಾಂದಳವನ್ನು ಅದು ಆವರಿಸಿ ಬಿಡುತ್ತದೆ ಮತ್ತೆ ಕಣ್ಣು ಸರಿ ಕಾಣಲಿಕ್ಕಿಲ್ಲವೆಂದು ಭಾವಿಸಿ ನಾಲ್ಕು ಬಾಳೆ ಎಲೆಯನ್ನು ತರಲು ಸೀತಮ್ಮನವರು ಕೈ ಕತ್ತಿ ಹಿಡಿದುಕೊಂಡು ತೋಟಕ್ಕೆ ಹೊರಟರು. ಅದನ್ನು ಕಂಡ ಗೋವಿಂದರಾಯರು "ಹಾವು ಗೀವು ಇದ್ದೀತು ಮಾರಾಯತೀ. ನಾನೂ ಬಂದೆ" ಎಂದು ಅನುಸರಿಸಿದರು. "ನಾನು ಇನ್ನೂ ಕೂಸು" ಎಂದು ಸೀತಮ್ಮನವರು ಹೇಳಿದರೂ "ಹಾವಿಗೆ ಕೂಸು ದೊಡ್ಡವರಿಲ್ಲ" ವೆಂದು ಉಪದೇಶದ ಮಾತುಗಳನ್ನಾಡುತ್ತಾ ಬಂದರು. ಬಾಳೆಯ ಎಲೆಗಳನ್ನು ಕೊಯ್ದು ಹೆಂಡತಿಯ ಕೈಗೆ ಕೊಟ್ಟಾಗ ಧನಿ ಇಳಿಸಿ, "ಹೌದೇನೇ, ರಾಜಾ ಬಂದ ಕಾರಣ ಗೊತ್ತಾಗಲಿಲ್ಲ" ಎಂದರು.

"ಒಂದು ಮಾರಾಯ ಇನ್ನೂ ಎರಡು ತಾಸಾಗಿಲ್ಲ. ಈಗಲೇ ತೆಗೆದಿರಾ ಅಧಿಕ ಪ್ರಸಂಗ. ಅದಕ್ಕೇ ನನ್ನ ಬೆನ್ನ ಹಿಂದೆ ಬಂದಿರೆಂದು ಕಾಣುತ್ತದೆ".

"ಅಲ್ಲೇನೇ, ಬರುವುದು ಬೇಡವೆಂದು ಆಕ್ಷೇಪ ಮಾಡಿದೆನೇ, ನಾನು. ಅದಕ್ಕಲ್ಲ. ನಿನಗೆ ತಿಳಿಯಲಿಲ್ಲ. ಎಲ್ಲಾದರೂ ಫಂಡಿನ ಹಣ ಕೇಳಲು ಬಂದನೇನೋ ಎಂದು ನನ್ನ ವಿಚಾರ. ಕೇಳಿದರೆ ನಿನಗೆ ಬಳೆ ಮಾಡಿಸಲು ಹಾಕಿದ್ದೇನೆ ಎಂದಂದು ಬಿಡುತ್ತೇನೆ. ನೀನು ಬೇರೆ ಸೊಲ್ಲು ತೆಗೆಯಬೇಡ ನೋಡು"

ಸೀತಮ್ಮನವರು ತಬ್ಬಿಬ್ಬಾಗಿ, "ಮಕ್ಕಳ ಮೇಲೂ ನಿಮ್ಮದು ಸಂಶಯ" ಎಂದರು.

"ಸಂಶಯ ಅಲ್ಲೇನೇ"

"ಮತ್ತೇನು ಉಪ್ಪು ಹಾಕಿ ನೆಕ್ಕುತ್ತೀರೇನು ಅದನ್ನು?"

"ಛೇ, ನೀನು ಒಂದಕ್ಕೆ ಹತ್ತು ಮಾತು ತೆಗೆಯುತ್ತೀ. ನಿನ್ನ ನಾಲಿಗೆ ಸ್ವಲ್ಪ ಉದ್ದ. ಏನು ನನ್ನಲ್ಲಿ ಸಾವಿರಾರು ರೂಪಾಯಿ ಇದೆಯೇನು? ಇದ್ದರೆ ಅದು ನನಗೆ ಬೇಕೇನು? ಮಕ್ಕಳಿಗಲ್ಲದಿದ್ದರೆ ಅದು ಯಾರಿಗೆ? ಆದರೆ ಈಗಲೇ ನಮ್ಮ ಕೈ ಬರಿದಾಗಬಾರದು. ನಾಳೆ ಏನಾಗುತ್ತದೆ, ಮುಪ್ಪಿನ ಕಾಲಕ್ಕೆ ಏನಾಗುತ್ತದೆಂದು ಯಾರೂ ಹೇಳಲಾರರು. ತಾಯ್ತಂದೆ ಕೈಯಲ್ಲಿ ನಾಲ್ಕಾರು ಕಾಸು ಇದ್ದರೆ ಮಕ್ಕಳಿಗೆ ಪರಿಮಳ, ನೋಡು"

"ನೀವು ಏನು ಬೇಕಾದರೂ ಮಾಡಿಕೊಳ್ಳಿ, ನಾನು ಉಪ್ಪಿನಲ್ಲೂ ಇಲ್ಲ ಹುಳಿಯಲ್ಲೂ ಇಲ್ಲ" ಎಂದು ಸೀತಮ್ಮನವರು ವೇದಾಂತ ತೆಗೆದರು.

ರಾಜಾ ಆ ಮಾತನ್ನೇ ಎತ್ತಲಿಲ್ಲ. ಊಟಕ್ಕೆ ಕುಳಿತಾಗ ಸುತ್ತಲೂ ನೋಡಿ "ಹರಿ ಎಲ್ಲಿ ಅಪ್ಪಯ್ಯ"? ಎಂದು ಕೇಳಿದ.

"ಹರಿಯಾ, ಅವನ ಕಥೆ ಏನು ಹೇಳಲಿ?" ಎಂದು ಬಡಿಸುವಾಗಲೇ ಸೀತಮ್ಮನವರು ಬಡಬಡಿಸಿದರು.

"ಏನು ಏನಾಗಿದೆ?" ಎಂದು ಮತ್ತೆ ಕತೂಹಲದಿಂದ ಕೇಳಿದ.

"ಆಗುವದೇನಿಲ್ಲ. ಇಲ್ಲಿಲ್ಲದ ಕೆಲಸಗಳಲ್ಲಿ ಮಗ್ನನಾಗುತ್ತಾನೆ. ಈಗ ಬೇಸಿಗೆಯ ರಜೆ ದೊರಿತ ಮೇಲೆ ಒಂದು ದಿನ ಮನೆಯಲ್ಲಿ ಉಳಿದಿಲ್ಲ. ಒಮ್ಮೆ ಬಾರಕೂರು, ಎಲ್ಲೂರುಗಳಿಗೆ ಹೋದ. ಆ ಮೇಲೊಮ್ಮೆ ಕಾರ್ಕಳದ ಗೋಮಟೇಶ್ವರ,ಮೂಡ ಬಿದರೆಯ ಸಾವಿರ ಕಂಬದ ಜೈನ ಬಸದಿ ಕಂಡು ಬಂದ. ಈಗ ಮಲ್ಪೆ ಸಮುದ್ರದಲ್ಲಿರುವ ಟೀಪು ಸುಲ್ತಾನನ ಬತ್ತೇರಿ, ಸೈಂಟ್ ಮೇರಿ ದ್ವೀಪ ನೋಡಲು ಗೆಳೆಯರೊಡನೆ ತೆರಳಿದ್ದಾನೆ" ಎಂದು ಗೋವಿಂದರಾಯರು ಉತ್ತರ ಕೊಟ್ಟರು.

"ಇದಕ್ಕೆಲ್ಲ ಕಾಸೆಲ್ಲಿ ಅವನಿಗೆ"?

"ಕಾಸು ಕಾಂಚಾಣವಿಲ್ಲ. ನಡೆದೇ ಹೋಗುತ್ತಾರೆ. ಒಬ್ಬೊಬ್ಬರು ಒಂದೆರಡು ಸೇರು ಅಕ್ಕಿ ಕೂಡಾ ಹಿಡಿದುಕೊಂಡಿರುವರು. ಅಲ್ಲಿ ಗಂಜಿ ಬೇಯಿಸುತ್ತಾರೆ."

"ನಮ್ಮೂರಿಗೆ ಬರಬಹುದಿತ್ತಲ್ಲ! ಬೆಳ್ತಂಗಡಿಗೆ ಬಂದಿದ್ದರೆ ಸಮೀಪವಿದ್ದ ಜುಮಾಲ ಬೀಬಿ ಕೋಟೆ, ಕುದುರೆ ಮುಖ ಕಾಣಬಹುದಾಗಿತ್ತು."

"ವರುಷ ಒಂದು ಕಡೆ ತೆರಳುವುದಂತೆ. ಕುದುರೆ ಮುಖ ಘಟ್ಟ ಹತ್ತಬೇಕೆಂದು ಈಗಲೇ ಹೇಳುತ್ತಿದ್ದಾನೆ. ಆಗಲಿ, ಆಗಲಿ, ಮೆಟ್ರಿಕ್ ಆಗಲಿ. ಇನ್ನು ಒಂದು ವರುಷವಿದೆ. ಮತ್ತೆ ಬೇಕಾದಲ್ಲಿ ಹೋಗು. ಈಗ ರಜೆಯಲ್ಲಿ ಸ್ವಲ್ಪ ಓದಿ ಕಲಿತುದುದನ್ನು ಗಟ್ಟಿ ಮಾಡಿಕೋ ಎಂದರೆ ಮಾಣಿ ಕೇಳುವುದಿಲ್ಲ. ಯಾವಾಗ ಓದುತ್ತಾನೋ ಬರೆಯುತ್ತಾನೋ ನಮಗೆ ಒಂದೂ ಗೊತ್ತಾಗುವುದಿಲ್ಲ. ಶಾಲೆಯಿದ್ದಾಗ ಮುಂಜಾನೆ ಎದ್ದ ಕೂಡಲೇ ಹೊರಡುವ ಗಡಿ ಬಿಡಿ! ಬಿಟ್ಟ ಮೇಲಾದರೂ ಬೇಗ ಮನೆಗೆ ಬಂದು ಓದುತ್ತಾನಾ? ಅದೂ ಇಲ್ಲ. ಕ್ರಿಕೆಟ್ ಆಡಲು ನಿಲ್ಲುತ್ತಾನೆ. ಅಜ್ಜರಕಾಡ್ ಪುಡಿ ಪುಡಿ. ಕತ್ತಲಾದ ಮೇಲೆಯೇ ಅವನ ಸವಾರಿ. ಅದೆಲ್ಲ ದೊಡ್ಡವರ ಮಕ್ಕಳಿಗೆ ಹೇಳಿದುದು; ಬೆಣ್ಣೆ ತುಪ್ಪ ತಿಂದು ಕೆಲಸವಿಲ್ಲದೆ ಬೊಜ್ಜು ಬೆಳೆಸಿದವರಿಗೆ ಕರಗಿಸಲಿಕ್ಕೆ; ನಾವು ಬಡವರು; ಹೊಟ್ಟೆಗೇ ಇಲ್ಲ; ಊದಿದರೆ ಗಾಳಿಗೆ ಹಾರುವ ಹಾಗಿದ್ದೇ; ಕ್ರಿಶ್ಚನ್ ಹಾಯ್‌ಸ್ಕೂಲಿನಿಂದ ಮನೆಗೆ ಮೂರಾರು ಮೈಲು ನಡೆಯುವ ದೇಹಶ್ರಮವೇ ಸಾಕು; ಎಂದರೆ ಕೇಳಲಾರ."

ಯಾರು ಹೆಡ್ಮಾಸ್ತರರು?. ಸಾಲೀಸರೇಸು ಈಗ?"

"ಹೌದು"

ಆ ಮೇಲೆ ಅಕ್ಕ ತಂಗಿಯ ಸುಖ ದುಃಖ, ಗುತ್ತಿನ ಶೆಟ್ಟರ ಮನೆ, ಬಲ್ಲಾಳರ ಮನೆಗಳ ವಿಚಾರ, ನೆರೆ ಹೊರೆಯಲ್ಲಿರುವ ಮಾರ್ಪಳ್ಳಿ, ಕೆಮ್ತೂರು, ಕೊರಂಕ್ರಪಾಡಿ, ಅಲೆವೂರು ಗ್ರಾಮಗಳ ಹಿರಿಯರ ಸುದ್ದಿಗಳೆಲ್ಲವನ್ನೂ ಕೇಳಿ ತಿಳಿದುಕೊಂಡ. ಮಜ್ಜಿಗೆ ಅನ್ನ ಉಂಡು ತೃಪ್ತಿ ಹೊಂದುವ ಕಾಲಕ್ಕೆ, "ನಾನೀಗ ಬಂದುದೇಕೆಂದು ನಿಮಗೆ ಗೊತ್ತಾಯಿತಾ" ಎಂದು ಹೇಳಿ ನಕ್ಕ.

ಸೀತಮ್ಮನವರು ಅಡಿಗೆ ಮನೆಯಿಂದ ಊಟದ ಪಡಸಾಲೆಗೆ ಬಂದು ನಿಂತರು. ಗೋವಿಂದರಾಯರ ಕಿವಿಗಳೂ ನಿಗುರಿದವು. "ಇಲ್ಲ. ನಮಗೆ ಗೊತ್ತಾಲಿಲ್ಲ" ಎಂದರವರು.

"ನಿಮ್ಮನ್ನೆಲ್ಲ ಕರೆದು ಕೊಂಡು ಹೋಗಲು ಬಂದೆ" ಎಂದು ರಾಜಾ ಮುಗುಳು ಮುಗುಳು ನಕ್ಕ.

"ಅಬ್ಬ! ದೇವರು ಕಣ್ಣು ತೆರೆದ." ಎಂದು ಅಮ್ಮ ದೇವರಿಗೆ ಕೈ ಮುಗಿವಂತೆ ಜೋಡಿಸಿ, "ನನಗೆ ಇಲ್ಲಿ ಜೀವಕ್ಕೆ ಬೇಸರ ಬಂದಿದೆ" ಎಂದು ಉಸಿರ್ಗ

ರಿದರು. ಭೂಮಿಯ ಗುರುತ್ವ ಆಕರ್ಷಣ ಶಕ್ತಿಯಿಲ್ಲದಿದ್ದರೆ ಅವರು ಆಕಾಶಕ್ಕೆ ನೆಗೆಯುತ್ತಿದ್ದರೋ ಏನೋ! ಅಷ್ಟು ಸಂತೋಷವಾಯಿತು ಅವರಿಗೆ. ಒಳಗೇನಿದ್ದರೂ ಹೊರಗೆ ಅದನ್ನು ತೋರಿಸದೆ ಕೈ ತೊಳೆಯುತ್ತಿದ್ದ ಗೋವಿಂದರಾಯರು "ಹೌದಾ, ತಮಾಷೆ ಮಾಡುತ್ತೀಯಾ? ನಿಜವಾ?" ಎಂದು ಮತ್ತೆ ಮತ್ತೆ ಕೇಳಿದರು. "ನಿಜ. ಸುಳ್ಳಲ್ಲ. ಎಲ್ಲಾ ಸವಿಸ್ತಾರ ಹೇಳುತ್ತೇನೆ" ಎಂದು ರಾಜಾ ಅಂಗಳದ ತುದಿಗೆ ಬಂದು, ಬಗ್ಗಿ ಕೈ ತೊಳೆದುಕೊಂಡ. ತಗ್ಗಿನ ಕಸದ ಕುಪ್ಪೆಯಲ್ಲಿ ಬಾಳೆ ಎಲೆ ನೆಕ್ಕತೊಡಗಿದ್ದ ಕೊರಗರ ನಾಯಿ, ಮೈ ಮೇಲೆ ನೀರು ಬಿದ್ದುದರಿಂದ ಹುಲಿಯಂತೆ ಹೆದರಿಸಲು ಗರ್ ಗುರ್ ಗುರುಗುಟ್ಟಿತು.

ಜಗಲಿಯಲ್ಲಿ ಗೋಡೆಗೊರಗಿ ಕುಳಿತ ಗೋವಿಂದರಾಯರು ಮದ್ದಲೆಯ ಮೇಲೆ ಬಡಿವಂತೆ, ನಸ್ಯದ ಬುರುಡೆಯನ್ನು ಎಡಗೈಯಲ್ಲಿ ಹಿಡಿದು ಅವರ ಮುಚ್ಚಳದ ನೆತ್ತಿಯ ಮೇಲೆ ತಟತಟ ತಟ್ಟತೊಡಗಿದರು. ಬೈರಾಸಿನಿಂದ ಮೋರೆ ಮೈ ಮೇಲಿನ ಬೆವರನ್ನೊರಸುತ್ತ ಗಾಳಿಗೆ ಮೈಯೊಡ್ಡಿ ಜಗಲಿಯ ಅಂಚಿನಲ್ಲಿ, ಒಂದು ಕಾಲನ್ನು ಮೆಟ್ಟಲಿನ ಮೇಲೆ ಇಳಿ ಬಿಟ್ಟು ಕುಳಿತ ರಾಜಾ, "ನಾನೊಂದು ಆಸ್ತಿ ತೆಗೆದುಕೊಂಡೆ" ಎಂದುಸುರಿದ. ತಂದೆಯ ಬಾಯಿ ಕಿವಿಯವರೆಗೂ ತೆರೆಯಿತು. ಕಿವಿ ನಿಗುರಿಸಿ ಒಳಗೆ ಗಸ್ ಚುಸ್ ಗಬ ಗಬ ಮೆಲ್ಲುತ್ತಿದ್ದ ಸೀತಮ್ಮನವರು ಒಳಗಿಂದೊಳಗೇ ನಕ್ಕರು. ಹಿರಿಯರ ಆಸ್ತಿಯಿರದ ಗೋವಿಂದರಾಯರಿಗೆ ದೊಡ್ಡ ಕೊಪ್ಪರಿಗೆಯೇ ದೊರೆತಂತಾಯಿತು. ಒಮ್ಮೆಯೇ ನೂರು ಪ್ರಶ್ನೆ ಕೇಳಲು ಅವರ ಆತುರ.

"ಹೌದೇನೋ? ಎಷ್ಟು ಕೊಟ್ಟೆ?"

"ಬಹಳ ಸುಲಭದಲ್ಲಿ ಸಿಕ್ಕಿತು. ಏಲಂನಲ್ಲಿ ನಿಂತು ತೆಗೆದುಕೊಂಡೆ."

"ದೊಡ್ಡದಾ?"

"ದೊಡ್ಡದೇ. ಸಾಧಾರಣ ೩೦ ಎಕರೆ ಉಂಟು."

"ನೂರಾರು ಮುಡಿ ಅಕ್ಕಿ ಎಂದೆನ್ನು. ನಮ್ಮ ಬಲ್ಲಾಳರಿಗೂ ಅಷ್ಟಿಲ್ಲ! ಎಲ್ಲ ನಂಜವಾ? ಪುಂಜವಾ? ಬೈಲುಗದ್ದೆ, ಬೆಟ್ಟುಗದ್ದೆ ಕಾಡು ಬೀಡು ಎಲ್ಲ ಕೂಡಿ ಅಷ್ಟಾಗುತ್ತದೆಯಾ?"

"ಎಲ್ಲ ಬೈಲು ಗದ್ದೆ ಮಾಡಬಹುದು. ನೇತ್ರಾವತಿ ದಡ. ಪಂಪು ಪಂಪು ಪ್ರತಿ ಕಟ್ಟಿ ಕಟ್ಟಿ ನೀರು ತಂದರೆ ಗದ್ದೆಗಳಿಗೆಲ್ಲ ಉಣಿಸಬಹುದು. ಎಲ್ಲ ಮಾಡ

ಬೇಕು. ಈಗ ಬರೀ ಕಾಡು. ಹಿಂದೆ ನೂರಾರು ವರುಷಗಳ ಹಿಂದೆ, ಗದ್ದೆ ತೋಟ, ಒಕ್ಕಲು ಪಕ್ಕಲು ಎಲ್ಲ ಇದ್ದಿತಂತೆ. ಈಗ ಹಾಳು ಬಿದ್ದ ಭೂಮಿ. ಒಂದು ಗುಡಿಸಲೂ ಇಲ್ಲ. ಈಗ ನಾನು ಸಣ್ಣ ಮನೆ ಕಟ್ಟಿಸಲು ಸುರುಮಾಡಿ ಬಂದಿದ್ದೇನೆ. ಒಂದು ಮುಖಮಂಟಪ, ಒಂದು ಪಡಸಾಲೆ, ಅಡಿಗೆ ಮನೆ, ಇಷ್ಟೆ. ಗೋಡೆಗಳೆಲ್ಲ ಮೇಲೆ ಬಂದಿವೆ. ಅಲ್ಲೇ ಪಕ್ಕಕ್ಕೆ ಬೇಕಾದ ಬಿದಿರು ಮೆಳೆಗಳಿವೆ. ಬಿದಿರನ್ನೂ ಕಡಿಸಿಹಾಕಿಸಿದ್ದೇನೆ. ಬಿದಿರು ಕಟ್ಟಿ, ಮೇಲೆ ಮಾಡು ಹೊದಿಸಿ, ಮುಳಿ ಹುಲ್ಲು ಅಥವಾ ಒಣ ಹುಲ್ಲು ಛಾವಣಿ ಮಾಡಿ ದರೆ ಆಯಿತು. ಮತ್ತೊಂದು ದನದ ಹಟ್ಟಿ, ಬಿಸಿನೀರಿನ ಕೊಟ್ಟಿಗೆ ಕಟ್ಟಿಸ ಬೇಕು. ಸ್ನಾನದ ಕೊಟ್ಟಿಗೆಗೇನೂ ಅಷ್ಟು ಕಷ್ಟವಿಲ್ಲ. ಒಪ್ಪತ್ತು ಮುಗಿವ ಕೆಲಸ. ನಾಲ್ಕು ಕಂಬ ಹುಗಿದು ಮೇಲೆ ಮಾಡು ಕಟ್ಟಿದರೆ ಸಾಕು. ಇದು ಎಪ್ರೀಲ್. ಜೂನ್ ಬರುವುದರೊಳಗೆ ಎಲ್ಲ ರೆಡಿಯಾಗುತ್ತದೆ. ಅಷ್ಟರೊಳಗೆ ನೀವೂ ರೆಡಿಯಾದರೆ ಸರಿ. ಮತ್ತೆ ಮಳೆಗಾಲ ಬಂದು ಬಿಡುತ್ತದೆ."

ಶಾಂತ ಚಿತ್ತದಿಂದ ಆಲಿಸುತಿದ್ದ ಗೋವಿಂದರಾಯರು, "ಎಲ್ಲಿ ಬೆಳ್ತಂಗಡಿಯಲ್ಲೇ ಇದೆಯೇನು ?" ಎಂದು ಪ್ರಶ್ನಿಸಿದರು.

"ಬೆಳ್ತಂಗಡಿಗೆ ಸಮೀಪ. ಹನ್ನೆರಡು ಮೈಲಿದೆ. ಬಂಗಾಡಿ."

ಬಂಗಾಡಿ ಎಂದೊಡನೆಯೇ ಗೋವಿಂದರಾಯರ ಮೈ ಸ್ವಲ್ಪ ಜುಂ ಎಂ ದಿತು. ಬಂಗಾಡಿಯಾ ? ಸುಬ್ರಮ್ಮಣ್ಯ ಧರ್ಮಸ್ಥಳ, ಬಂಗಾಡಿಗಳೆಲ್ಲ ಜ್ವರದ ಕೊಂಪೆ. ಅಷ್ಟು ಹಣ ಇಲ್ಲೇ ಎಲ್ಲಾದರೂ ಕರಾವಳಿಯಲ್ಲಿ ಹಾಕು ತ್ತಿದ್ದರೆ ಪಸಂದ ಆಗುತ್ತಿತ್ತಲ್ಲ" ಎಂದವರು ಉದ್ಗರಿಸಿದರು.

ರಾಜಾನ ಮೋರೆ ಸ್ವಲ್ಪ ಪೆಚ್ಚಾಯಿತು. ಸ್ವಲ್ಪ ಸಿಟ್ಟಿನ ಮುಖ ಮುದ್ರೆ ಯಿಂದ ಹೇಳಿದ "ಹೌದು. ಕರಾವಳಿಯಲ್ಲಿ ಆಸ್ತಿತೆಗೆದುಕೊಳ್ಳಲು ಅಷ್ಟು ಹಣ ಎಲ್ಲಿಂದ ತರಲಿ ? ಅಗ್ಗಕ್ಕೆ ಸಿಗುವ ಬಾಬತ್ತೇನು. ತೆಗೆದು ಕೊಂಡರೂ ನಾಲ್ಕು ಮರಮಟ್ಟಿಲ್ಲ. ತೆಂಗಿನಕಾಯಿಂದ ಹಿಡಿದು ಕಟ್ಟಿಗೆಯ ವರೆಗೆ ಎಲ್ಲಕ್ಕೂ ಹಣ ಚೆಲ್ಲ ಬೇಕು. ಕರಾವಳಿ ಭೂಮಿ ಏನು ಶಶಭಾಗ್ಯ ? ಅಲ್ಲಿ ಆದರ ಹಾಗೇನು ? ಮನೆಯ ಮುಂದೆಯೇ ಕಾಡು. ಕಟ್ಟಿಗೆಗೆ ಕಾಸು ಖರ್ಚಿಲ್ಲ. ಜ್ವರ ವಿದೆಯೆಂದು ಅಲ್ಲಿ ಜನರೇ ಬದುಕಿಲ್ಲವೇನು ? ಊರು ಬಿಟ್ಟು ಓಡಿ ಹೋಗಿ ದ್ದಾರೇನು ? ಜ್ವರ ಎಲ್ಲಿಲ್ಲ? ಬರುವ ಕಾಲಕ್ಕೆ ಪೆಟ್ಟಿಗೆಯೊಳಗೆ ಅಡಗಿ

ಕೂತರೂ ಜ್ವರ ಬಂದೇ ಬರುತ್ತದೆ. ಈಗ ನಾನು ಇಷ್ಟು ವರುಷ ಅಲ್ಲಲ್ಲಿ ತಿರುಗಾಡಿದ್ದೇನೆ. ಇಂದು ಧರ್ಮಸ್ಥಳವಾದರೆ, ನಾಳೆ ನೆರಿಯಾ. ಹಳ್ಳಿ ಹಳ್ಳಿ ತಿರುಗಾಡಿದ್ದೇನೆ. ಮುಂಡಾಜೆಯಲ್ಲಿ ಸಾವಿರಾರು ಚಿತ್ಪಾವನರ ಮನೆಗಳಿವೆ. ಅಲ್ಲಿ ಬಸ್ಸಿನಿಂದ ಇಳಿದರೆ ಮನೆಯ ವರೆಗೂ ಪಂಚ್ಯಾತ್ ರಸ್ತೆ ಇದೆ. ನಾಲ್ಕೇ ಮೈಲು ದೂರ."

ಮಗನ ಗಟ್ಟಿಸ್ವರ ಕೇಳಿದ ಸೀತಮ್ಮನವರು ಹೊರಗೆ ಬಂದು ಕೇಳುತ್ತಿದ್ದರು. ಅವನು ಮುಗಿಸಿದ ಮಾತನ್ನು ಅವರು ಮುಂದುವರಿಸಿದರು. "ಬಂಗಾಡಿ ಯಾದರೇನು? ಬ್ರಹ್ಮಾವರ ಆದರೇನು? ಇನ್ನು ನಮಗೆ ಯೌವನ ಬರುವುದಿಲ್ಲ. ಮುಪ್ಪಿನ ಪ್ರಾಯಕ್ಕೆ ಮಕ್ಕಳೊಡನೆ ಇರುವುದೇ ಪರಮ ಗುಣ. ಇಲ್ಲಿದ್ದರೆ ಇರುವ ಸುಖವಾದರೂ ಅಷ್ಟರಲ್ಲೇ ಇದೆ. ಬಿಸಿನೀರು ಕಾಯಿಸಲಿಕ್ಕೆ ಒಂದು ಮಡಲಿಗೂ ಗತಿಯಿಲ್ಲ. ತೋಟದಲ್ಲಿ ಬಿದ್ದ ಒಂದು ಮಡಲು ಹೆಕ್ಕಿದರೆ "ತಾರ್ ಪೂರ್" ಎಂದು ಕಣ್ಣು ಕೆಂಪಗೆ ಮಾಡುತ್ತಾರೆ. ಮರದ ಕೆಳಗೆ ಬಿದ್ದ 'ಬೆಜೆಕ್ರೆ' ತಂದು ಕಾಯಿಸಬೇಕು. ನನಗಂತೂ ಸಾಕು ಸಾಕಾಗಿದೆ, ನೋಡು ರಾಜಾ."

"ಅಮ್ಮ, ಇಲ್ಲಿ ಇಷ್ಟಾದರೂ ಇದೆ. ಕೆಲವು ಕಡೆ ಉರಿಸಲು ಇಷ್ಟೂ ಸಿಗುವುದಿಲ್ಲ. ಸುಮ್ಮನೆ ಕರಾವಳಿ, ಕರಾವಳಿ ಎಂದು ಅಂಟು ಕೊಂಡಿದ್ದಾರೆ. ಒಪ್ಪತ್ತಿಗಿದ್ದರೆ ಇಪ್ಪೊತ್ತಿಗಿಲ್ಲ."

ಗಾಳಿ ಯಾವ ಕಡೆ ಬೀಸತೊಡಗಿತೆಂಬುದನ್ನು ಕಂಡುಕೊಂಡ ಗೋವಿಂದರಾಯರು ಮೆಲ್ಲಗೆ ನಸ್ಯದ ಡಬ್ಬಿಗೆ ಕೈಹಾಕಿದರು. ಮತ್ತೊಂದು ಚಿಟಿಕೆ ಮೂಗಿನ ಸೊಳ್ಳೆಗಳಿಗೆ ತುಂಬಿಸಿ ಹೇಳಿದರು. "ರಾಜಾ, ನೀನು ಹೇಳುವುದೆಲ್ಲ ಸತ್ಯ. ನಾನೇನು ವಿರುದ್ಧ ಮಾತನಾಡಿಲ್ಲ. ಆದರೆ ನಾವೆಲ್ಲ ಕರಾವಳಿಯಲ್ಲಿ ಹುಟ್ಟಿ ಬೆಳೆದವರು.! ಕರಾವಳಿ ಗಾಳಿ ಸೇದಿ, ನೀರು ಕುಡಿದೇ ದೊಡ್ಡವರಾದವರು. ಬದುಕಿದಷ್ಟು ದಿನ ಇನ್ನು ಬದುಕುವಂತಿದೆಯೇನು? ನಮ್ಮಪ್ಪಯ್ಯ ಅರುವತ್ತಕ್ಕೆ ಕಣ್ಣು ಮುಚ್ಚಿದರು. ನಾನಾ ವಯಸ್ಸಿಗೆ ಸಮೀಪಿಸಿದೆ. ಅಲ್ಲಿಯ ಹವೆ ಹಿಡಿದೀತೇನೋ ಎಂದು ನನ್ನ ಸಂಶಯ. ಅಷ್ಟೇ."

ಹವೆ ಏನು ಮಾಡುತ್ತದೆ ನಾವು ಜಾಗ್ರತೆಯಿಂದ ಇದ್ದರೆ? ಅನ್ನಪಾನದ ಮಟ್ಟಿಗೆ ಸ್ವಲ್ಪ ಜಾಗ್ರತೆ ಮಾಡಿದರೆ ಸರಿ. ಸಿಕ್ಕ ಸಿಕ್ಕದು ತಿಂದರೆ

ಅಜೀರ್ಣದಿಂದ ಜ್ವರ ಬರುತ್ತದೆ. ಅದು ಅಲ್ಲಿದ್ದರೂ ಸಮ. ಇಲ್ಲಿದ್ದರೂ ಸಮ. ಒಂದು ವೇಳೆ ಜ್ವರ ಬಂದರೆ ಡಾಕ್ಟರರೇ ಇಲ್ಲೇನು? ಔಷಧಿಯೇ ಇಲ್ಲವೇನು? " ಎಂದು ರಾಜಾ ಸಮಾಧಾಯಿಸಿದ.

" ಹೌದಾ ರಾಜಾ, ನಮ್ಮ ಹರಿಗೆ ತೊಂದರೆಯಾಯಿತಲ್ಲ." ಎಂದು ಸೀತಮ್ಮನವರು ಕಳವಳ ವ್ಯಕ್ತ ಪಡಿಸಿದರು.

" ಹರಿಗೆ ಇನ್ನೊಂದು ವರುಷವಲ್ಲ ಮೆಟ್ರಿಕ್ ಮುಗಿಯಲಿಕ್ಕೆ. ಒಂದು ವರುಷದ ಮಟ್ಟಿಗೆ ಗುಲಾಬಿ ಮನೆಯಲ್ಲಿ ಇರಲಿ. ಅಷ್ಟು ತಮ್ಮಸಿಗೆ ಉಪ ಕಾರ ಮಾಡಲಿಕ್ಕಿಲ್ಲೇನು? ಅವರಿಗೇ ಊಟದ ಬಾಬ್ತು ಏನಾದರೂ ಕೊಟ್ಟರೆ ಸರಿ. ಮೋಹನನನ್ನು ಬೆಳ್ತಂಗಡಿ ಶಾಲೆಗೆ ಹಾಕಿದರಾಯ್ತು."

ಈ ಮಾತಿನಿಂದ ಸೀತಮ್ಮನವರ ಮನಸ್ಸಿಗೆ ಸಮಾಧಾನವಾಯ್ತು ಮಲಗಲು ಸಿದ್ಧತೆಗಾಗಿ ಅವರು ಒಳಹೊರಗೆ ಹೋಗಲಾರಂಭಿಸಿದರು ಮುಂಡಗೆ ಒಲಿಯ ಚಾಪೆ ತಲೆದಿಂಬು, ಜಮಖಾನ ಜಗಲಿಗೆ ತಂದಿಟ್ಟರು. " ರಾತ್ರಿ ಬಹಳ ಆಯ್ತು. ಈಗ ಮಲಗಿ ಕೊಳ್ಳೋಣ. ಮುಂಜಾನೆ ಮಾತ ನಾಡೋಣ " ಎಂದು ಗೋವಿಂದರಾಯರು ಚಾಪೆ ಬಿಡಿಸಿದರು. ಚಾಪೆ ಮೇಲೆ ತನ್ನ ಬೆಡ್ಡಿಂಗ್ ಬಿಡಿಸಿ ರಾಜಾ ಕೂಡಾ ಒರಗಿದ. ಆದರೆ, ತನ್ನ ಪ್ರಶ್ನೆಗೆ ಅಪ್ಪಯ್ಯನಿಂದ ಸಮರ್ಪಕ ಉತ್ತರ ಬಾರದಿದ್ದುದನ್ನು ಕಂಡು ಅವ ನಿಗೆ ಸ್ವಲ್ಪ ಬೇಸರವಾಯಿತು. " ಬರುತ್ತೀರೋ ಇಲ್ಲವೋ? " ಸ್ಪಷ್ಟ ಕೇಳಿ ಬಿಡಬೇಕೆಂದು ಒಮ್ಮೆ ಅವನಿಗನ್ನಿಸಿತು ಛೇ, ಹಾಗೆ ಕೇಳಬಾರದು." ಎಂದು ಮತ್ತೊಮ್ಮೆ ಮನಸ್ಸನ್ನು ಬಿಗಿಹಿಡಿಯುತ್ತಿದ್ದ. ಇಲ್ಲಿ ಆಸ್ತಿ ಪಾಸ್ತಿ, ಬದುಕು ಭಾಗ್ಯವಿಲ್ಲ. ಇಂದೇನೋ ಮುಂದೇನೋ ? ಹೀಗಿದ್ದರೂ ಅವರು ಯಾಕೆ ಹಿಂಜರಿಯುತ್ತಿದ್ದಾರೆಂದು ಅವನಿಗೆ ಅರ್ಥವಾಗಲೊಲ್ಲದು. ಬಾರದಿದ್ದರೆ ಮುಂದೆ ಹೇಗೆ? ಬಂದರೇನು ಮಾಡಬೇಕೆಂಬ ವಿಚಾರಗಳಿಂದ ಒಂದು ಮಗ್ಗುಲಿಂದ ಮತ್ತೊಂದಕ್ಕೆ ಅವನು ಹೊರಳುತ್ತಿದ್ದ. ಹಾಲಿಗೆ ಹೆಪ್ಪಿಕ್ಕುವುದು, ಪಾತ್ರೆ ಪರಡಿ ಇದ್ದ ಸ್ಥಳಗಳಲ್ಲಿ ಇಡುವುದು ಮೊದಲಾದ ಸೀತಮ್ಮನವರ ಕೆಲಸ ಇನ್ನೂ ಮುಗಿದಿರಲಿಲ್ಲ. ಪಾತ್ರೆಗಳ ದಡಬಡ ಶಬ್ದ ಹೊರತು ಮಿಕ್ಕ ಎಲ್ಲಕಡೆ ಗಳಲ್ಲೂ ಶಾಂತತೆ: " ಲೇ ಲೇ ಲೇ ಲಾ ॥ ಎಂಚಿ ಪೊರ್ಲುದ ಮದ್ಮಾಯೆ ಮದ್ಮಾಳ್‌ಲಾ ॥ " ಎಂದು ಪಾಡ್ದನ ಹೇಳುತ್ತ ನಡುನಡುವೆ " ಕೇಹೆ ಕೇಹೆ "

ಎಂದು ಕೂಗುತ್ತ ಬೈಲಿನಲ್ಲಿ ಯಾರೋ ಬರುತ್ತಿದ್ದರು. ಮಲಗಿದ್ದ ರಾಜಾ ಏನೋ ಸ್ಮರಿಸಿಕೊಂಡು, "ಅಮ್ಮಾ ಅದು ಯಾರು.ರಾಮ ನಾಯ್ಕನಾ" ಎಂದು ಕೇಳಿದ. "ಹೌದು ಕುಡಿದು ಪಾಡ್ದನ ಹೇಳುತ್ತಾ ಬರುತಿದ್ದಾನೆ. ದಿನಾ ಇದ್ದದ್ದೇ. ಒಂದೊಂದು ದಿನ ಮಧ್ಯರಾತ್ರಿಯಾಗುತ್ತದೆ. ಬರುವಾಗ ಒಮ್ಮೆ ಗದ್ದೆಯಲ್ಲೇ ಸ್ಮೃತಿತಪ್ಪಿ ಬಿದ್ದಿದ್ದ. ಅವನಿಗೆ ಭೂತದ್ದೂ ಹೆದರಿಕೆ ಇಲ್ಲ. ಹಾವಿದ್ದೂ ಇಲ್ಲ."

"ಇನ್ನೂ ಇದ್ದಾನಾ ಅವ."

"ಅವನಿಗೇನಾಗಿದೆ ದಾಢಿ? ಕಲ್ಲು ಗುಂಡಿನ ಹಾಗೆಯೇ ಇದ್ದಾನೆ. ಕಣ್ಣು ಮಾತ್ರ ಸ್ವಲ್ಪ ಮಂದವಾಗಿದೆ."

ಮುಂದೆ ರಾಜಾ ನಿದ್ದೆ ಹೋದ. ಬಸ್ ಪ್ರಯಾಣದ ಆಯಾಸ ಒಂದೆಡೆ, ಆ ಮೇಲೆ ನಡೆದು ಬಂದ ಶ್ರಮಗಳಿಂದ ಗಾಢ ನಿದ್ದೆ ಹತ್ತಿತು. ಎಚ್ಚರವಾದುದು ಮುಂಜಾನೆಯೇ. ಗೋವಿಂದರಾಯರ ಧ್ವನಿಗೆ ಎದ್ದ. ಬೆಳಗಿನ ಜಾವದಲ್ಲೇ ಎದ್ದು ನಸ್ಯ ಏರಿಸಿ, "ಏಳು ನಾರಾಯಣನೇ। ಏಳು ಲಕ್ಷ್ಮೀ ರಮಣ। ಏಳು ಕಮಲಾಕ್ಷ ಕಮಲನಾಭ" ಎಂದವರು ಉದಯರಾಗಕ್ಕೆ ಆರಂಭಿಸಿದ್ದರು. ಸೇವಾನಿವೃತ್ತರಾಗಿ ಮನೆಯಲ್ಲಿ ವಾಸಿಸಲಾರಂಭಿಸಿದಂದಿನಿಂದ ಉದಯರಾಗದ ಮೋಹ ವಿಶೇಷವಾಗಿದೆ ಅವರಿಗೆ. ವಯಸ್ಸಾಗುತ್ತ ಬಂದಂತೆ ನಿದ್ದೆಯೂ ಕಡಿಮೆ. ಬೇಸಿಗೆಗೆ ಮುಂಜಾನೆ ತಂಪಾದ ಕಡಲು ಗಾಳಿಯೂ ಬೀಸುತ್ತದೆ. ಕರಾವಳಿ ಹಳ್ಳಿಗಳಲ್ಲಿ ಒಕ್ಕಲಿಗರು ನಾಲ್ಕು ಜಾವವಿರುವಾಗಲೇ ಎದ್ದು ಕೊಳಕೆ ಮಜಲುಗಳಿಗೆ ಏತದಿಂದ ನೀರು ಎತ್ತುವ "ಟ್ರುಯಿಂ, ಟ್ರುಯಿಂ" ಧ್ವನಿಯೂ ಅಲ್ಲಲ್ಲಿ ಕೇಳಿಸುತ್ತದೆ. ಜಾವ ಜಾವಕ್ಕೆ ಕೆಲೆವ ಕೋಳಿಗಳು ಬೆಳಗು ಮುಂಜಾನೆ ಗಂಟಲು ಹರಿವಂತೆ ಕೂಗುವವು. ಒಂದು ಕೆಲೆದೊಡನೆಯೇ ಮತ್ತೊಂದಕ್ಕೆ ರಾವು. ಒಂದು ಮನೆಯಲ್ಲಿ ಕೂಗಾಟ ಕೇಳಿದೊಡನೆಯೇ ಮತ್ತೊಂದು ಮನೆಯ ಹುಂಜಗಳಿಗೆ ವೈರ ಉಕ್ಕುತ್ತದೆ. ಮನೆಯಿಂದ ಮನೆಗೆ ವ್ಯಾಪಿಸಿ ಹಳ್ಳಿಗೇ ಹಳ್ಳಿಗೇ ಕೋಳಿಗಳ ಬಳಗ ಜಾಗೃತವಾಗುತ್ತದೆ. ಅವುಗಳ ಗಂಟಲು ನೋವಾದಾಗ ಮರಗಳ ಮರೆಯಲ್ಲಿ ಅಡಗಿ ಬೆಳಕನ್ನು ಇಣಿಕಿ ನೋಡುತ್ತಿದ್ದ ಕಾಗೆಗಳ ಸರ್ತಿ. ಕೊಕ್ಕುಗಳನ್ನು ಸೋಗೆಗಳ ದಂಡುಗಳಿಗೆ ತಿಕ್ಕಿ, ತೀಡಿ, ಹರಿತಗೊಳಿಸುವ ಕಾಗೆಗಳನ್ನು

ಕಂಡರೆ ಮೊಟ್ಟೆ ಮರಿಯಿದ್ದ ಹಕ್ಕಿ ಪಕ್ಕಿಗಳಿಗೆ ದಿಗಿಲು. “ನಮಗೂ ಎಚ್ಚರ ವಿದೆ” ಎಂದು ಎಚ್ಚರಿಕೆ ಕೊಡಲು ಅವು ಕೂಡಾ ಚಿಲಿಪಿಲಿಗುಟ್ಟುವುವು. ಹೀಗಾಗಿ ನಿಸರ್ಗವೇ ಚೇತನ ಸ್ವರೂಪ, ನಾದಲೋಲವಾಗಿ ಪರಿಣಮಿಸು ವಾಗ ಗೋವಿಂದರಾಯರಿಗೆ ಎಚ್ಚರವಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ.

“ಏಳು ನಾರಾಯಣ। ಏಳು ಲಕ್ಷ್ಮಿರಮಣ। ಏಳು ಬೆಳಗಾಯಿತು. ಏಳು” ಎಂದು ಅವರು ರಾಗ ಆರಂಭಿಸಿದಾಗ “ಏಳು ಸೀತಾ ಏಳು।। ಬೆಳಗಾ ಯಿತು ಏಳು” ಎಂದು ಹೇಳಿ ತಮ್ಮನ್ನು ತಟ್ಟಿ ಕರೆದಂತಾಗುತ್ತದೆ ಸೀತಮ್ಮ ನವರಿಗೆ. ಅವರೂ ಎದ್ದು ರಾತ್ರಿ ಬೆಂದ ಅನ್ನ ಒಗ್ಗಿಸಿ ಇಳಿಸಿದ ತಿಳಿಯಾದ ತಿಳಿಗೆ ಕೊಬರಿ ಹಿಂಡಿ ಬೆರಸಿ ಬಾಗೀರಥಿ ಮುಂದಿಡುವರು. ಅದು ಬೋಗುಣಿ ಯನ್ನು ನೆಕ್ಕಿ ನಾಲಿಗೆ ಚಪ್ಪರಿಸುತ್ತದೆ. ಅದು ಹುಲ್ಲು ಜಗಿವಾಗ ಪಾತ್ರೆ ತಿಕ್ಕುವ ಒಲೆ ಮತ್ತು ಅಡಿಗೆ ಮನೆಗೆ ಸೆಗಣಿ ನೀರು ಕಲಡಿಸಿ ಪಾಳೆಯ ಕಡ್ಡಿಯಿಂದ ಸಾರಿಸಿ ಶುದ್ಧಮಾಡುವ ಅವರ ಕೆಲಸ ಮುಗಿಯುತ್ತದೆ. ಒಲೆಯ ಮೇಲೆ ಒಂದೆಡೆ ಮಾಣಿಗೆ ಗಂಜಿಗೆ ಗಡಿಗೆಯಿಟ್ಟು, ಮತ್ತೊಂದೆಡೆ ಕಾಫಿಗೆ ತಪ್ಪಲೆ ಇಟ್ಟು, ಹಾಲಿಗಾಗಿ ಪುನಃ ಅವರು ಬಾಗೀರಥಿಯಿದ್ದಲ್ಲಿಗೆ ಬರುತ್ತಾರೆ. ರಾಯರು ತೋಟಕ್ಕೆ ಹೋಗಿ ಉದುರಿದ ಮಾವಿನ ಎಲೆಯಿಂದ ಹಲ್ಲುಜ್ಜಿ, ಮುಖ ಮಜ್ಜನ ಮಾಡಿಕೊಂಡು ಬರುವಾಗ ಕಾಫಿ ತಯ್ಯಾರ್. ಇಂದು ಹೇಗೂ ಮಗ ಬಂದ ಉತ್ಸಾಹ ಬೇರೆ. ರಾತ್ರಿ ಮಲಗುವ ಮೊದಲೇ ಗಡು ಗುಡು ಕಡೆಯುವ ಕಲ್ಲು ತಿರುಗಿಸುತ್ತಿದ್ದರು. ಬೆಳಗಾಗುವ ಹೊತ್ತಿಗೇ ದೋಸೆ ಕಾಫಿ ಸಿದ್ಧವಾದುದನ್ನು ಕಂಡ ರಾಜಾ ಆಶ್ಚರ್ಯದಿಂದ “ಅಮ್ಮಾ ನೀನೊಂದು ಯಂತ್ರ” ಎಂದು ನಕ್ಕು ನುಡಿದ.

“ಜರ್ಮನ್ ಯಂತ್ರ! ಜರ್ಮನ್” ಎಂದು ಗೋವಿಂದರಾಯರು ಮಾತಿಗೆ ಮಾತು ಕೂಡಿಸಿ ದೋಸೆ ನುಂಗಿದರು. ಅವರ ವಿನೋದ ಲಹರಿ ಕಂಡು ರಾಜಾನಿಗೆ ಜೀವ ಮರಳಿ ಬಂದಂತಾಯ್ತು. ಅವರು ಕಾಫಿ ತಿಂಡಿ ತೀರಿಸಿ ಹೊರಗೆ ಹೋದ ಮೇಲೂ ಅವನು ಮಣೆ ಬಿಟ್ಟೇಳಲಿಲ್ಲ. “ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆಯಂತೆ. ಎರಡು ಮೂರು ನನಗೆಲ್ಲಿ ಸಾಕು. ಭಾಗೀ ರಥಿಯ ಮೊಸರು ತಿನದೆ ಬಹಳ ಸಮಯವಾಯ್ತು” ಎಂದು ಬೇಡಿ ಹಾಕಿಸಿಕೊಂಡ. “ಏನು ಮಾಡುವುದು ಮಗನೇ. ನೀನು ಎರಡು ತಿಂ

ಗಳು ಮೊದಲೇ ಬರಬೇಕಿತ್ತು. ಕೈ ಮುಳುಗುವ ವರೆಗೆ ಸುರಿಯುತ್ತಿದ್ದೆ. ಹೊತ್ತಿಗೆ ಒಂದೊಂದು ತಂಬಿಗೆ ಕೊಡುತಿದ್ದಳು ಭಾಗೀರಥಿ. ಈಗ ಬಚ್ಚಿದೆ. ಆದಾದರೂ ಏನು ಕೊಟ್ಟೀತು! ಗದ್ದೆಯಲಿ ಹಸುರು ಹುಲ್ಲು ಒಂದು ಕುಸುರಿಲ್ಲ. ಹಿಂಡಿ, ಗಂಜಿಯ ಬಲದಿಂದಲೇ ಕಾಫಿ, ಮಜ್ಜಿಗೆಗೆ ತತ್ವಾರವಾಗಿಲ್ಲ. ಇನ್ನೊಂದು ಮೂರು ತಿಂಗಳು. ಮತ್ತೆ ಕರುಹಾಕುತ್ತದೆ. " ಎಂದ ಸೀತಮ್ಮನವರು, " ನಿಮ್ಮಲ್ಲಿ ಕರೆಯುವುದಿದೆಯೇನು ? " ಎಂದು ಪ್ರಶ್ನಿಸಿದರು.

" ಇಲ್ಲ. ಮನೆಗೆಲಸವೇ ಅವಳಿಗೆ ಸಾಕಾಗುತ್ತದೆ. ಮತ್ತೆ ದನದ ಸೇವೆ ಯಾರು ಮಾಡಬೇಕು? ಹಾಲು ತೆಗೆದುಕೊಳ್ಳುವುದು. "

" ತೆಗೆದುಕೊಂಡ ಹಾಲಲ್ಲಿ ಏನು ಮೊಸರಾದೀತು. ಕಣ್ಣೀರೆ "

" ಇನ್ನೇನು ಭಾಗೀರಥಿಯೇ ಬರುತ್ತಾಳಲ್ಲ ನಮ್ಮಲ್ಲಿಗೆ " ಎಂದ ರಾಜಾ ಅತ್ತಿತ್ತ ನೋಡಿ ಕುಗ್ಗಿದ ಧನಿಯಲ್ಲಿ, "ಅಮ್ಮಾ, ಮತ್ತೇನೆಂದರು ನಿನ್ನ ಹತ್ರ " ಎಂದು ಕುತೂಹಲದಿಂದ ಕೇಳಿದ. " ಅನ್ನುತ್ತಾರೇನ? ಬಾರದೇ ಎಲ್ಲಿಗೆ ಹೋಗುತ್ತಾರೆ " ಎಂದು ಆತ್ಮವಿಶ್ವಾಸದಿಂದ ನುಡಿದರು ಸೀತಮ್ಮ.

ತೃಪ್ತಿಹೊಂದಿದ ರಾಜಾ ಕೈತೊಳೆದು ಅಂಗಿಹಾಕಿಕೊಂಡು ಮೋಹನನನ್ನು ಕರೆದು "ಬಾರೋ, ಬಲ್ಲಾಳರ ಮನೆಗೆ ಹೋಗಿ ಬರೋಣ. ಅವರನ್ನು ಕಾಣದೆ ಎಷ್ಟು ವರುಷವಾಯ್ತೋ ಏನೋ! " ಎಂದು ಹೊರಟ. ಲಂಗೋಟಿ ಮಾಮನ ಮೋಹನ ಒಳಗೋಡಿ ಹಗ್ಗಕ್ಕೆ ಹಾಕಿದ್ದ ತಂದೆಯ ಸ್ನಾನದ ಬೈರಾಸನ್ನು ಸೊಂಟಕ್ಕೆ ಸುತ್ತಿಕೊಂಡು ಅಣ್ಣನ ಬೆನ್ನ ಹಿಂದೆ ಓಡಿದ. ಬಲ್ಲಾಳರ ಮನೆಯಲ್ಲಿ ಯೋಗಕ್ಷೇಮ ಮಾತನಾಡಿ ಕಾಫಿ ಕುಡಿದು ಗುತ್ತಿನ ಶೆಟ್ಟರ ಮನೆ ದಾರಿ ಹಿಡಿದರು. ಅಪರೂಪಕ್ಕೆ ಬಂದ ಮಾಸ್ಟ್ರು ಮಗನನ್ನು ಹಾಗೇ ಅವರೂ ಬಿಡುವವರಲ್ಲ. ಸಿಂಯ್ಯಾಳ ತರಿಸಿ ಸಕ್ಕರೆ ಸುರಿದು ಕೊಟ್ಟರು. ಹೊಟ್ಟೆ ಗಟ್ಟಿಯಾದುದರಿಂದ ಹರಟೆ ಮುಗಿದಾಗ ಹೊತ್ತು ನೆತ್ತಿಗೇರಿತ್ತು. ಮನೆಯಂಗಳಕ್ಕೆ ಹಿಂತಿರುಗಿದಾಗ ರಾಮು ನಾಯ್ಕ ಗೋವಿಂದರಾಯರೊಡನೆ ಪಟ್ಟಾಂಗ ಕೊಚ್ಚುತ್ತ ಕೂತಿದ್ದ. ಎದ್ದು ಕೈಜೋಡಿಸುವಾಗಲೇ " ಹೋ ರಾಮು ನಾಯ್ಕನ ಸವಾರಿ" ಎಂದು ರಾಜಾ ಮಾತಾಡಿಸಿದ.

" ಹೌದಯ್ಯ ನಿನ್ನೆ ನೀವು ಬೈಲಲ್ಲಿ ಬರುವಾಗಲೇ ನೋಡಿದೆ. ನಿನ್ನೆಯೇ ಬರಬೇಕೆಂದಿದ್ದೆ."

" ಏನೋ ಅಂಥಾ ಕೆಲಸ ?"

" ಕೆಲ್ಸ ಏನು ? ಕಾಫಿಗೆ ನಾಲ್ಕು ಕಾಸು ಜಾರಿಸೋಣವೆಂದು ಬಂದಿದ್ದಾನೆ ಅವ " ಎಂದು ಗೋವಿಂದರಾಯರು ನಗುತ್ತ ನುಡಿದರು.

" ನಿನ್ನ ಕಾಫಿ ಮಹಿಮೆ ಜೋರು! ನಿನ್ನೆ ರಾತ್ರಿ ಹನ್ನೆರಡು ಗಂಟೆಯ ಮೇಲೆ ರಾಗ ಎಳೆಯುತ್ತ ಬರುತ್ತಿದ್ದಿಯಲ್ಲ. ಮಲಕೊಂಡವನಿಗೆ ನನಗೆ ಕೇಳಿಸುತ್ತಿತ್ತು. ಏ, ರಾಮನಾಯ್ಕ, ಇನ್ನು ಕಾಫಿ ನಿನಗೆ ಬಹಳ ವರುಷ ಸಿಗುವುದಿಲ್ಲ ನೋಡು. ಗಾಂಧಿಯವರು ದೊಡ್ಡ ಚಳವಳಿ ಹೂಡುತ್ತಾರಂತೆ. ಗಾಂಧಿ ರಾಜ್ಯ ಬಂದ ಮೇಲೆ ಹೆಂಡದಂಗಡಿಗಳನ್ನೆಲ್ಲ ಮುಚ್ಚುತ್ತಾರೆ. ಕುಡಿಯುವವರನ್ನು ಜೈಲಿಗೆ ಕಳಿಸುತ್ತಾರೆ ನೋಡು."

ಈ ಮಾತು ಕೇಳಿ ರಾಮನಾಯ್ಕನಿಗೂ ನಗು ಬಂತು. ಬಾಯ ತಂಬುಲ ಉಗುಳಿ ಬಂದು, " ಅಯ್ಯ, ಅಷ್ಟರವರೆಗೆ ಬದಕುತ್ತೇನಾ ? ಅದೆಲ್ಲ ಸಾಯಲಿ, ಹಳೆ ಅಂಗಿ ಏನಾದರೂ ಇದ್ದರೆ........" ಎಂದು ಬಡಬಡಿಸಿದ.

" ಬಂದಾಗ ಹಳೇ ಅಂಗಿ ತಂದಿದ್ದೇನಾ ಮಾರಾಯಾ ?"

"ಕಾಫಿಗೆ ಕಾಸು ಬೇಕು ಮತ್ತು ಹಳೇ ಅಂಗಿ. ಊಟ ಬೇರೆ. ಪಡಿ ಬೇರೆ ನಿನ್ನದು ನಾಯ್ಕ " ಎಂದು ನಡುವೆ ಹೇಳಿದರು ಗೋವಿಂದರಾಯರು.

ರಾಜಾ ಅವನ ಉತ್ತರಕಾಯದೆ ಹೇಳಿದ. " ಅದೆಲ್ಲ ಹೋಗಲಿ. ಸಾಯಂಕಾಲ ಐದು ಗಂಟೆಗೆ ಬಾ. ಒಂದು ಟ್ರಂಕು ಬೆಡ್ಡಿಂಗ್ ಉಡುಪಿ ವರೆಗೆ ಹೊರಬೇಕು. ನಿನಗೆ ರೊಕ್ಕ ಕೊಡೋಣ. ಮೂಗಿಗೆ ಬರುವ ವರೆಗೆ ಕುಡಿ"

ಅದನ್ನು ಕೇಳಿದ ಗೋವಿಂದರಾಯರು ಕಳವಳದಿಂದ ಒಳಗೆ ಅಡಿಗೆ ಮನೆಯ ವರೆಗೂ ಬಂದು. "ಏ, ಸಾಯಂಕಾಲವೇ ಹೋಗುತ್ತಾನಂತಲ್ಲೇನೇ" ಎಂದರು ಹೆಂಡತಿ ಮುಂದೆ.

"ಹೌದು. ನಾಲ್ಕು ದಿನ ರಜೆಯೆಂದು ಮೊದಲೇ ಹೇಳಿದ್ದನಲ್ಲ. ನೀವು ಹಾಂ, ಹೂಂ ಎಂದೇನೂ ಹೇಳಲಿಲ್ಲ. ಮಾಣಿ ಬೇಜಾರ ಮಾಡಿಕೊಂಡನೋ ಏನೋ?" ಎಂದು ಕೂಡಿಸಿ ನುಡಿದರು ಸೀತಮ್ಮ.

ಅದನ್ನು ಕೇಳಿ ಅವರಿಗೂ ಬೇಸರವಾಗಿ ಹೊರಗೆ ಬಂದರು. "ಹೌದೇನೋ, ಸಾಯಂಕಾಲ ಹೋಗುವುದೆಂತಲೇ ಮಾಡಿದಿರೇನು?" ಎಂದು ಮಗನನ್ನು ದ್ದೇಶಿಸಿ ಕೇಳಿದರು "ಹೌದು" ಎಂದವನು ಉತ್ತರವಿತ್ತ.

"ಊರಿಗೆ ಬಂದವ ಅಣ್ಣ ತಮ್ಮಲ್ಲಿ ಇರಲಿಲ್ಲಂತ ಗುಲಾಬಿ ಕಮಲ ನೊಂದು ಕೊಂಡಾರು"

"ಕಮಲಾಳಲ್ಲಿ ಈ ಸಲ ಹೋಗುವುದಕ್ಕಾಗುವುದಿಲ್ಲ. ಕೇಳಿದರೆ, ಸಮಯ ವಿರಲಿಲ್ಲವೆಂದು ಸಮಾಧಾನ ಮಾಡಿ. ಗುಲಾಬಿಯನ್ನು ಮಾತ್ರ ಕಾಣುತ್ತೇನೆ. ಉಡುಪಿಗೆ ಹೋದವನು ಸಾಯಂಕಾಲ ಅವರಲ್ಲೇ ಉಳಿದು ಮುಂಜಾನೆ ಮೋಟಾರ್ ಹತ್ತಿದರೆ ಸರಿ."

"ಅದು ಸರಿ. ಮತ್ತೆ ನಾವೆಲ್ಲ ಯಾವಾಗ ಬರಬೇಕು. ಏನು ಕತೆ? ಸಾಮಾನು ಸರಂಜಾಮು ಹೇಗೆ ಸಾಗಿಸುವುದು? ಬಾಗೀರಥಿಯನ್ನೇನು ಮಾಡ ಬೇಕು?"

"ಅದೆಲ್ಲ ವ್ಯವಸ್ಥೆ ನಾನು ಮಾಡುತ್ತೇನೆ. ನಿಮಗೇಕೆ ಚಿಂತೆ? ಹತ್ತು ಹದಿನೈದು ದಿವಸಗಳ ಮೇಲೆ ಗಾಡಿ ಕಳಿಸುತ್ತೇನೆ. ನಾನು ಬಂದರೂ ಒಂದೆ. ಇಲ್ಲದಿದ್ದರೆ ಇಬ್ಬರು ಆಳುಗಳನ್ನು ಕಳಿಸುತ್ತೇನೆ. ಒಂದು ಗಾಡಿಗಿಂತ ಹೆಚ್ಚಿದೀತೇನು ಸಾಮಾನು? ಹೇರುವುದನ್ನೆಲ್ಲ ಅದರಲ್ಲಿ ತುಂಬಿಸಿದ. ಬಾಗೀ ರಥಿಯನ್ನು ಹಿಂಬದಿ ಕಟ್ಟಿದ. ನೀವೆಲ್ಲ ಮೋಟಾರಿನಲ್ಲಿ ಬಂದರೆ ಸರಿ. ಮೋಟಾ ರಲ್ಲಿ ಹಾಕುವ ಕೆಲವು ಸಾಮಾನುಗಳನ್ನು ಅದರ ಟಾಪಿನ ಮೇಲೂ ಹೇರಿದ. ಇದಕ್ಕೆಲ್ಲ ಆನೆ ಕುದುರೆ ಏನಾಗಬೇಕು?"

ಗೋವಿಂದರಾಯರು ಮತ್ತೆ ಹೆಚ್ಚು ಮಾತುಗಳನ್ನು ತೆಗೆಯಲಿಲ್ಲ. ಊಟವಾದ ಮೇಲೆ ಅನ್ನದ ಆಲಸ್ಯ ಕರಗುವವರೆಗೆ ಸ್ವಲ್ಪ ಪವಡಿಸಿದರು. ಹಾಯಾಗಿ ಸ್ವಲ್ಪ ಅಡ್ಡ ಬೀಳಲು ಸೀತಮ್ಮನವರಿಗೆ ಪುರುಸೊತ್ತೇ ಇಲ್ಲ. ಸಾಯಂಕಾಲ ಕಾಫಿಗೆ ಏನಾದರೂ ತಿಂಡಿ ಮಾಡಬೇಕೆಂದು ಆತುರ. ಬಾವಿ ಕಟ್ಟೆಯ ಬಳಿ ನಟ್ಟಿದ್ದ ನಾಲ್ಕು ಕೆಸುವಿನ ಎಲೆಗಳನ್ನು ಚಿವುಟಿ ತಂದು ಚೈ, ಚುಯಿಂ ಪತ್ರೊಡೆಗಾರಂಭಿಸಿದರು. ಅದೆಲ್ಲ ಮುಗಿದಾಗ ರಾಮನಾಯ್ಕ ಬಂದ. ಟ್ರಂಕ್ ಬೆಡ್ಡಿಂಗ್ ರಾಜಾ ಕಟ್ಟಿದಾಗ ಸೀತಮ್ಮನವರು ಬಂದು,

"ಇಕೋ, ವಿಜಯನಿಗೆ ನಾಲ್ಕು ಹಪ್ಪಳ" ಎಂದು ಹೇಳಿ ನಾಲ್ಕು ಕಟ್ಟು, ಹಪ್ಪಳ, ಮಾಂಬಳಗಳನ್ನು ತಂದಿಟ್ಟರು.

ರಾಮನಾಯ್ಕ ಸಾಮಾನು ಹೊತ್ತು ಹೊರಟ. ರಾಜಾನ ಬೆನ್ನ ಹಿಂದೆ ಮೂವರೂ ಬಂದರು. ತೋಟದ ಅಂಚಿನಲ್ಲಿ ಸೀತಮ್ಮನವರು ನಿಂತರು. "ಮುಟ್ಟಿದ ಮೇಲೆ ಒಂದು ಕಾಗದ ಬರಿ. ಮಗು ಜಾಗ್ರತೆ. ಸುಭಾಷಿಣಿ ಯನ್ನು ಕೇಳಿದೆನೆಂದು ಹೇಳು." ಎಂದು ಹೇಳಿದರು. ಬೆಳ್ತಂಗಡಿಯವರೆ ಕಾಶಿ ರಾಮೇಶ್ವರದಷ್ಟು ದೂರ ಎಂದು ಅವರ ಭಾವನೆ. ಗೋವಿಂದರಾಯರು ಬೇರೆ ಮಾತುಗಳನ್ನು ತೆಗೆದರು. "ಒಬ್ಬಳನ್ನು ಬಿಟ್ಟು ಬಹಳ ದಿವಸ ಹಾಗೆಲ್ಲ ಹೋಗಬೇಡ. ಪರಊರು. ಪರರಾಜ್ಯ. ಜೀವ ಬಿಟ್ಟುಕೊಂಡು ನಿನ್ನ ಹಾಗೆ ಈಗಿನಕಾಲಕ್ಕೆ ಯಾರು ಕೆಲ್ಸ ಮಾಡುತ್ತಾರೆ? ಎಲ್ಲ ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ ಹಾಕುವವರೇ ಬಹಳ. ಸರ್ಕೀಟಿಗೆ ಹೋದಾಗಲೂ ಜಾಗ್ರತೆಯಾಗಿರಬೇಕು. ಸಿಕ್ಕಸಿಕ್ಕಲ್ಲಿ ಊಟ ಮಾಡಬೇಡ" ಎಂದವರು ಉಪದೇಶಿಸಿದರು.

ಎಲ್ಲ ಮಾತಿಗೂ ಅವನದೊಂದೇ ಉತ್ತರ. "ಹುಂ, ಹುಂ, ಹುಂ,"

ಬೈಲಿನಿಂದ ಮುಂದೆ ಬೆಟ್ಟುಗದ್ದೆಗೇರುವಲ್ಲಿ ಗೋವಿಂದರಾಯರು ನಿಂತರು. ಮೋಹನ ಸಪ್ಪೆ ಮೋರೆ ಹಾಕಿ ಕೊಂಡದ್ದನ್ನು ನೋಡಿದ ರಾಜಾ ನಾಲ್ಕಾಣೆ ಪಾವಲಿ ಅವನ ಕೈಯಲ್ಲಿಟ್ಟು, "ಹಾಳುಮಾಡಬೇಡ." ಎಂದ.

ಪಾವಲಿ ಕಂಡ ಗೋವಿಂದರಾಯರು "ಹೌದಾ ರಾಜಾ, ನಾನು ಹೇಳ ಲಿಕ್ಕೆ ಮರೆತೇಬಿಟ್ಟೆ. ಹರಿಗೆ ಅಂಗಿಯೇ ಇಲ್ಲ. ಇದ್ದುದೊಂದೂ ಹರಿದಿದೆ. ನಿನಗೆ ಪತ್ರ ಬರಿತೇನೆ ಅಂದಿದ್ದ. ಅವನು ಇದೇ ಹೊತ್ತಿಗೆ ಇಲ್ಲಿಲ್ಲ" ಎಂದು ಉದ್ಗರಿ ಸಿದರು. ರಾಜಾ ಮತ್ತೆ ಕಿಸೆಗೆ ಕೈ ತುರುಕಿಸಿ ಪಾಕೀಟು ತೆಗೆದು ಮೂರು ರೂಪಾಯಿ ಕೊಟ್ಟ.

ನಾಲ್ಕಾರು ಮಾರು ಮಾರಾಜಾ. ಹೋಗುವ ವರೆಗೂ ತಂದೆ ಅಲ್ಲೇನು ನೋಡುತ್ತ ನಿಂತರು. ರಾಜಾ ಮತ್ತೆ ಹೊರಳಿ ನಿಂತು, "ಇನ್ನು ಹತ್ತಿ ಪ್ಪತ್ತು ದಿವಸಗಳಿಗೆ ಗಾಡಿ ಕಳಿಸುತ್ತೇನೆ. ಮತ್ತೆ ಮಳೆಗಾಲ ಬರುತ್ತದೆ" ಎಂದು ಕೂಗಿ ಹೇಳಿದ.

"ಎರಡು ದಿನ ಬೇಗನೇ ಕಳಿಸು" ಎಂದು ಗೋವಿಂದರಾಯರು ಉತ್ತರಿಸಿದರು. ಮೋಹನ ನಾಗಾಲೋಟದಿಂದ ಮನೆಯಕಡೆ ಓಡುತ್ತಿದ್ದ. ಮನೆಗೆ ಮರಳಿದ ಗೋವಿಂದರಾಯರು ಅಂಗಳದಲ್ಲೇ ನಿಂತು ನೋಡುತ್ತಿದ್ದ ಸೀತಮ್ಮನವರನ್ನು ನೋಡಿ, "ಇನ್ನು ಕುಣಿ. ಥೈಥೈ. ಅಂಗಳದುಗ್ಗು" ಎಂದು ಅಣಕಿಸಿದರು.

" ನೀವು ಹೊರಡಿ ಕಾಶಿಯಾತ್ರೆಗೆ" ಎಂದು ಹೇಳಿ ನಕ್ಕರು ಸೀತಮ್ಮ;

## ೩ನೆಯ ಅಧ್ಯಾಯ

ರಾಜನ ರಾಯಭಾರದ ಸುದ್ದಿ ಊರು ತುಂಬ ಹಬ್ಬಿತು. ಇಷ್ಟು ಬೇಗ ಪಸರಿಸಿದುದನ್ನು ಕಂಡು ಗೋವಿಂದರಾಯರಿಗೆ ಬಹಳ ಆಶ್ಚರ್ಯವಾಯಿತು. ಇದು ತಂದೆ ಮಕ್ಕಳೊಳಗಿನ ಗುಟ್ಟು ಎಂದವರು ತಿಳಿದಿದ್ದರು. ರಾಮನಾಯ್ಕನೊಬ್ಬನಿಗೆ ಗೊತ್ತಾಗಲು ಸಾಧ್ಯ. ಏಕೆಂದರೆ, ಅವನು ಚಾರು ಚೂರು ಮಾತು ಕೇಳಿದ್ದ. ಟ್ರಂಕ್ ಹೊತ್ತು ಉಡುಪಿಗೆ ತೆರಳಿದಾಗ ಉಳಿದ ವಿವರವನ್ನು ರಾಜಾ ಹೇಳಿರಲೂ ಸಾಕು. ಇನ್ನು ಬಲ್ಲಾಳರಿಗೂ ಗುತ್ತಿನ ಶೆಟ್ಟರಿಗೂ ತಿಳಿಯುವ ಸಂಭವವಿದೆ. ರಾಜಾ ಅವರನ್ನು ಕಂಡಿದ್ದ. ಮಾತಿಗೆ ಮಾತು ಬಂದಾಗ ತನ್ನ ಹೊಸ ಆಸ್ತಿಪಾಸ್ತಿಯ ಪ್ರಸ್ತಾಪವನ್ನು ಅವನು ತೆಗೆದಿರಬಹುದು. ಆದರೆ ಉಳಿದವರ ಕಿವಿಗಳಿಗೆ ಬಿದ್ದ ಬಗೆಹೇಗೆ?-ಎಲ್ಲರ ಬಾಯಲ್ಲೂ ಅದೇ ಮಾತು. ಕಂಡಕಂಡಾಗ ಎಲ್ಲರೂ ನಿಲ್ಲಿಸಿ ಕೇಳುವವರೇ. ವೆಂಕಟು ಸೇರಿಗಾರ, ತೌಡ ಪೂಜಾರಿ, ಜೋಮ ಮರಕಾಲ, ಪಿಲಿಯಂ ಸೋಜ, ಮೈದಿನ್ ಸ್ವಾಬ ತ್ಯಾಂಪ ಸಂಬದ, ಅಕ್ಕಸಾಲಿಗ ಸುಬ್ಬ, ಗುಡಿಗಾರ ಗೋಪ ಎಲ್ಲರೂ, "ನಿಮ್ಮ ಮಗ ಆಸ್ತಿ ಮಾಡಿದ್ದಾರಂತಲ್ರೀ? ಎಷ್ಟು ಮುಡಿ? ಎಷ್ಟು ಕೋರ್ಜಿ?" ಮೊದಲಾದ ಪ್ರಶ್ನೆಗಳನ್ನು ಕೇಳುತಿದ್ದಾರೆ. "ಅಯ್ಯಾ, ನೀವೂ ಹೋಗುತ್ತೀರಂತಲ್ರೀ.? ನಮ್ಮ ಊರು ಬಿಡುತ್ತೀರಾ? ನಮ್ಮ ಊರಿಗೆ ಮತ್ತೆ ಬರೋದಿಲ್ಲವೇ ಸ್ವಾಮಿ?" ಎಂದು ಮರುಕದ ಮಾತುಗಳನ್ನಾಡುವರು.

"ಹೌದು, ಹೋಗುತ್ತೇವೆ. ಇಲ್ಲಾದರೂ ನಮಗೆ ಏನಿದೆ?" ಎಂದು ಕೆಲವರಿಗೆ ಗೋವಿಂದರಾಯರು ಉತ್ತರ ಕೊಟ್ಟರೆ, "ಮಕ್ಕಳು ದೊಡ್ಡವರಾದಮೇಲೆ ಅವರ ಮಾತು ಕೇಳಬೇಕಲ್ಲ! ಇಲ್ಲದಿದ್ದರೆ ಮುಪ್ಪಿನ ಕಾಲಕ್ಕೆ ಬಂದಾರಾ?" ಎಂದು ಮತ್ತೆ ಕೆಲವರನ್ನು ಸಮಾಧಾಯಿಸುವರು.

ಈ ಖಚಿತ ಮಾತುಗಳನ್ನು ಕೇಳಿ ಊರಿನ ಜನ ತಣ್ಣಗಾಗಿ ಬಿಡುವರು. ಮುಂದೆ ಅವರ ನಾಲಿಗೆಯೇ ಹೊರಳುವುದಿಲ್ಲ. ಮೋರೆ ಸಪ್ಪಗೆಯಾಗಿ

ಬಿಡುತ್ತದೆ. ತಮ್ಮ ಬಂಧು ಬಳಗದವರೇ ಊರು ಬಿಟ್ಟು ತೊಲಗುವ ಸುದ್ದಿ
ಯಿಂದಾಗುವ ವ್ಯಸನ ಅವರ ಮೋರೆಯಲ್ಲಿ ಎದ್ದು ಕಾಣತೊಡಗುತ್ತದೆ.
ಈ ವ್ಯಸನದ ಚಿಹ್ನೆ ಕಂಡು ಗೋವಿಂದರಾಯರಿಗೆ ಪರಿತಾಪವಾಗುವುದು.
ಹಳ್ಳಿಯ ಜನರಿಗೆ ಅವರು ಕೊಟ್ಟುದುದೇನೂ ಇಲ್ಲ. ಅವರ ಒಕ್ಕಲು ಪಕ್ಕಲು
ಕೂಡಾ ಇಲ್ಲ. ಎಷ್ಟೋ ವೇಳೆ, ಪೇಟೆಗಿಂತ ಒಂದು ರೂಪಾಯಿ ಕಡಿಮೆ ಕ್ರಯಕ್ಕೆ
ಮುಡಿ ಅಕ್ಕಿ ಹಳ್ಳಿಯಲ್ಲಿ ಅವರು ಕೊಂಡುದುದುಂಟು. ಮಾವಿನ ಹಣ್ಣಿನ
ಋತುವಿನಲ್ಲಿ ಅವರ ಹುಡುಗರು ನಸುಕಿನಲ್ಲೆದ್ದು ಮಡಲಿನ ಸೂಂಟು ಹೊತ್ತಿಸಿ
ಕೊಂಡು ತೆರಳಿ, ಕಾಟು ಮಾವಿನ ಮರದ ಬುಡದಲ್ಲಿ ಬಿದ್ದ ಹಣ್ಣುಗಳನ್ನು
ಹೆಕ್ಕಿ ತಂದುದುಂಟು. ಮಾವಿನ ಹಣ್ಣಿನ ಮರ, ಅಮಟೆ ಮರ, ಗೇರು ಹಣ್ಣಿನ
ಮರ, ಹುಣಸೆಮರಗಳಿಗೂ ಕಲ್ಲುಹೊಡೆದಿದ್ದರು. ಕೊಯ್ಲಿನ ಕಾಲಕ್ಕೆ ಭತ್ತದ
ಸೂಡಿ ಹೊರುವ ದಿನ ಅವರ ಮಕ್ಕಳು ಗದ್ದೆಗಳಿಗೆ ಓಡಿ ಉದುರಿದ ಕೊರ
ಳನ್ನು ಬುಟ್ಟಿಯಲ್ಲಿ ಆರಿಸಿಕೊಂಡು ಬಂದುದೂ ಇದೆ. ಸೀತಮ್ಮನವರು ಹುಡು
ಗಿಯರೊಂದಿಗೆ ಮಳೆಗಾಲ ಬೇಸಿಗೆ ಕಾಲಗಳೆಂಬ ಭೇದವಿಲ್ಲದೆ ಸದಾಕಾಲ
ಗದ್ದೆಯಂಚು, ಹುಣಿಗಳಲ್ಲಿ ಬೆಳೆದ ಹಸುರು ಹುಲ್ಲನ್ನು ಕೆತ್ತಿ ರಾಶಿರಾಶಿಯಾಗಿ
ತರುತ್ತಿದ್ದರು. ಇಷ್ಟು ವರುಷಗಳಾದರೂ ಅನ್ನಪಾನ ಸ್ನಾನಾದಿ ನಿತ್ಯ ಕರ್ಮ
ಗಳಿಗೆ ಅವರು ಕಟ್ಟಿಗೆಗೂ ಕಾಸುಕೊಟ್ಟಿಲ್ಲ. ತೆಂಗು ಕಂಗಿನ ಮಡಲುಗಳು
ಬಿದ್ದೊಡನೆಯೇ ನಡುಹಗಲಿಲ್ಲ ದರದರ ಎಳೆದೊಯ್ಯುತ್ತಿದ್ದರು. ಮನೆಯಲ್ಲಿ
ಹುಡುಗ ಹುಡುಗಿಯರ ಉಪನಯನ ಮತ್ತು ಮದುವೆ ಬಂದಾಗ "ಏ ತೌಡಾ
ಏ ಚೋಮ, ಏ ವೆಂಕಟು" ಎಂದು ಹಂಗಿನ ಒಕ್ಕಲುಗಳನ್ನು ಕರೆವಂತೆ
ಕರೆದು, "ಕಂಬ ಹುಗಿ, ಚಪ್ಪರ ಹಾಕು, ಎಲೆತಾ, ದಿಬ್ಬಣದೊಟ್ಟಿಗೆ ಬಾ,
ಅಡಿಕೆ ಸಿಪ್ಪೆ ತೆಗಿ, ಸತ್ತ ದನ ಹುಗಿ" ಎಂದು ಆಜ್ಞಾಪಿಸಿದುದು ಒಂದೆ
ರಡು ಸಲವಲ್ಲ. ಇಷ್ಟೆಲ್ಲ ಅವರಿಗೆ ತೊಂದರೆ ಕೊಟ್ಟಿರುವಾಗ ಅವರು, "ನೆರೆ
ಮನೆ ಹೋದರೆ ಕರು ಕಟ್ಟಲು ಜಾಗವಾಯ್ತು" ಎಂದು ಸಂತಸಪಡಬೇಕಿತ್ತು
ಅದರ ಬದಲು ಅತಿಶಯ ದುಃಖ ವ್ಯಕ್ತಪಡಿಸಲು ತೊಡಗಿದುದನ್ನು ಕಂಡು
ಗೋವಿಂದರಾಯರು ಬೆದರು. ಅವರೂ ನಿಸ್ತೇಜರಾಗುತ್ತ ಬಂದರು. ಮನೆ
ಯ ಅಂಗಳಕ್ಕೆ ಬಂದಾಗ ಮಾಡಿಸಿದ ಹಿಡಿದು ಇಡೀ ಮನೆಯನ್ನು
ನೋಡುವರು. ಜಗಲಿಗೆ ಬಂದಾಗ ಒಂದೊಂದೇ ಕಂಬಗಳನ್ನು ಮುಟ್ಟುವರು.

ಪಡಸಾಲೆಗೆ ಬಂದಾಗ ಮೇಲಿನ ಜಾತಿಗಳನ್ನು ಲೆಕ್ಕ ಹಾಕುವರು. ಅಡಿಗೆ ಮನೆಗೆ ಅಕಸ್ಮಾತ್ ಕಾಲಿಟ್ಟರೆ ಸುತ್ತ ನಾಲ್ಕು ಗೋಡೆಗಳನ್ನು ದಿಟ್ಟಿಸು ವರು. ಮನೆ ತಮ್ಮದಲ್ಲ. ಇನ್ನೂ ಬಿಟ್ಟಿಲ್ಲ. ಆದರೂ ಬಿಟ್ಟವರಂತೆ, ಕಳೆದು ಕೊಂಡವರಂತೆ ಅವರು ವರ್ತಿಸುತ್ತಿದ್ದಾರೆ.

ಮನೆ ಬಿಡುವ ಮಾತು ಬಂದಾಗ ಸೀತಮ್ಮನವರೂ ಕಣ್ಣಿಗೆ ಸೆರಗಿನ ತುದಿಯನ್ನು ತಂದು ಕೊಳ್ಳುತ್ತಾರೆ. ಮನೆಯಲ್ಲಿ ಒಬ್ಬರೇ ನಿಂತಾಗ ಕುಳಿತಾಗ ಅವರಿಗೆ ಏನೇನೋ ಅನ್ನಿಸುತ್ತದೆ. ಯಾವುದೋ ಯಾವುದೋ ಚಿತ್ರಗಳು ಕಣ್ಣಮುಂದೆ ಕಟ್ಟಿದಂತಾಗುತ್ತವೆ. ಅವರು ಮನೆಗೆ ಕಾಲಿಟ್ಟಾಗ ಸಣ್ಣ ಹುಡುಗಿ ವಿದ್ಯಾ ಬುದ್ಧಿ ಇದ್ದಿಲ್ಲ. ಅತ್ತೆಯೇ ತಿದ್ದಿ ದೊಡ್ಡವಳನ್ನಾಗಿ ಮಾಡಿದರು. ಇಲ್ಲೇ ಮೈನೆರೆದರು. ನಿಷೇಕಪ್ರಸ್ತವಾದುದೂ ಇದೇ ಮನೆಯಲ್ಲೇ. ಅಂದಿನಿಂದ ಒಂದು ದಿನ ತವರುಮನೆಗೆ ತೆರಳಲಿಲ್ಲ. ತಾಯಿ ತಂದೆ ಇಲ್ಲದಿದ್ದು ದರಿಂದ ಹೋಗಬೇಕಾದರೂ ಎಲ್ಲಿಗೆ? ಹೇಮಾ ಭೀಮರಾದ ಅಣ್ಣತಮ್ಮಂದಿರಿದ್ದರೂ ಸಿರಿತನದ ಸೊಕ್ಕಿನಿಂದ ಅವರು ಬರಲಿಲ್ಲ; ಕರೆಯಲಿಲ್ಲ. ಹೀಗಾಗಿ ಗಂಡನ ಮನೆಯ ಗಂಜಿಯೇ ಲೇಸೆಂದು ಅವರು ಹೋಗಲಿಲ್ಲ. ಮಕ್ಕಳು ಮರಿ ಹುಟ್ಟಿದ ಮೇಲೆ ಹೋಗಲೂ ಆಗಲಿಲ್ಲ. ಬೇಗ ಬೇಗ ಹುಟ್ಟಿ ಮಕ್ಕಳು ಮನೆಗೆ ಒಕ್ಕಲಾದರು. ಒಂದರ ಮೇಲೊಂದು ಗಂಡು. ಗಂಡು ನಾಲ್ಕಾದರೆ ಎರಡು ಹೆಣ್ಣುಗಳನ್ನೂ ದೇವರು ಕೊಟ್ಟ. ದೊಡ್ಡವನು ಒಳಹೊರಗೆ ಓಡಿದಾಗ ಸಣ್ಣವನಿಗೆ ಮಾತು ಬಂತು. ದೊಡ್ಡವಳಿಗೆ ಕಾಲು ಬಂದಾಗ ಗುಷ್ಟ ಹರಿ ಹರಿದಾಡಿದ. ಅಂಗಳದಲ್ಲೊಂದಿದ್ದರೆ ಅಡಿಗೆ ಮನೆಯೊಳಗೊಂದು. ಅಂಗಡಿ ಗೊಂದು ತೆರಳಿದಾಗ ರಂಗಸ್ಥಳದಲ್ಲೊಂದು. ಯಾರೂ ತಪ್ಪಿರಲಿಲ್ಲ. ಯಾವಾ ಗಲೂ ತಪ್ಪಿರಲಿಲ್ಲ. ಮಳೆಗಾಲವಾದರೂ ಅಷ್ಟೆ. ಸೆಖೆಗಾಲವಾದರೂ ಅಷ್ಟೆ. ಮಳೆಗಾಲದಲ್ಲಿ ತಟಪಟ ನೀರು ಸೋರಿ ನೆಲ ಅಲ್ಲಲ್ಲಿ ತೂತು ಬಿದ್ದರೆ ಬೇಸಿಗೆ ಕಾಲದಲ್ಲಿ ಹೊಸ ಮಣ್ಣನ್ನು ತಂದು ಸಾರಿಸಿ, ಕಲ್ಲಿನಿಂದ ತಿಕ್ಕುವರು. ನೆಲಕ್ಕೆ ಸಲಿಸುವ ಷೋಡಶೋಪಚಾರ ಅಲ್ಲಿಗೇ ನಿಲ್ಲಲಿಲ್ಲ. ಅದರ ಮೇಲೆ ಮತ್ತೆ ಕರಿ ಬಳಿಯಲುಂಟು. ಅದರ ಮಸಿ ಮೈ ಬಟ್ಟೆಗಳಿಗೆ ತಗಲದಂತೆ ಹುಡುಗರಿಂದ ಬಂಧದ ಕಾಯಿ ತರಿಸಿ, ಅದರ ಅಂಟು ನೀರು ಚಿಮುಕಿಸಿ ಆರೆಯಬೇಕು.

ಹೆಣ್ಣು ಮಕ್ಕಳು ಅರಳಿದ ಮೇಲೆ ಈ ಹೊರೆ ಅವರ ಮೇಲೆಯೇ ಹೆಚ್ಚಾಗಿ ಬಿದ್ದಿತು. ಇನ್ನೂ ಲಂಗ ತೊಡಲು ಬಾರದೇ ಇದ್ದಾಗಲೇ ಗೆಣಸಿನ ಎಲೆಗಳನ್ನು ತರಿಸಿ ಅವರಿಂದ ನೆಲವನ್ನು ತಿಕ್ಕಿಸುತ್ತಿದ್ದರು. ನೀರು ಚೆಲ್ಲುವ ಅಡಿಗೆ ಮನೆಯೆಂದು ಬಿಟ್ಟಿರಲಿಲ್ಲ. ನಾಯಿ ದನ ತುಳಿದ ಅಂಗಳವೆಂದು ಸಸಾರಮಾಡಿಲ್ಲ ಎಲ್ಲ ಕಡೆಗಳಿಗೂ ಅವರ ಕೈ ಚಾಚಿದೆ. ಎಲ್ಲಕಡೆಗಳಲ್ಲೂ ಅವರ ಹೆಜ್ಜೆ ಕಾಣಿಸುತ್ತಿದೆ. ಗಂಡರ ಮನೆಗೆ ತೆರಳುವ ವರೆಗೂ ಗೆಜ್ಜೆ ಕಟ್ಟಿ ಕುಣಿವವರಂತೆ ಹಗಲೂ ಇರುಳೂ ಕೆಲಸ ಕೆಲಸವೆಂದು ಕುಣಿದುವು.

ದೊಡ್ಡ ಹುಡುಗಿ ಗುಲಾಬಿಗೆ ಇದೇ ಮನೆಯಲ್ಲಿ ತಾಳಿ ಕರಿಮಣಿ ಕಟ್ಟಿದರು. ಕಮಲೆಯನ್ನು ಕೇಳಲು ಬಂದವರು ಹದಿನೈದು ದಿವಸಗಳೊಳಗೇ ದಿಬ್ಬಣ ತಂದರು. ಒಬ್ಬಳಿಗೆ ಜಗಲಿಯಲ್ಲಿ ಧಾರೆಯೆರೆದರೆ ಮತ್ತೊಬ್ಬಳಿಗೆ ಅಂಗಳದಲ್ಲಿ ದೊಡ್ಡ ಚಪ್ಪರಹಾಕಿ ಗುಡಿಸ ಕೊರಳಿಗೆ ಮಾಲೆಹಾಕಿಸಿದರು. ಗುಲಾಬಿ ಮದುವೆಗೆ ಊರಿನ ಸೇರಿಗಾರ ವೆಂಕಟು, "ಪೆ, ಪೇ, ಪೇ" ವಾಲಗ ಊದಿದರೆ, ಕಮಲೆಯ ಲಗ್ನಕ್ಕೆ ರಾಜಾ ಉಡುಪಿಯಿಂದ ಬ್ಯಾಂಡಿನವರನ್ನು ಕರೆದು ತಂದ. ಕೊಟ್ಟ ಹುಡುಗಿಯರು ಕುಲದಿಂದ ಹೊರಗೆ ತೆರಳಿದಾಗ ಆದ ಕಷ್ಟ, ಹುಡುಗರ ಹೆಂಡಂದಿರು ಬಂದಾಗ ಉಳಿಯಲಿಲ್ಲ. ಶುಭಗಳಿಗೆಯಲ್ಲಿ ಸುಭಾಷಿಣಿ ಬಂದು ಮನೆಗೆ ಶೋಭೆ ತಂದಳು. ಆ ಮೇಲೆ ಶಿವರಾಮುನ ಹೆಂಡತಿ ಸುಗುಣ ಪ್ರಸನ್ನಳಾದಳು. ಶುಭ ಶೋಭನ ಕಾರ್ಯಗಳೆಲ್ಲ ಒಂದರ ಮೇಲೊಂದು ಇದೇ ಮನೆಯಲ್ಲಿ ನೆರವೇರಿತು. ಇಂಥ ಸುಂದರ ಸೌಭಾಗ್ಯ ಸೌಧವನ್ನು ತೊರೆಯಬೇಕಲ್ಲಾ ಎಂದು ಸೀತಮ್ಮನವರ ಜೀವಕ್ಕೆ ಕರಕರೆಯಾಗಿದೆ.

ಜೀವ ಮರಮರ ಮರುಗುತ್ತಿದ್ದಾಗಲೇ ವಾರದ ಕೊನೆಯದಿನ ಮಕ್ಕಳೊಂದಿಗೆ ಗುಲಾಬಿ ಉರಿಬಿಸಿಲಿಗೇ ಬಂದಳು. ಚಂದನದ ಬೊಂಬೆಗಳಂತಿರುವ ಆ ಮಕ್ಕಳನ್ನೂ ಮಗಳ ಸಣ್ಣ ಮೋರೆಯನ್ನೂ ಕಂಡು ಸೀತಮ್ಮನವರ ಕೈಕಾಲುಗಳ ಶಕ್ತಿಯೇ ಇಂಗಿತು. "ಅಮ್ಮಾ, ಇಷ್ಟು ದಿನ ನೆನಪಾದಾಗೆಲ್ಲ ಒಂದೊಂದೇ ನೆವಹೇಳಿ ನೀವಿದ್ದಲ್ಲಿ ಬರುತ್ತಿದ್ದೆ. ಬಾಯೂರಿದ್ದುದನ್ನೆಲ್ಲ ಬೇಡಿಂದೆ. ಇನ್ನು ನಾನೆಲ್ಲಿ ಹೋಗಲಿ? ವರುಷಕ್ಕೊಮ್ಮೆಯಾದರೂ ಮೋರೆ

ನೋಡುವ ಭಾಗ್ಯವುಂಟೊ ಇಲ್ಲವೋ? ನೀವು ಬರುವುದುಂಟೋ? ನನ್ನನ್ನು ಯಾರು ಕರೆದುಕೊಂಡು ಹೋಗುವವರು?" ಎಂದು ಹೇಳಿ ಮಕ್ಕಳಂತೆ ಅಳ ತೊಡಗಿದಳು. ಅವಳಿಗೆ ಏನು ಹೇಳಬೇಕು? ಹೇಗೆ ಸಂತೈಸಬೇಕೆಂದು ಸೀತ ಮ್ಮನವರಿಗೆ ಹೊಳೆಯಲಿಲ್ಲ. ಅವರಿಗೂ ಅಳು ಬಂತು. ಮಕ್ಕಳೂ ಅಳುತ್ತ ಅವರ ಕೊರಳಿಗೆ ಬಿದ್ದವು. "ಅಡಿಗೆ ಮನೆಯಲ್ಲಿ ಒಂದೇ ಮಗುವನ್ನು ಬಿಟ್ಟು ಅತ್ತಿತ್ತ ಅಲೆಯಬೇಡ. ಬೆಂಕಿ ಕೊಳ್ಳಿ ಹಿಡಿದು ಎಳೆದೀತು" ಎಂದು ಒಮ್ಮೆ ಮಗಳಿಗೆ ಹಿತ ನುಡಿದರು. "ಕೊರಳಿಗೆ ಚೈನ್ ಯಾಕೆ? ದೇವರು ಕೊಟ್ಟ ಸೌಂದರ್ಯವೇ ಸಾಕು. ನಮ್ಮ ಗ್ರಹಚಾರ ಬಂದಾಗ ಬೊಗ್ಗು ಎದುರಾದ ಎಂಬ ಗಾದೆ ನಿನಗೆ ಗೊತ್ತುಂಟು. ಯಾರಾದರೂ ಬಂಗಾರದ ಆಶೆಯಿಂದ ಕೊರಳಿಗೆ ಕೈ ಕೊಟ್ಟಾರು" ಎಂದು ಮತ್ತೊಮ್ಮೆ ಎಚ್ಚರಿಸುವರು. ಈ ಹಿತ ನುಡಿ ಹಿತನುಡಿ ಆಡಿ, ಅವಳು ಬೇಡಿದ್ದನ್ನು ಕೊಟ್ಟು ಕಳಿಸಿದ ಒಂದೆರಡು ದಿವಸಗಳ ಮೇಲೆ ಕಮಲೆಯನ್ನು ಬಾರ್ಕೂರಿಂದಹರಿ ಕರೆದುಕೊಂಡು ಬಂದ.

"ಊರಿಗೆ ಬಂದ ಅಣ್ಣಾ ನಮ್ಮನೆಗೆ ಬರಲೇಇಲ್ಲ. ನನಗವನ ಸೀರೆಗೀರೆ ಬೇಕಾಗಿತ್ತೇನು? ಮೋರೆ ತೋರಿಸಬಹುದಿತ್ತಲ್ಲ! ನಾನು ಅಂಥ ಅಪರಾಧ ಮಾಡಿದ್ದೇನು? ಒಡಹರೆಂದು ಇಷ್ಟು ತಾತ್ಸಾರ ಈಗಲೇ" ಎಂದು ಮೊದಲು ಸ್ವಲ್ಪ ಸಿಡುಕಿನ ನುಡಿಗಳೇ ಉದುರಿದವು.

"ಬಡವರು ಯಾರು? ದೊಡ್ಡವರು ಯಾರು? ದೊಡ್ಡವ ಅವ; ಶ್ರೀಕೃಷ್ಣ ಪರಮಾತ್ಮ ಒಬ್ಬನೇ. ಸುಮ್ಮನೆ ಸಿಟ್ಟಾಗುತ್ತೀಯಲ್ಲ. ಕೆಸುವಿನ ಗಿಡಕ್ಕೆ ದನ ಕಟ್ಟಿ ಬಂದ ಹಾಗೆ ಓಡಿ ಬಂದಿದ್ದ ಅವ. ಒಂದು ದಿನ ಪೂರಾ ಇಲ್ಲಿ ನಿಲ್ಲಲಿಲ್ಲ. ನಿನ್ನನ್ನು ಕೇಳಿದ. ನಿನಗೆ ಹೇಳಿ ಕಳಿಸೋಣವೆಂದರೆ ಹರಿ ಮನೆಯೊಳಗೆ ಇರಲಿಲ್ಲ. ಹಾಗೆ ಓಡಿ ಬರಲು ನಿನಗಾದರೂ ಸಾಧ್ಯವಿದೆಯೇನು?" ಎಂದು ಸೀತಮ್ಮ ಮಗಳ ದೇಹವನ್ನೇ ದಿಟ್ಟಿಸಿದರು.

ಕಮಲೆಗೆ ಅರ್ಥವಾಯಿತು. ಅವಳ ಸಿಟ್ಟು ಇಳಿಯಿತು. ಮಾತಿನಲ್ಲಿ ದೈನ್ಯತೆ ತುಂಬಿ ಬಂತು. "ಅಮ್ಮಾ, ಈ ಮೊದಲನೇ ಸಲ ನೀವಾದರೂ ಕರೆದು ಕೊಂಡು ಬರುವಿರೆಂದು ನಂಬಿದ್ದೆ. ಅದು ನನ್ನ ಋಣದಲ್ಲಿಲ್ಲವೆಂದು ಕಾಣು ತ್ತದೆ. ಅತ್ತೆ ನನಗೆ ಸೊದಲೇ ಇಲ್ಲ. ಏನೇನು ಅನುಭವಿಸಲು ದೇವರು ಬರೆ

ದಿದ್ದಾನೊ? ಎಂದು ಹೇಳಿ ಕಣ್ಣೊರಸಿಕೊಂಡಳು. ಅದರಿಂದ ಸೀತಮ್ಮನವರಿಗೆ ಅಪಾರವಾದ ನೋವು ಉಂಟಾದರೂ ಅಳಲು ಇದು ತಕ್ಕ ಸಂದರ್ಭವಲ್ಲ ವೆಂಬುದು ಅವರ ತಾಯಿ ಹೃದಯಕ್ಕೆ ಹೊಳೆಯದೇ ಇರಲಿಲ್ಲ. ಹತಾಶ ಸ್ಥಿತಿಯಲ್ಲಿದ್ದ ಗರ್ಭಿಣಿ ಮಗಳಿಗೆ ಧೈರ್ಯದ ಹಿತವಚನದ ಅಭಯ ಕೊಡಲು ಅವರು ನಿರ್ಧರಿಸಿ ಉತ್ತರಕೊಟ್ಟರು. "ಛೇ, ನೀನು ಹೀಗೆಲ್ಲ ಅಳಬಾರದು. ನೋಡು. ಅದರಿಂದ ನಿನ್ನ ಕೂಸಿನ ಮೇಲೂ ಪರಿಣಾಮವಾಗುತ್ತದೆ. ನಿನಗೆ ಅಂಥಾ ಕಷ್ಟವೇನು. ? ಸೀತಾದೇವಿಯಂತೆ ಅಡವಿಪಾಲು ಮಾಡುತ್ತಾರೆಂದು ತಿಳಿದೆಯಾ? ಅರಣ್ಯಕ್ಕಟ್ಟಿದ್ದ ದೇವಿಯನ್ನೂ ದೇವರು ಕೈ ಬಿಡಲಿಲ್ಲ. ಒಂದು ದಾರಿ ತೋರಿಸಿದ. ಹಾಗಿರುವಾಗ ಕೈ ಹಿಡಿದವನು ಏನಾದರೂ ಒಂದು ವ್ಯವಸ್ಥೆ ಮಾಡದೆ ಇರುತ್ತಾನೇನು? ಮರುಳು ನಿನಗೆ'' ಎಂದು ಗದರಿಸಿ ಸಮಾಧಾನ ಪಡಿಸಿದರು. "ನಾವು ಹೊರಡುವ ವರೆಗೂ ನೀನು ಇಲ್ಲೇ ಇರು. ಗಾಡಿ ಬಂದ ದಿನವೇ ನಿನ್ನೂರಿಗೆ ಕಳಿಸುತ್ತೇನೆ. ಬಾಗೀರಥೀಯ ಕಡಸು ಕರು ನಿನಗೆ ಕೊಡಬೇಕೆಂದೇ ಸಾಕಿದ್ದೇನೆ." ಎಂದು ಗೆಲವಿನ ಸುದ್ದಿ ತಿಳಿಸಿದರು ಮಗಳಿಗೆ

ಹೀಗೆ ಹಾಂ ಹೂಂ ಎಂದು ದುಃಖದ ಬಂಡಿ ಎಳೆಯುವಾಗಲೇ ರಾಜಾ ಕಳಿಸಿದ ಗಾಡಿ ಬಂತು. ರಾಜಾ ಬಂದಿರಲಿಲ್ಲ. ಬದಲು ಇಬ್ಬರು ಆಳುಗಳನ್ನು ಕಳಿಸಿದ್ದ. ಅವನು ಕೊಟ್ಟಿದ್ದ ಪತ್ರ ಮುಟ್ಟಿಸಿ, "ಗಾಡಿಗೆ ತುಂಬಿಸುವುದನ್ನೆಲ್ಲ ತುಂಬಿಸಿ ನೀವು ಮೋಟಾರಿನಲ್ಲಿ ಹೊರಡಬೇಕಂತೆ. ನಾವು ಹಿಂದಿನಿಂದ ಗಾಡಿ, ಹೊಡೆದುಕೊಂಡು ಬರುತ್ತೇವೆ. ಅಯ್ಯ ಬೆಳ್ತಂಗಡಿಯಲ್ಲಿ ನಿಮ್ಮ ದಾರಿ ನೋಡುತ್ತಿದ್ದಾರೆ'' ಎಂದೂ ಪ್ರಸ್ತಾವನೆ ಓದಿದರು.

ಆ ಮೇಲೆ ಕಾಲ ವಿಳಂಬ ಮಾಡುವಂತಿರಲಿಲ್ಲ. ಒಂದೊಂದೇ ಪಾತ್ರೆ ಪರಡಿ, ಉದ್ಧರಣೆ, ಕವುಳಿಗೆ, ಹರಿವಾಣಗಳನ್ನು ಎಣಿಸಿ ಗೋಣಿ ಚೀಲಗಳಿಗೆ ತುರುಕಿಸಿ ಬಾಯಿ ಬಿಗಿದರು. ಒಂದೊಂದೇ ಗೋಣಿ ಚೀಲ ಬಂದು ಬಿದ್ದಂತೆ ಕಮಾನಿನ ಗಾಡಿತುಂಬ ತೊಡಗಿತು. ಅದರಲ್ಲಿ ಹೇರಿದ ವಸ್ತುಗಳು ಅಂಥಿಂಥವು ಎಂದು ಹೇಳುವುದೇ ಕಠಿನ. ಊರು ತೊರೆದು ಪರವೂರಿಗೆ ಹೊರಡುವ ಒಂದು ಸಂಸಾರ ಕಸಕಡ್ಡಿಗೂ ಕೈಯೊಡ್ಡುತ್ತದೆ. ಬಾವಿಕಟ್ಟೆಯ ಬದಿಯಲ್ಲಿ ನೆಟ್ಟ ಕೆಸು, ಮರಸಣಿಗೆಯ ಗಿಡಗಳನ್ನು ಹಿಡಿದೆಳೆದರು ಎಂದೆನಬೇಕೆ ? ತುಪ್ಪಗೆಣಸು

ಮರಗೆಣಸು, ಸುವರ್ಣಗಡ್ಡೆ, ಗೆಣಸುಗಳೂ ಕಹಿಯಲ್ಲ. ಮನೆಯೊಳಗೆ ಮಳೆಗಾಲಕ್ಕೆಂದು ತೆಂಗಿನ ಒಲಿಯಲ್ಲಿ ಸುತ್ತಿ ಅಡ್ಡಬಿದಿರಿಗೆ ಕಟ್ಟಿದ್ದ ಸವುತೆ, ಮುಳ್ಳುಸವುತೆ, ಇಬ್ಬುಳ್ಳಿ, ಕುಂಬಳಕಾಯಿಗಳನ್ನೂ ಬಿಡುವಂತಿದ್ದಿಲ್ಲ. ಹೀರೆ, ಸೋರೆ, ಬೇಂಡೆ, ಅಳಸಂಡೆ, ಹಾಗಲ, ಕುಂಬಳಗಳ ಬೀಜಗಳನ್ನೂ ಚಿಂದಿ ಬಟ್ಟೆಯಲ್ಲಿ ಸಣ್ಣಸಣ್ಣ ಗಂಟುಕಟ್ಟಿ ಹಂಡೆಯೊಳಗಿಟ್ಟರು. ಮಲ್ಲಿಗೆ, ಬಯು ಮಲ್ಲಿಗೆ, ದುಂಡು ಮಲ್ಲಿಗೆ, ಗುಂಡು ಮಲ್ಲಿಗೆ, ಚೆಂಡು ಗೊಂಡೆ ಮಲ್ಲಿಗೆಗಳ ಗಿಡ ಬೀಜಗಳನ್ನೂ ಸೀತಮ್ಮ ಮರೆಯಲಿಲ್ಲ. ತಮ್ಮ ಮನೆಯಲ್ಲಿದ್ದ, ನೆರೆಯಲ್ಲಿದ್ದ, ಊರಿನಲ್ಲಿದ್ದ ಕೈಗೆ ಸಿಗುವ, ಬಾಯಿಗೆ ಬರುವ ಗಿಡ ಬೀಜಗಳನ್ನೂ ಬಿಡಲಿಲ್ಲ ತುಳಸಿ, ತೆಂಗು, ಬಾಳೆ ಸಸಿಗಳನ್ನೂ ಕಟ್ಟಿ ಗಾಡಿಯಲ್ಲೇರಿಸಿದರು. ಗಾಡಿಯಲ್ಲಿ ಹೇರಿದ ಸಾಮಾನು ಸರಂಜಾಮುಗಳನ್ನು ಕಂಡರೆ ದೇಶಬಿಟ್ಟು ದೇಶಕ್ಕೆ ವಲಸೆ ತೆರಳುವ ಪ್ರಾಚೀನ ಆರ್ಯರ ಒಂದು ಕುಟುಂಬವೆಂದು ಭಾಸವಾಗುತ್ತಿತ್ತು.

೧೯೩೩ನೇ ಮೇ ಶುಕ್ಲಪಕ್ಷದ ಶುಭದಿವಸ, ಶುಭ ಮುಹೂರ್ತದಲ್ಲಿ ಸಾಯಂಕಾಲ ಪಯಣಕ್ಕೂ ಅವರು ಸಿದ್ಧರಾದರು. ರಾತ್ರಿ ಅವರೆಲ್ಲ ಉಡುಪಿಯಲ್ಲಿ ತಂಗಿ ಮರುದಿನ ಮುಂಜಾನೆ ಬಸ್ ಹತ್ತುವುದೆಂದು ನಿಶ್ಚಯ ಮಾಡಿದ್ದರು. ನಿತ್ಯ ಕರ್ಮದ ದೇವರ ಪೆಟ್ಟಿಗೆ, ಉಡುಗೆ ತೊಡುಗೆಗಳ ಟ್ರಂಕ್ ಮತ್ತು ಹಾಸಿಗೆಗಳನ್ನು ಗಾಡಿಯವರು ಉಡುಪಿಯಲ್ಲಿ ಒಪ್ಪಿಸಬೇಕೆಂದೂ ತಿಳಿಸಿದರು. ಅಕ್ಕನ ಮನೆ ತೋರಿಸಲು ಗಾಡಿಯವರೊಂದಿಗೆ ಹರಿ ಮೊದಲೇ ಹೊರಟ. "ಮೂವರು ಒಮ್ಮೆ ಹೊರಡಬಾರದಂತೆ. ನೀನು ಉಡುಪಿ ವರೆಗೆ ಬಾ. ಅಕ್ಕನ ಮನೆಯಲ್ಲಿ ಎರಡು ದಿನ ಇದ್ದು ಹೋಗು. ಹಡೆವಕಾಲಕ್ಕೆ ಒಂದು ತಿಂಗಳಾದರೂ ನಿನ್ನನ್ನು ನೋಡಿಕೊಳ್ಳಲು ಅವಳಿಗೆ ಒತ್ತಾಯ ಮಾಡುತ್ತೇನೆ. ಕರು ಈಗ ಬಲ್ಲಾಳರ ಮನೆಯಲ್ಲಿರಲಿ. ನೀನು ಊರಿಗೆ ಮರಳಿದ ಮೇಲೆ ಹೊಡೆಸಿಕೊಂಡು ಹೋಗು" ಎಂದು ಸೀತಮ್ಮನವರು ಕಮಲೆಯನ್ನು ಸಂಗಡ ಕರೆದುಕೊಂಡರು.

ಮನೆಗೆ ಸರಪಳಿ ಸಿಕ್ಕಿಸಿ ಹೊರಡುವಾಗ ಸೀತಮ್ಮನವರಿಗೆ ಅಳು ಉಕ್ಕಿ ಬಂತು. ಅಂಗಳದಲ್ಲಿ ತುಳಸಿ ಕಟ್ಟೆಗೆ ಪ್ರದಕ್ಷಿಣೆ ಬಂದು, ದೈವ ದೇವರನ್ನು ಸ್ಮರಿಸಿ ಸಾಷ್ಟಾಂಗ ನಮಸ್ಕರಿಸಿ ಎದ್ದಾಗ ಗೋವಿಂದರಾಯರ

ಕಣ್ಣುಗಳಲ್ಲಿ ಕಂಬನಿ ತುಂಬಿತ್ತು. ಅಂಗಳದಲ್ಲಿ ರಾಮನಾಯ್ಕ, ತೌಡ, ಸುಬ್ಬ ಹಾಗೂ ಅವರ ಹೆಂಡಂದಿರು ತಮ್ಮ ಮರಿಮಕ್ಕಳೊಂದಿಗೆ ಕಣ್ಣೀರ ಸುತ್ತ ನಿಂತಿದ್ದರು. "ಅಯ್ಯ, ಮುಂದಿನ ವರುಷ ಉಡುಪಿ ಪರ್ಯಾಯಕ್ಕಾದರೂ ನಮ್ಮ ಊರಿಗೆ ಬನ್ನಿ" ಎಂದು ಎಲ್ಲರೂ ಹೇಳುವವರೇ. "ಹಡೆದ ಎರಡು ಹೆಣ್ಣುಗಳಿವೆಯಲ್ಲ. ಅವನ್ನು ನೋಡಬೇಕಾದರೂ ಬಂದೇ ಬರುತ್ತೇನೆ" ಎಂದು ಸೀತಮ್ಮನವರು ನುಡಿದು ಭರವಸೆ ಕೊಟ್ಟರು. "ನೀವು ಸ್ವಲ್ಪ ಮುಂದಕ್ಕೆ ನಡೆಯಿರಿ. ಬಲ್ಲಾಳರ ಮನೆಯ ದಾರಿಯಿಂದ ಬರುತ್ತೇನೆ" ಎಂದು ಗೋವಿಂದರಾಯರು ಅಡ್ಡ ತಿರುಗಿದರು. ಅಂಗಳಕ್ಕೆ ಬಂದು ನಿಂತಿದ್ದ ಬಲ್ಲಾಳರನ್ನು ಕಂಡೊಡನೇ ಗೋವಿಂದರಾಯರಿಗೆ ದುಃಖವನ್ನು ತಡೆಯಲಾಗಲಿಲ್ಲ. "ಈ ಊರಿನ ಋಣ, ಈ ನೀರಿನ ಋಣ ಕಡಿಯಿತು ಬಲ್ಲಾಳ್ರೇ" ಎಂದು ಅವರು ಮರುಗಿದರು.

"ಛೇ ಮಾಸ್ಟ್ರೇ, ನೀವು ಅಳಬಾರದು. ವಯಸ್ಸಾದ ಮೇಲೆ ಮಕ್ಕಳನ್ನು ಆಶ್ರಯಿಸುವುದು ಪರಮಗುಣ. ಅದಕ್ಕಾಗಿ ನೀವು ಆನಂದ ಪಡಬೇಕು. ನೀವು ನಿಶ್ಚಿಂತೆಯಿಂದಿರಿ. ಮಕ್ಕಳು ದುಡಿದು ಹಾಕುತ್ತಾರೆ. ನಮಗೆ ಯಾವ ಊರಾದರೇನು? ಯಾವುದು ಶಾಶ್ವತ? ನಮ್ಮ ಹಿರಿಯರು ಇಲ್ಲಿಗೆ ಎಲ್ಲಿಂದ ಬಂದರೆಂದು ನಮಗೆ ಗೊತ್ತಿದೆಯೇನು? ಎಲ್ಲ ಪರಮಾತ್ಮನ ಲೀಲೆ ಕುಣಿಸುವವನು ಅವನು. ಕುಣಿಯುವ ಕರ್ಪೂರದ ಗೊಂಬೆಗಳು ನಾವು. ಅದಕ್ಕೆ ಚಿಂತೆ ಮಾಡಬಾರದು" ಎಂದು ದುಃಖ ಶಮನದ ಮಾತುಗಳನ್ನಾಡಿದರು.

"ಬಲ್ಲಾಳ್ರೇ, ನಾನಾಗಲೀ ನಮ್ಮ ಮಕ್ಕಳಾಗಲೀ ಏನಾದರೂ ಕಾಯಾ ವಾಚಾ ಮನಸಾ ತಪ್ಪು ಮಾಡಿದ್ದರೆ ಕ್ಷಮಿಸಿ."

ಪ್ರತಿ ನಮಸ್ಕಾರ ಮಾಡಿದ ಬಲ್ಲಾಳರಿಗೂ ಕಣ್ಣಲ್ಲಿ ನೀರು ಬಂತು ಗೋವಿಂದರಾಯರಿಗಿಂತ ವಯಸ್ಸಿನಲ್ಲೂ ಅವರು ಸ್ವಲ್ಪ ಹಿರಿಯರು. "ತಪ್ಪು ನಿಮ್ಮಿಂದಾಗಿಲ್ಲ. ನಿಮ್ಮ ಮಕ್ಕಳಿಂದಲೂ ಆಗಿಲ್ಲ. ದೇವರು ನಿಮಗೆ ಮುತ್ತಿನಂತಹ ಮಕ್ಕಳನ್ನು ದಯಪಾಲಿಸಿದ್ದಾನೆ. ಅವರಿಗೆ ಉತ್ತರೋತ್ತರ ಅಭಿವೃದ್ಧಿಯಾಗುತ್ತದೆ." ಎಂದು ಬಲ್ಲಾಳರು ಬಂದು ಆಲಿಂಗಿಸಿದರು.

ವೇಳೆಯಾದುದರಿಂದ ಗೋವಿಂದರಾಯರು ಹೊರಟು ಹೆಂಡತಿ ಮಕ್ಕಳನ್ನು ಕೂಡಿಕೊಂಡರು. ದಾರಿಯುದ್ದಕ್ಕೂ ಅಲ್ಲಲ್ಲಿ ಬೆಟ್ಟ ಗದ್ದೆಗಳ ಮೇಲೆ ಹೆಂಗಸರು ಮಕ್ಕಳೊಂದಿಗೆ ನಿಂತು ಸೀತಮ್ಮನವರನ್ನು ಮಾತನಾಡಿಸುತ್ತಿದ್ದರು. ಉಡುಪಿಗೆ ಬಂದಾಗ ಸಂಜೆಯಾಗಿತ್ತು. ಅಲ್ಲಿ ಉಳಿದು ಮುಂಜಾನೆ ಮುಂದಿನ ಪ್ರಯಾಣ ಬೆಳೆಸಿದರು. ಗಾಡಿ ಮಾತ್ರ ಅಂದು ರಾತ್ರಿಯೇ ಹೊರಟಿತ್ತು. ಬೇಸಿಗೆ ಕಾಲವಾಗಿದ್ದುದರಿಂದ ಎತ್ತಿನ ಗಾಡಿಗಳನ್ನು ಹಗಲಿಗೆ ಹೊಡೆಯುವುದು ಕಡಿಮೆ. ರಾತ್ರಿಯೇ ಅವುಗಳ ಪಯಣ. ಹಗಲಿಗೆ ಎಲ್ಲಾದರೂ ಮರಗಳ ನೆರಳಲ್ಲಿ ತಂಗಿ ಗಂಜಿ ಬೇಯಿಸಿ, ಉಪ್ಪು ಹುಳಿ ಮೆಣಸು ಕೊಬರಿಗಳ ಚಟ್ನಿ ಅರೆದು ಉಣ್ಣುವರು. ಎತ್ತುಗಳಿಗೆ ಹುರುಳಿ ಹುಲ್ಲುಗಳೇ ಆಹಾರ. ಗಾಡಿಯ ಹಿಂಬದಿ ಕಟ್ಟಿದ್ದ ಬಾಗೀರಥಿಗಂತೂ ಇದು ಹೊಸ ಅನುಭವ. ಮೊದಲು ಅದು ಎತ್ತುಗಳಂತೆ ಭರದಿಂದ ನಡೆಯಲು ಸಮ್ಮತಿಸಲೇ ಇಲ್ಲ. ಮನೆಯ ಸವಿ ತಿಂಡಿಗಳ, ಕರುಗಳ ಸ್ಮರಣೆಯಾಗಿ ಹಿಂದೆ ಹಿಂದೆ ಎಳೆಯಲು ಯತ್ನಿಸುತಿತ್ತು. ರಸ್ತೆಯ ಅಕ್ಕ ಪಕ್ಕಗಳಲ್ಲಿದ್ದ ಗುಡ್ಡ, ಗದ್ದೆಗಳಿಗೆ ಓಡಲು ಆತುರಪಡುತ್ತಿತ್ತು. ಒಬ್ಬ ಆಳು ಚಬುಕು ಹಿಡಿದು ಅದರ ಬೆನ್ನ ಹಿಂದೆ ಬರಬೇಕಾಯ್ತು. ಒಂದು ರಾತ್ರಿಯ ಪಯಣಕ್ಕೆ ಅದರ ಕಾಲುಗಳು ಸೋತುವು. ಎತ್ತುಗಳಂತೆ ಅದರ ಪಾದಗಳಿಗೆ ಲಾಳ ಬಿಗಿದದ್ದೂ ಇಲ್ಲ. ಅದರ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು. ನೀರಬೈಲೂರಿಗೆ ಮೋಟಾರ್ ಬಂದಾಗ ರಸ್ತೆಯ ಬದಿಯಲ್ಲಿ ಬಿಚ್ಚಿಬಿಟ್ಟಿದ್ದ ಗಾಡಿಯ ಹಿಂಬದಿ ಬಾಗೀರಥಿ ಮಲಗಿದ್ದುದನ್ನು ಸೀತಮ್ಮನವರು ಬಸ್ಸಿನಿಂದ ಇಣಿಕಿ ನೋಡಿದರು. ಅದಕ್ಕೂ ಗುರುತು ಹತ್ತಿ ಅದು ಎದ್ದು “ ಅಮ್ಮಾ ಅಮ್ಮಾ ” ಎಂದು ಮೊರೆಯಿಟ್ಟಿತು “ಅಮ್ಮಾ, ದನ ಬಹಳ ಹೆದರಿದೆ. ಎಲ್ಲಿಗೋ ಕರೆದೊಯ್ಯುತ್ತಿದ್ದಾರೆಂದು ಭಾವಿಸಿ ಬರಲು ಕೇಳಲೊಲ್ಲದು. ಇನ್ನೂ ನಾಲ್ಕು ರಾತ್ರಿಯ ಪಯಣವಿದೆ. ಕಾರ್ಕಳ, ಮೂಡಬಿದರೆ, ವೇಣೂರು, ಬೆಳ್ತಂಗಡಿ ನಾಲ್ಕು ರಾತ್ರಿ, ನಾಲ್ಕು ಹಗಲು. ಏನು ಮಾಡುತ್ತದೋ ಏನೋ'' ಎಂದ ಆಳುಗಳು ಬಂದು ಅರುಹಿದರು.

“ ಒಂದು ದಿನ ತಡವಾದರೂ ಚಿಂತಿಲ್ಲ. ಓಡಿಸ ಬೇಡಿ. ಹೊಡೆಯ ಬೇಡಿ. ಗಬ್ಬದ್ದು. ಓಲೆ ಬೆಲ್ಲ ಒಂದು ಕಟ್ಟು ತೆಗೆದು ಹಿಡಿದುಕೊಳ್ಳಿ. ಅದನ್ನು

ಕೈಯಲ್ಲಿ ಹಿಡಿದುಕೊಂಡರೆ ಬಸ್ರೂರು ವರೆಗೂ ಮಗುಪಿನಂತೆ ಒರುತ್ತದೆ. ಎಂದು ಸೀತಮ್ಮನವರು ಒಂದು ಉಪಾಯವನ್ನು ತಿಳಿಸಿದರು. ಬಸ್ಸಿನಿಂದ ಇಳಿದು ಬಾಗೀರಥಿಯು ಮೋರೆ ಕುತ್ತಿಗೆಗಳ ಮೇಲೆ ಕೈಯಾಡಿಸಿ, ನೈವಡವಿ, " ನಿನ್ನನ್ನು ಕಾಪು ಮಾರಿಯಮ್ಮನಿಗೆ ಬಲಿಕೊಡಲು ಅವರು ಒಯ್ಯುವುದಿಲ್ಲ. ಕಟುಕರಿಗೂ ನಾವು ಕೊಟ್ಟಿಲ್ಲ. ನಮ್ಮ ಊರಿಗೇ ಕರೆದೊಯ್ಯುತ್ತಿದ್ದೇವೆ" ಎಂದು ಸಂತೈಸುವ ನಾಲ್ಕು ಮೋಹದ ಮಾತುಗಳನ್ನಾಡಿ ಹೊರಟರು.

ನಿಶ್ಚಿತ ದಿನ ಹೊರಡಲು ಮೊದಲೇ ತಿಳಿಸಿದ್ದ ರಾಜಾ ಅಂದು ಬಸ್ ಬರುವ ಒಂದು ತಾಸು ಮೊದಲೇ ಸ್ಟ್ಯಾಂಡಿನಲ್ಲಿ ಹಾಜರಾಗಿದ್ದ. ಒಂದು ಬಸ್ ಬುಸುಗುಟ್ಟುತ್ತ ಬಂದು ನಿಂತೊಡನೆಯೇ ಅದಕ್ಕೆ ಪ್ರದಕ್ಷಿಣೆ ಒಂದು ಹಣಕಿ ಹಣಕಿ ನೋಡುವುದು ಅವನ ಕೆಲಸ. ಬರುವ ಬಸ್ ಒಂದೆರಡೇ. ಉಡುಪಿ ಕಾರ್ಕಳ ಮಾರ್ಗದಿಂದ, ಮೂಲ್ಕಿ ಮೂಡಬಿದರೆ ಲೈಸಿನ್ಸ್, ಮಂಗಳೂರು ಬಂಟ್ವಾಳ ದಾರಿಯಿಂದ, ಪುತ್ತೂರು-ಉಪ್ಪಿನಂಗಡಿ ಕಡೆಯಿಂದ ಚಾರ್ಮಾಡಿಘಾಟಿಗೆ ಬೆಳ್ತಂಗಡಿ ಮೂಲಕವೇ ಬಸ್‌ಗಳು ಓಡಾಡುತ್ತವೆ. ಅನೇಕ ಕಂಪೆನಿಗಳಿದ್ದುದ್ದರಿಂದ ಚಲಿಸುವ ಬಸ್ಸುಗಳೂ ಅಸಂಖ್ಯವೇ. ಒಮ್ಮೊಮ್ಮೆ, ನಿಶ್ಚಿತವೇಳೆಗೆ ನಿರೀಕ್ಷಿಸುವುದರಲ್ಲೂ ಅರ್ಥವಿಲ್ಲ. ಪೋಲೀಸ್ ಅಥವಾ ಇನ್ನಿತರ ಸರಕಾರೀ ಅಧಿಕಾರಿಗಳಿಗಾಗಿ, ಅವರ ಹೆಂಡರು ಮಕ್ಕಳಿಗಾಗಿ ಬಸ್ ಅವರ ಮನೆಗಳಿಗೆ ದಾರಿ ಬಿಟ್ಟು ನಡೆಯುವುದು. ಅವರ ಮನೆಗಳ ಮುಂದೆ ಅರ್ಧ ಮುಕ್ಕಾಲು ಗಂಟೆ ನಿಲ್ಲುವುದೂ ಸೇವಾ ಧರ್ಮ. ಇಲ್ಲದಿದ್ದರೆ ಕಂಪೆನಿ ಡೈರೆಕ್ಟರಿಗೆ ಅರ್ಜಿ ಬರೆಯಲು ಅಥವಾ ಡ್ರೈವರರ ಲೈಸನ್ಸ್ ಕ್ಯಾನ್ಸಲ್ ಮಾಡಲು ಅವರು ಹಿಂಜರಿಯುವುದಿಲ್ಲ. ಆದುದರಿಂದ ಕೆಂಪು ಮುಂಡಾಸು, ಅಥವಾ ಪಟ್ಟೆವಾಲರನ್ನು ದೂರದಿಂದ ಕಂಡೊಡನೆಯೇ ಬಸ್ಸಿನ ವೇಗ ಕಡಿಮೆಯಾಗಿ ಹೊತ್ತಿಗೆ ಮುಟ್ಟುವುದಿಲ್ಲ. ಹೀಗಾಗಿ ಬಸ್ ತಡವಾದ ದಿನ ಬೆಳ್ತಂಗಡಿಯ ಕಮಿಸ್ತಿ ಏಜಂಟರು ರಾಘವೇಂದ್ರರಾಯರಂತಹ ತಮ್ಮ ವಿಶ್ವಾಸಿ ಮಿತ್ರರ ಮುಂದೆ, " ಕಿತೇಂ, ತೂಂ ಕಸಲೆ ಉಲೈತಾ ? ನಿಮಗೆಷ್ಟು ಸಾರಿ ಹೇಳಲಿ ರಾಘವೇಂದ್ರರಾಯರೇ. ಬಸ್ ಚಾ ಕುಡಿಯಲು ಹಾಟೇಲಿಗೆ ಹೋಯ್ತು ಅಂತ ಹೇಳಿದರೆ ನೀವು ನಂಬುತ್ತೀರಾ? ಇನ್‌ಸ್ಪೆಕ್ಟರರ ಹೆಂಡತಿ ಲಂಗ ಬಿಚ್ಚಿ ಲಂಗ ಹಾಕಿಕೊಳ್ಳುವಾಗ ಹೊತ್ತಾಯಿತೆಂದು ಹೇಳಲಿಕ್ಕಾಗುತ್ತಿದೆಯೇ.

ಮೂಡಬಿದರೆಯ ಹತ್ರ, ಪೆಟ್ರೋಲಿನಲ್ಲಿ ಕಸ ಬಂತು ಎಂದು ಚಲನ್‌ನಲ್ಲಿ ಬರೆದುಬಿಟ್ಟರೆ ಸರಿ. ಕಿತ್ತೇ?" ಎಂದು ನುಡಿದು ನಗುವರು.

ಅವರು ಗಹಗಹಿಸುತ್ತಿದ್ದಾಗಲೇ ಉಡುಪಿಯ ಮೋಟಾರ್ ಬಂದಿತು ದೂರದಿಂದಲೇ ಗೋವಿಂದರಾಯರ ಮುಂಡಾಸನ್ನು ಗುರುತಿಸಿದ ರಾಜಾ "ಬಂದರು, ಬಂದರು" ಎಂದು ತನ್ನಷ್ಟಕ್ಕೆ ಆಡಿ ಕೊಳ್ಳುತ್ತಾ ಎದ್ದುನಿಂತು ತಾನಿದ್ದೇನೆಂದು ತಿಳಿಸಲು ಚಪ್ಪಾಳೆ ಹೊಡೆದ. "ಬೆಳ್ತಂಗಡಿ. ಇಳಿಯಿರಿ, ಇಳಿಯಿರಿ" ಎಂದು ಗೋವಿಂದರಾಯರು ಹೆಂಡತಿ ಕಡೆ ನೋಡಿ ನುಡಿದರು. "ಸೋಡಾ ಲೆಮನ್ ಕ್ರಶ್; ಸೋಡಾ ಲೆಮನ್ ಕ್ರಶ್; ಬೀಡಾ ಬೀಡಿ ಸಿಗರೇಟು; ಬೀಡಾ ಬೀಡಿ ಸಿಗರೇಟು; ಆರೇಂಜ್ ಅನಾನಾಸ್ ಬಾಳೆಹಣ್ಣು; ಆರೇಂಜ್ ಅನಾನಾಸ್ ಬಾಳೆಹಣ್ಣು" ಎಂದು ಮೂರು ನಾಲ್ಕು ಹುಡುಗರು ಬಸ್ಸಿನ ಸುತ್ತಲೂ ಸುತ್ತಿ ಕೂಗತೊಡಗಿದರು. ಮೋಹನನ ಬಾಯಲ್ಲಿ ನೀರೂರಿತು. ತಾಯಿಯ ಸೀರೆ ಹಿಡಿದೆಳೆಯುತ್ತ ಸೋಡಾ ಬೇಡಿದ. "ಇಲ್ಲೇ ಅಣ್ಣನ ಮನೆಯಿದೆ. ಊಟದ ಹೊತ್ತು. ಈಗ ಯಾಕೆ ನಿನಗೆ ಸೋಡಾ?" ಎಂದು ಅವರು ಕಣ್ಣು ಕೆಂಪಗೆ ಮಾಡಿದರೂ ರಾಜಾ ಕೇಳಿ ಕೊಡಿಸಿದ. "ವಿಜಯಾ ಎಲ್ಲಿ?" ಎಂದು ಕೇಳಿದರು ಸೀತಮ್ಮ. "ಕರೆದುಕೊಂಡು ಬರಲಿಲ್ಲ. ಬಸ್ ಲೇಟಾಗುತ್ತಿದೆ ಎಂದು ಹೇಳಿ ಬಿಟ್ಟು ಬಂದೆ" ಎಂದ ರಾಜಾ. ಟ್ರಂಕ್ ಹಾಸಿಗೆಗಳನ್ನು ಪೇದೆ ತಲೆಯ ಮೇಲೆ ಹೊರಿಸಿ ತನ್ನ ಬಾಡಿಗೆ ಮನೆಗೆ ಕರೆದುಕೊಂಡು ನಡೆದ.

ಊಟ ಉಪಚಾರ ಮುಗಿದ ಬಳಿಕ ಬಂಗಾಡಿಗೆ ತೆರಳುವ ವಿಷಯದ ಬಗ್ಗೆ ತಂದೆ ಮಗ ಚರ್ಚಿಸಿದರು. "ಬಂಟ್ವಾಳಕ್ಕೆ ಅಕ್ಕಿ ಹೇರಿಕೊಂಡು ಹೋದ ಅನೇಕ ಗಾಡಿಗಳು ಮರಳಿ ಬರುತ್ತವೆ. ರಾತ್ರಿ ಇಲ್ಲಿ ಮಲಗಿಕೊಂಡರೆ ಬೆಳಗಾಗುವಾಗ ಬಂಗಾಡಿಗೆ ಮುಟ್ಟುತ್ತದೆ. ನಾವೂರು ಮಿತ್ತಬಾಗಿಲ್ ರಸ್ತೆಯೂ ಅಷ್ಟು ಪಡ್ಪೋಶಿ ಅಲ್ಲ. ಆದರೆ ನೇತ್ರಾವತಿ ಹೊಳೆ ಮಾತ್ರ ದಾಟ ಬೇಕಾಗುತ್ತದೆ. ನಿಮಗೆ ಇಷ್ಟವಿಲ್ಲದಿದ್ದರೆ ಮುಂಡಾಜೆ ವರೆಗೆ ಬಸ್ಸಿನಿಂದಲೇ ತೆರಳಿ ಮುಂದೆ ನಾಲ್ಕು ಮೈಲು ಗಾಡಿ ಗೊತ್ತುಮಾಡೋಣ" ಎಂದು ರಾಜಾ ವಿವರಿಸಿದ.

' ಗಾಡಿ ಪ್ರಯಾಣ ಬೇಡ ರಾಜಾ. ಗಾಡಿ ಅತ್ತಿತ್ತ ವಾಲುತ್ತ ಹೋದಾಗ ಮೈ ಗುದ್ದಿದಂತಾಗುತ್ತದೆ. ಒಂದು ಹೊಳೆಯೂ ಇದೆಯೆನ್ನುತ್ತಿ ಅದಕ್ಕಿಂತ ಮುಂಡಾಜೆಯಿಂದ ನಾಲ್ಕು ಮೈಲು ನಡೆಯುವುದೇ ಲೇಸು. ನಮ್ಮ ಸಾಮಾನು ಬಹಳವಿಲ್ಲ. ಮುಂಡಾಜೆಯಲ್ಲಿ ಯಾರಾದರೂ ಆಳು ದೊರೆತರೆ ತಲೆ ಮೇಲೆ ಹೊರಿಸಿದ. " ಎಂದರು ಗೋವಿಂದರಾಯರು.

" ಹಾಗಿದ್ದರೆ ಈಗಲೇ ಹೊರಡ ಬೇಕು." ಎಂದು ರಾಜಾ ಹೇಳಿದುದು ಸುಭಾಷಿಣಿಯ ಕಿವಿಗೆ ಬಿದ್ದುದರಿಂದ ಅವಳು ಆಕ್ಷೇಪಿಸಿದಳು. "ಬಿಸಿಲಿಗೆ ಈಗ ಬಂದಿಳಿದಿದ್ದಾರಷ್ಟೆ. ಈಗಲೇ ಹೊರಡಿಸಿ! ಇಂದು ಇಲ್ಲೇ ಉಳಿದು ನಾಳೆ ಹೊರಟರೆ ಏನಾಗುತ್ತದೆ?" ಎಂದವಳು ಗಂಡನ ಮುಂದೆ ನುಡಿದಳು.

" ನಾಳೆ ಮಂಗಳವಾರ " ಎಂದರು ಗೋವಿಂದರಾಯರು. ಸುಭಾಷಿಣಿಯ ಮೋರೆ ಚಿಕ್ಕದಾದುದನ್ನು ಕಂಡ ರಾಜಾ, " ಅದಕ್ಕೇಕೆ ಚಿಂತೆ. ನೀನೂ ಹೊರಟು ಬಿಡು. ಹೇಗೂ ನಾನಲ್ಲಿ ಎರಡು ದಿವಸ ಇರುತ್ತೇನೆ. ನಾನು ಹಿಂದೆ ಬಂದಾಗ ಬಾ" ಎಂದು ಸಂತೈಸಿದ.

ತಂದೆ ಮಕ್ಕಳು, ತಾಯಿ ಸೊಸೆ ಮುಂಡಾಜೆಯಲ್ಲಿಳಿದು ಬಂಗಾಡಿಯ ರಸ್ತೆ ಹಿಡಿದರು. ಬಂಗಾಡಿ ಬಡಗು ದಿಕ್ಕಿನಲ್ಲಿದೆ. ಮುಂಡಾಜೆಯಿಂದ ಅಲ್ಲಿಗೆ ಎತ್ತಿನ ಗಾಡಿ ತೆರಳುವ ರಸ್ತೆಯನ್ನು ಕಡಿದಿರುವರು. ಹೆಬ್ಬಾವಿನಂತೆ ರಸ್ತೆ ಕಾಡಿನ ನಡುವೆ ನುಸುಳಿದೆ. ಇಕ್ಕೆಲಗಳಲ್ಲಿ ಸಣ್ಣ ಸಣ್ಣ ಗುಡ್ಡಗಳು. ಮುಂಡಾಜೆಯ ಸಮೀಪ ರಸ್ತೆಯ ಅಕ್ಕ ಪಕ್ಕಗಳಲ್ಲಿರುವ ಗುಡ್ಡಗಳಲ್ಲಿ ಕುರಿಚಲು ಗಿಡಗಳು. ಅಲ್ಲೊಂದು ಇಲ್ಲೊಂದು ದೊಡ್ಡ ಮರ. ಆದರೆ ಮುಂದೆ ನಡೆದಂತೆ ಈ ಕಾಡು ಸಮೃದ್ಧವಾಗಿದೆ. ಎಷ್ಟು ನಡೆದರೂ ರಸ್ತೆಯ ಇಬ್ಬದಿಗಳಲ್ಲಿ ಒಂದು ಮನೆಯಾಗಲೀ ಒಂದು ಅಂಗಡಿಯಾಗಲಿ ಇಲ್ಲ. ಗೋವಿಂದ ರಾಯರಿಗೆ ಸ್ವಲ್ಪ ಭಯವೂ ಆಯಿತು. " ಅರಣ್ಯ ಆರಂಭವಾಯಿತೇನು? " ಎಂದವರು ಪ್ರಶ್ನಿಸಿದರು.

"ಛೇ, ಅರಣ್ಯ ಇಷ್ಟು ಸಮೀಪವಿಲ್ಲ. ಇವೆಲ್ಲ ಏನು ಮಹಾ? ಈ ರಸ್ತೆಯ ಅಕ್ಕ ಪಕ್ಕದ ಕಾಡುಗಳು ಒಂದು ಫರ್ಲಾಂಗು ಕೂಡಾ ಅಗಲವಿಲ್ಲ. ಅವುಗಳ ಆಚೆ ಈಚೆ ಬೈಲು ಹಳ್ಳಿಗಳೂ ಮನೆಗಳೂ ಇವೆ. ಪಂಚಾಯತ್ ರಸ್ತೆಯನ್ನು ಇಬ್ಬದಿಯ ಹಳ್ಳಿಗಳ ಮಧ್ಯೆ ಕಡಿದಿದ್ದಾರೆ. ಅಷ್ಟೆ. ಇನ್ನೂ ಅರಣ್ಯದ ಬುಡಕ್ಕೆ

ಹತ್ತು ಹದಿನೈದು ಮೈಲುಗಳಿವೆ. ನೋಡಿ, ಅದು ಪಶ್ಚಿಮ ಘಟ್ಟದ ಸಾಲು. ಬಂಗಾಡಿಯಲ್ಲಿ ಅದು ಮುಮ್ಮೂಲೆಯಾಗಿದೆ. ಪಶ್ಚಿಮ ಮೂಲೆಯಲ್ಲಿರುವುದೇ ಕುದುರೆ ಮುಖ ಪರ್ವತಾವಳಿ. ಅವುಗಳಲ್ಲಿ ಹಿರಿದೇ ಕುದುರೇ ಮುಖ. ಇನ್ನೊಂದು, ಸರಿ ನಮ್ಮ ಎದುರಿಗೆ ಕಾಣಿಸುವುದು ಎಳ್ನೀರ್ ಘಾಟಿ. ಒಂದು ಬದಿಯಲ್ಲಿ ಮಲಿತು ನಿಂತಿರುವ ಬೆಟ್ಟ ಬಲ್ಲಾಳ ರಾಯದುರ್ಗ"

ರಾಜಾ ಕೈತೋರಿಸಿ ವರ್ಣಿಸುವಾಗ ಎಲ್ಲರ ದೃಷ್ಟಿ ಆ ಪರ್ವತ ಶಿಖರಗಳ ಕಡೆಗೆ ಹರಿಯಿತು. ದೂರದಲ್ಲಿ ಇವು ಹಿಮಗಿರಿಗಳಂತೆ ಕಾಣಿಸಿದುವು. ಅವುಗಳ ಶಿಖರಗಳ ಮೇಲೆ ಬಂದು ಎರಗಿದ ಬಿಳಿ ಮೋಡಗಳು ಹಿಮರಾಶಿಯಂತೆ ಕಂಗೊಳಿಸಿದುವು. ಶಿಖರಗಳ ಮೈಯೆಲ್ಲ ಹಚ್ಚಹಸುರು.

"ಆ ಪರ್ವತಗಳ ಮೇಲೂ ಹಸುರು ಹುಲ್ಲು ಬೆಳೆದಿದೆಯಲ್ಲ" ಎಂದರು ಸೀತಮ್ಮ.

"ಹೌದು. ಶಿಖರದ ತುದಿಯಲ್ಲೂ ಹುಲ್ಲಿದೆ. ಗಿರಿಯಿಂದ ಕೆಳಗೆ ಇಳಿದಂತೆ ದಟ್ಟವಾಗಿದೆ. ಇನ್ನೂ ಕೆಳಗಿಳಿದರೆ ಅಲ್ಲಲ್ಲಿ ಕಣಿವೆಗಳೂ ಕಣಿಗಳೂ ಇವೆ. ಕಣಿವೆಗಳಲ್ಲಿ ಬೆಳೆದ ಕಾಡು ಪರ್ವತದ ಮೇಲೆ ಏರುತ್ತ ಏರುತ್ತ ನುಂಗಲೆತ್ನಿಸುತ್ತದೆ. ಪರ್ವತ ತಪ್ಪಲು ಹಾಗೂ ಬುಡಪ್ರದೇಶದಲ್ಲಿ ಘೋರಾರಣ್ಯ. ಈ ಪಶ್ಚಿಮ ಘಟ್ಟಗಳ ಸಾಲಿನಲ್ಲಿ ಹೆಚ್ಚು ಕಡಿಮೆ ಅರಣ್ಯ ೫೦ ಮೈಲುಗಳ ಅಗಲವಾದೀತು."

"ಹೌದಾ ರಾಜಾ, ಅಷ್ಟು ದೊಡ್ಡ ಅರಣ್ಯವೇ?"

"ಅಷ್ಟು ದೊಡ್ಡದು. ಉದ್ದ ಎಷ್ಟಿದೆಯೆಂದು ತಿಳಿದಿದ್ದೀ. ಸಾವಿರ ಮೈಲುಗಳಾದೀತು. ಮುಂಬಯಿಯಿಂದ ಕನ್ಯಾಕುಮಾರಿಯ ವರೆಗೂ ನೀಡಿದೆ. ಆಗುಂಬೆ, ಚಾರ್ಮಾಡಿ, ಸುಬ್ರಮಣ್ಯ ಮೊದಲಾದವುಗಳೆಲ್ಲ ಇದೇ ಸಾಲಿನಲ್ಲಿವೆ."

"ಅಬ್ಬಾ, ದೇವರ ವಿಚಿತ್ರ ಸೃಷ್ಟಿಯೆ? ಇಂಥ ಘೋರಾರಣ್ಯದಲ್ಲೇ ನಳದಮಯಂತಿ ಸಿಕ್ಕಿರಬೇಕು" ಎಂದು ಉದ್ಗರಿಸಿದ ಸೀತಮ್ಮನವರು ದಮಯಂತಿಯನ್ನು ನುಂಗಲೆತ್ನಿಸಿದ ಹೆಬ್ಬಾವಿನ ಸ್ಮರಣೆಯಿಂದ, "ಈ ಅರಣ್ಯದಲ್ಲಿ ಹೆಬ್ಬಾವೂ ಇದೆಯೇನು"? ಎಂದು ಕುತೂಹಲದಿಂದ ಕೇಳಿದರು.

"ಉಂಟೇನೆಂದು ಕೇಳುತ್ತೀಯಾ? ಎಲ್ಲ ಉಂಟು. ಹೆಬ್ಬಾವಿದೆ. ಆನೆ, ಕರಡಿ, ತೋಳ, ಹುಲಿ ಹುಲ್ಲೆ ಎಲ್ಲ ಉಂಟು. ಕಾಡಿನಲ್ಲಿ ಅವುಗಳದೇ ರಾಜ್ಯ. ಒಂದೆರಡು ವಿಧದ ಪ್ರಾಣಿಗಳೇನು? ಒಂದೊಂದು ಜಾತಿಯಲ್ಲಿ ಮತ್ತೆ ಸಣ್ಣ ದೊಡ್ಡ ಅನೇಕ ಉಪಜಾತಿ. ಬಲಿಪ ಎಂಬ ಒಂದು ಹುಲಿ ನನ್ನಷ್ಟು ಎತ್ತರ, ನನ್ನ ಎರಡರಷ್ಟು ಉದ್ದವಿದೆ. ಒಮ್ಮೆ ಬಂದರೆ ಹತ್ತಿಪ್ಪತ್ತು ದನಗಳನ್ನು ಅಪ್ಪಳಿಸಿ ಬಿಡುತ್ತದೆ. ದೊಡ್ಡ ಎಮ್ಮೆಯನ್ನು ಬೆನ್ನ ಮೇಲೆ ಹಾಕಿ ಕೊಂಡು ಓಡಾಡುತ್ತದೆ."

ಹುಲಿಯ ವರ್ಣನೆ ಕೇಳಿದ ಸೀತಮ್ಮನವರಿಗೆ ಬಾಗೀರಥಿಯ ನೆನಪಾಯ್ತು. "ಹಟ್ಟಿಗೆ ಗೋಡೆ ಕಟ್ಟಿಸಿದ್ದೀಯಾ?" ಎಂದವರು ಪ್ರಶ್ನಿಸಿದರು.

"ನೀವು ಈಗಲೇ ಅತ್ತೆಯವರನ್ನು ಹೆದರಿಸಿ ಬಿಡಿ " ಎಂದು ಸುಭಾಷಿಣಿ ನುಡಿದು ಕಡೆಗಣ್ಣಿನಿಂದ ಗಂಡನನ್ನು ನೋಡಿದಳು.

"ಹಾಂ, ಹೆದರಿದರೆ ಆಗುತ್ತದೇನು? ಹೆದರಬೇಕೇಕೆ? ಮನುಷ್ಯ ಯಾವ ಪ್ರಾಣಿಗೂ ಹೆದರುವುದಿಲ್ಲ. ಎಲ್ಲ ಮನುಷ್ಯನಿಗೆ ಅಂಜುವವು. ಆ ಘೋರಾರಣ್ಯದಲ್ಲೂ ಮಲೆ ಕುಡಿಯರೆಂಬ ಒಂದು ಜಾತಿಯ ಹಿಂದುಳಿದ ಜನ ವಾಸಿಸುತ್ತಾರೆ. ಆನೆ ಬಂದರೂ ಅವರು ಹೆದರುವುದಿಲ್ಲ. ಆನೆ ಕರಡಿ ಹುಲಿ ಎಲ್ಲಕಡೆ ಇರುವುದೂ ಇಲ್ಲ. ಸಣ್ಣ ಸಣ್ಣ ಕಾಡಿನಲ್ಲಿ ಅವುಗಳ ಸಂತಾನವಿಲ್ಲ. ನೆರಿಯ ಕಾಡಿನಲ್ಲಿ ಆನೆಯಿದೆ. ದಟ್ಟ ಅಡವಿಯಲ್ಲಿ ಅವೆಲ್ಲ ಅಲೆಯುತ್ತವೆ. ಬೈಲು ಹಳ್ಳಿಗಳಿಗೆ ಇಳಿಯುವುದೇ ಅಪರೂಪ. ಇಳಿಯ ಬೇಕಾದ ಅವಶ್ಯಕತೆಯೂ ಅವುಗಳಿಗಿಲ್ಲ. ಕಾಡಿನಲ್ಲಿ ತಿಂದು ತೇಗಲು ಅವುಗಳಿಗೆ ಕಡಿಮೆಯೋ" ಎಂದು ರಾಜಾ ಭಯ ನಿವಾರಣೆಗೊಳಿಸಿ, ಅಕ್ಕ ಪಕ್ಕದ ಕಾಡುಗಳ ಕಡೆಗೆ ಕೈ ತೋರಿ "ಇಂಥ ಕಾಡುಗಳಲ್ಲೆಲ್ಲ ಹುಲಿಗಳಿವೆಯೇನು? ಹುಲ್ಲೆ ಮೊಲಗಳಿರಬಹುದು. ಕಟ್ಟಿಗೆಗಾಗಿ ಹಳ್ಳಿಯ ಜನ ಈ ಕಾಡನ್ನು ಇನ್ನೆಷ್ಟು ದಿನ ಬಿಟ್ಟಾರು? " ಎಂದುಸುರಿದ.

"ಕಾಡು, ಕಟ್ಟಿಗೆ" ಎಂಬ ಮಾತು ಆಲಿಸಿ ಸೀತಮ್ಮನವರ ಕಿವಿ ಅರಳಿತು. "ಹೌದು, ಏನು ಕಟ್ಟಿಗೆ? ಎಷ್ಟು ಅನುಕೂಲ! ಕರಾವಳಿಯಲ್ಲಿರುತ್ತಿದ್ದರೆ ಅದರ ಸಂತಾನಉಳಿಯುತ್ತಿದ್ದಿಲ್ಲ" ಎಂದು ಆಶ್ಚರ್ಯ ವ್ಯಕ್ತಪಡಿಸಿದರು. "ಸಂತಾನ"ಎಂಬ ಅತ್ತೆ ಮಾತು ಕೇಳಿ ಸುಭಾಷಿಣಿ ನಕ್ಕಳು.

ಆ ಮಾತು, ಈ ಮಾತು, ಸುಖದುಃಖದ ಮಾತು, ನಕ್ಕುನಗಿಸುವ ಮಾತುಗಳಲ್ಲಿ ಕಾಲ್ನಡಿಗೆಯ ಆಯಾಸ ಗೊತ್ತಾಗಲಿಲ್ಲ. ಮೈಲು ಕಲ್ಲುಗಳನ್ನೆಷ್ಟು ದಾಟಿ ಬಂದೆವೆಂದು ನೋಡಲೂ ಇಲ್ಲ. "ಇನ್ನು ಬಹಳ ದೂರವಿಲ್ಲ. ಒಂದು ಕೂಗಿನ ಅಳತೆ" ಎಂದು ನಂಬಿಸುತ್ತ ರಾಜಾ ಕರೆದುಕೊಂಡು ಬಂದ. ಒಂದೆಡೆ ರಾಜಾ ನಿಂತು, "ಹಾಂ, ಆಯ್ತು. ಇಲ್ಲಿಗೆ ನಾಲ್ಕು ಮೈಲುಗಳಾದುವು. ಈ ಕಾಸರಕನ ಮರವೇ ಮುಂದಾಜೆಯಿಂದ ಇಲ್ಲಿಗೆ ನಾಲ್ಕನೇ ಮೈಲು ಕಲ್ಲು. ಇಲ್ಲಿ ತಿರುಗಿದರೆ ಸರಿ. ಅಕೋ, ಆ ಮುಳಿಹುಲ್ಲು ಮನೆಯೋ ನಮ್ಮದು. ಬಂತು. ಬಂತು" ಎಂದು ಹೇಳಿ ಒಳದಾರಿ ಹಿಡಿದ. ಮನೆಯು ಸಮೀಪ ಬಂದಂತೆ "ಓ ಬೋರಗೌಡಾ, ಓ ಅಹ್ಮದ್ ಬ್ಯಾರಿ" ಎಂದು ಕೂಗಿ ಕರೆಯತೊಡಗಿದ.

ಮುಖ ಮಂಟಪಕ್ಕೆ ಬಂದು, "ಅಯ್ಯಬ್ಬ" ಎಂದು ಕುಳಿತ ಗೋವಿಂದರಾಯರು ಮುಂಡಾಸನ್ನು ಬಿಚ್ಚಿ ಅದರ ಚುಂಗಿನಿಂದಲೇ ಮುಖ ಮೈಯಲ್ಲಿ ಒಸೆದು ಹರಿಯುತ್ತಿದ್ದ ಬೆವರನ್ನೊರಸಿಕೊಂಡರು. "ನಾವು ಬೇಗ ಹೊರಟಿದುದೇ ಒಳ್ಳೆಯದಾಯ್ತು. ಕತ್ತಲೆ ಕವಿಯುವುದರೊಳಗೆ ಮನೆ ಮುಟ್ಟಿದೆವು. ಕತ್ತಲೆಯಾಗುತ್ತಿದ್ದರೆ ಮೋಹನ, ವಿಜಯಾ ನಡೆಯುತ್ತಿದ್ದಿಲ್ಲ. ದಾರಿಯೂ ಕಾಣುತ್ತಿದ್ದಿಲ್ಲ. ಇದೊಂದು ದೊಡ್ಡ ದಂಡಕಾರಣ್ಯ" ಎಂದು ನಿಟ್ಟುಸಿರು ಬಿಟ್ಟರು.

ಸುಭಾಷಿಣಿ ಕೇಳಿ ಕೇಳದವರಂತೆ ನಟಿಸಿದಳು.

# ೪ ನೆಯ ಅಧ್ಯಾಯ

ಭೂತಾಯಿಯ ಮೈ ಮೇಲಿನ ಕತ್ತಲೆಯ ಪರೆ ಹರಿದು ತಿಳಿ ಬೆಳಕಿನ ಪ್ರಕಾಶ ಹರಿದಾಗ ಪಡಸಾಲೆಯಲ್ಲಿ ಮಲಗಿದ್ದ ಗೋವಿಂದರಾಯರು ಕಣ್ಣೆವೆಗಳನ್ನು ತೆರೆದರು. ಬಸ್ಸಿನ ಪ್ರಯಾಣದ ಆಯಾಸ, ನಾಲ್ಕು ಮೈಲು ಕಾಡು ಗುಡ್ಡಗಳನ್ನೇರಿ ನಡೆದ ಬಳಲಿಕೆಗಳಿಂದ ಅವರಿಗೆ ಗಾಢ ನಿದ್ದೆ ಹತ್ತಿತ್ತು. ರಾತ್ರಿ ಚಾಪೆಯಲ್ಲಿ ಒರಗಿದ್ದ ಅವರಿಗೆ ಬಹಳ ಹೊತ್ತಿನ ವರೆಗೆ ಕಣ್ಣು ಜೊಂಪು ಹಿಡಿದಿರಲಿಲ್ಲ. ಪರಸ್ಥಳವಾದುದರಿಂದ ಒಮ್ಮೊಮ್ಮೆ ಕೆಲವರಿಗೆ ನಿದ್ದೆ ಹತ್ತದಿರುವುದು ಸಹಜವೇ. ಅದಲ್ಲದೆ, ಮನೆಯ ಸುತ್ತು ಮುತ್ತು ಹಾಗೂ ದೂರದಿಂದ ಚಿತ್ರ ವಿಚಿತ್ರವಾದ ಕೂಗುಗಳೂ ಅವರಿಗೆ ಕೇಳಿಸಿದುವು. ವನದ ವನ್ಯ ಜಂತುಗಳ ಸ್ವರವೇ ಇರಬೇಕೆಂದು ಅವರು ತರ್ಕಿಸಿದ್ದರು. ಅದರಿಂದ ಅವರು ಮೊದಲು ನಿದ್ರಾಪರವಶವಾಗಲಿಲ್ಲ. ಬೆಳಗಿನ ಜಾವಕ್ಕೆ ಮಾತ್ರ ನಿದ್ದೆಯ ಅಮಲು ಏರಿತು. ಅದನ್ನು ಬಿಡಿಸಲು ಕರಾವಳಿ ಹಳ್ಳಿಗಳಂತೆ ನಾಯಿ ಬಗುಳಿದುದೂ ಕೇಳಿಸಲಿಲ್ಲ, ಕಾಗೆಗಳ "ಕಾಕಾ" ಸ್ವರವೂ ಇರಲಿಲ್ಲ. ಕೋಳಿಗಳ ಸದ್ದಿಲ್ಲ. ಆದುದರಿಂದ ನಸುಕಿನಲ್ಲೇಳಲಿಲ್ಲ. ಮತ್ತು ಉದಯರಾಗವೂ ತಪ್ಪಿತು. ತಪ್ಪಿಗೆ ಪ್ರಾಯಶ್ಚಿತ್ತ ಮಾಡುವವರಂತೆ, "ನಾರಾಯಣ, ನಾರಾಯಣ" ಎಂದು ಉಚ್ಚರಿಸುತ್ತ ಮುಖಮಂಟಪಕ್ಕೆ ಬಂದರು. ರಾಜಾ ಇದ್ದಿರಲಿಲ್ಲ. ಅಲ್ಲಿಂದ ಅಡಿಗೆ ಮನೆಗೆ ತೆರಳಿದರು.

"ರಾಜಾ ಮೈ ಮೈ ಕಾಣುವ ಹೊತ್ತಿಗೇ ಹಾಸಿಗೆ ಬಿಟ್ಟಿದ್ದ. ಬೋರಗೌಡ, ಅಹ್ಮದ್ ಬ್ಯಾರಿಗಳನ್ನು ಕಂಡು ಈಗ ಬರುತ್ತೇನೆ. ನಾನು ಅತ್ತ ಹೋದಂದಿನಿಂದ ಅವರು ಕೆಲಸಕ್ಕೆ ಬಂದಂತೆ ತೋರುವುದಿಲ್ಲ. ಬರುವಾಗ ಹಾಲನ್ನು ತರುತ್ತೇನೆ ಕಾಫಿಗೆ" ಎಂದು ತಿಳಿಸಿ ಹೋದ. ಈಗ ಬಂದಾನು" ಎಂದು ಸೀತಮ್ಮ ನುಡಿದರು.

ಅಸ್ತಿಂಪ ಅಂಗಳಕ್ಕೆ ಇಳಿದ ಗೋವಿಂದರಾಯರು ಹೊಸವ್ಯಕ್ತಿಯನ್ನು ನಖಶಿಖಾಂತ ನೋಡುವಂತೆ ಈ ಹೊಸ ಮನೆಯನ್ನು ದಿಟ್ಟಿಸಿದರು. ಪುನಃ ಏನೋ ನೆನಪಾದಂತಾಗಿ ಅಡಿಗೆ ಮನೆಗೆ ಬಂದರು. ಅಲ್ಲಿಂದ ಪಡಸಾಲೆಗೆ ಕಾಲಿಟ್ಟು ಗೋಡೆ ಮಾಡುಗಳನ್ನು ನೋಡಿ ಪುನಃ ಮುಖಮಂಟಪಕ್ಕೆ ಹೊರಟರು. ಮನೆಯನ್ನು ತೆಂಕು ಬಡಗಾಗಿಯೇ ಕಟ್ಟಿದ್ದರು. ಮನೆಯ ಬಾಗಿಲು ಬಡಗು ದಿಕ್ಕಿಗಿದ್ದುದರಿಂದ ಅವರಿಗೆ ಸ್ವಲ್ಪ ಸಮಾಧಾನವಾಯ್ತು. ಗೋಡೆ ಮಾತ್ರ ಮಣ್ಣಿನದು. ಅಡ್ಡ ತೊಲೆ, ಜಂತಿ, ಕಂಬ, ಕುತ್ತಿಕಂಬಗಳಿಗೆ ಸಿಗಿದ ತೇಗು ಅಥವಾ ಸಾಗುವಾನಿ ಹಾಕಿಲ್ಲ. ಕಾಡಿನಿಂದ ಈಗ ಕಡಿದು ತಂದು, ನಾಲ್ಕೂ ಬದಿಗಳನ್ನು ಮಡುವಿನಿಂದ ಕೆತ್ತಿ ಜೋಡಿಸಿದಂತಿದೆ. ಕೆಲವು ತೊಲೆಗಳ ಬದಿಗಳನ್ನೂ ಕಡಿದಿರಲಿಲ್ಲ. ತೊಗಟೆಯನ್ನಷ್ಟೆ ಸುಲಿದಿರುವರು. ಒಣಗಿದ ಸಿಪ್ಪೆ ಅಲ್ಲಲ್ಲಿ ಒಟ್ಟಿಯ ಮೇಲಿನ ಕಪ್ಪು ಮುದ್ರೆಯಂತೆ ಕಾಣುತ್ತಿದೆ. ಮಾಡಿಗೆ ಬಿದಿರಿನ ಅಸ್ತಿ ಪಂಜರ. ಉದ್ದಕ್ಕೆ ತೊಡೆಯಷ್ಟು ದಪ್ಪದ ಬಿದಿರು ಅಡ್ಡಕ್ಕೆ ಹಾಕಿದ ಬಿದಿರುಗಳನ್ನೆಲ್ಲ ಸಿಗಿದಿರುವರು. ಎರಡನ್ನು ಜೋಡಿಸಲು ಹುರಿ ಹಗ್ಗವನ್ನೂ ಉಪಯೋಗಿಸಿರಲಿಲ್ಲ. ಕಾಡಿನಲ್ಲಿ ದೊರೆವ ಬೀಳುಗಳನ್ನೇ ಬಿಗಿದಿದ್ದರು. ಈ ಬಿದಿರಿನ ಗೂಡಿನ ಮೇಲೆ ಕರಾವಳಿಯಂತೆ ಮಡಲಿನ ಹೊದಿಕೆ ಹಾಸಿಯೇ ಇಲ್ಲ. ಬರೀ ಮುಳಿ ಹುಲ್ಲು ಛಾವಣಿ ಮಾಡಿರುವರು. ಹೀಗಾಗಿ ಅಲ್ಲಲ್ಲಿ ಬೆಳಕು, ಮನೆಯೊಳಗೆ ಅಡಗಲೆತ್ನಿಸುತ್ತಿರುವ ಕತ್ತಲೆಯನ್ನು ಹಣಕಿ ಹಣಕಿ ನೋಡುತ್ತದೆ. ಗಾಳಿಗೂ ಅಲ್ಲಲ್ಲಿ ಮುಳಿ ಹುಲ್ಲು ಹಾರಿ ಹೋಗಿವೆ. ಮುಳಿ ಹುಲ್ಲಿನಲ್ಲಿರುವ ಹುಳ ಹುಪ್ಪಡಿಗಳನ್ನು ಹಿಡಿದು ನುಂಗಲು ಹಕ್ಕಿ ಪಕ್ಕಿಗಳೂ ಕೆಲವೆಡೆ ಕೊಕ್ಕು ಕಾಲುಗಳಿಂದ ಕುಕ್ಕಿ, ಕೆದರಿವೆ. "ಮಳೆ ಬಂದರೆ ತಟಕು ನೀರು ಹೊರಗೆ ಹರಿಯಲಿಕ್ಕಿಲ್ಲ" ಎಂದು ತಮ್ಮ ಮನಸ್ಸಿನೊಳಗೇ ಅಂದುಕೊಂಡರು.

ಮುಖ ಮಂಟಪದಲ್ಲಿ ನಿಂತಾಗ ಇದಿರಿಗೆ ಅಂಗಳದ ಅಂಚಿನಲ್ಲಿ ಮತ್ತೊಂದು ಸಣ್ಣ ಗುಡಿಸಲು ಅವರಿಗೆ ತೋರಿತು. ಪ್ರಾಯಶಃ ಹಟ್ಟಿಯಿರಬೇಕೆಂದು ಊಹಿಸಿ ಅದನ್ನು ಪರಿಕಿಸಲು ಇಳಿದು ಬಂದರು. ಹೌದು. ಹಟ್ಟಿ. ಪೂರ್ವ ಪಶ್ಚಿಮಕ್ಕೆ ಉದ್ದ ಒಂದು 'ಹಾಲ್'. ಮುಖಮಂಟಪಕ್ಕೆ ಇದಿರಾಗಿ ತೆಂಕು ಮುಖವಾಗಿದೆ. ತೆಂಕು ಮುಖವಾಗಿಯೇ ಬಾಗಿಲು. ಆದರೆ

ಈ ಗೋಡೆಯನ್ನು ಮಾಡಿಗೆ ನಿಲುಕುವ ವರೆಗೂ ಏರಿಸಿಲ್ಲ. ಮಾಡಿಗೆ ಎರಡು ಮೊಳದಷ್ಟು ಸ್ಥಳ ಬಿಟ್ಟಿರುವರು. ಈ ಖಾಲಿ ಸ್ಥಳದಲ್ಲಿ ಒಂದೊಂದು ಮೊಳ ದೂರದಲ್ಲೊಂದರಂತೆ ಗೋಡೆಯಲ್ಲಿ ಬಿದಿರನ್ನು ಹುಗಿದಿರುವರು. ಹುಗಿದ ಬಿದಿರಿನ ತುದಿ ಮಾಡಿನ ಬಿದಿರಿಗೆ ಜೋಡಿಸಲಟ್ಟಿದೆ. ಈ ನೀಟ ಬಿದಿರುಗಳಿಗೆ ಬಿದಿರಿನ ಸಲಿಕೆಗಳನ್ನು ಅಡ್ಡ ಹೊಡೆದಿರುವರು. ಗಾಳಿ ಪ್ರವೇಶಕ್ಕೆ ಅನುಕೂಲವೆ. ದನಗಳ ಪ್ರವೇಶಕ್ಕೆ ಪೂರ್ವದಲ್ಲಿ ಒಂದೇ ಬಾಗಿಲು. ಪಶ್ಚಿಮದಲ್ಲಿ ಒಂದು ಕಿಟಕಿ. ಹಿಂಬದಿಯ ಗೋಡೆ ಮಾಡನ್ನೂ ಮುಟ್ಟುತ್ತದೆ. ಮತ್ತು ಒಂದು ಕಿಟಕಿಯನ್ನೂ ಇಟ್ಟಿಲ್ಲ. ದನಕರುವಿಲ್ಲದಿದ್ದುದರಿಂದ ಹಟ್ಟಿಗೆ ಸೊಪ್ಪುಸದೆ ಬಿದ್ದಿಲ್ಲ. ದನಗಳನ್ನು ಕಟ್ಟಲು ಮಾತ್ರ ಕೆಲವು ದುಂಡಗಿನ ಗೂಟಗಳನ್ನು ಹುಗಿದಿರುವರು. ದನಗಳ ಮೋರೆ ಎಟಕುವಲ್ಲಿ ನೆಲವನ್ನು ಮಣ್ಣಿನಿಂದ ಏರಿಸಿ ಬೈ ಹುಲ್ಲು ಹಾಕಲು ಬೈಪಣೆ ಮಾಡಿರುವರು. ನೀರು ಅಕ್ಕಚ್ಚು ಕುಡಿಯಲು ಅಲ್ಲಲ್ಲಿ ಮಣ್ಣಿನ ಮರಾಯಿಗಳನ್ನೂ ಕುತ್ತಿಗೆಯ ವರೆಗೆ ಹೂಳಿರುವರು. "ಹಟ್ಟಿ ಭದ್ರವಿದೆ" ಎಂದು ಅದರ ಬಾಗಿಲನ್ನೆಳೆದುಕೊಂಡು ಅಂಗಳಕ್ಕೆ ಬಂದಾಗ ಬಿಸಿನೀರು ಕೊಟ್ಟಿಗೆಯಲ್ಲಿ ಉರಿ ಊದುತ್ತಿದ್ದ ಸೀತಮ್ಮನವರು ಕಂಡು, "ಮನಸ್ಸಿಗೆ ಬಂತೇನು?" ಎಂದು ಕೇಳಿದರು.

"ನೀನು ಬಯಸಿದ ಹಾಗೆ ಭದ್ರವಿದೆ. ಅದರೊಳಗೆ ಬಾಗೀರಥಿಯಿದ್ದಷ್ಟು ದಿನ ಹುಲಿ ಬಾಯಿಗೆ ಬೀಳಲಾರದು" ಎಂದುತ್ತರಪಿತ್ತರು.

ಬಾವಿಯಿಂದ ನೀರು ಸೇದಿ ಹಂಡೆಗೆ ತುಂಬಿಸುತ್ತಿದ್ದ ಸುಭಾಷಿಣಿ ಈ ಮಾತು ಕೇಳಿ ಕಿಸಕ್ಕನೆ ನಕ್ಕಳು.

ನಗುತ್ತ ಬಂದ ಗೋವಿಂದರಾಯರು "ಬಾವಿ ಮನೆಯ ಪಶ್ಚಿಮಕ್ಕಾಯಿತು ಅಡ್ಡಿಯಿಲ್ಲ. ನೀರು ಮೇಲಕ್ಕಿದೆಯೋ?" ಎಂದು ಪ್ರಶ್ನಿಸುತ್ತ ಅದಕ್ಕೆ ಉತ್ತರ ಕಾಯದೆ, "ಆಃ, ನೀರು ಒಂದು ಆಳ್ ಇಲ್ಲದಿದ್ದರೂ ಬಾವಿ ಆಳವಿಲ್ಲ." ಎಂದು ಸಮಾಧಾನ ವ್ಯಕ್ತಪಡಿಸಿದರು.

ಬಾವಿಕಟ್ಟೆಯ ಸಮೀಪ ನಾಲ್ಕು ಕಂಬಗಳನ್ನು ಹುಗಿದು ಮಾಡು ಕಟ್ಟಿದ್ದ ಸ್ನಾನದ ಕೊಟ್ಟಿಗೆಯನ್ನು ಕಂಡ ಗೋವಿಂದರಾಯರು "ಇದು ಮಾತ್ರ ಯದ್ವಾತದ್ವಾ ಆಗಿದೆ." ಎಂದು ಅನ್ನದಲ್ಲಿ ಕಲ್ಲು ಬಂದವರಂತೆ ಬಾಯಿ ಅಗಲಿಸಿದರು.

ಹೊಗೆ ತುಂಬಿದ ಕಣ್ಣನ್ನು ಸೀರೆಯ ಸೆರಗಿಂದ ಒರಸುತ್ತ ಸೀತಮ್ಮ ಮೋರೆ ಹೊರಳಿಸಿ ಕೇಳಿದರು. "ಏನು ಯದ್ವಾತದ್ವಾ ?"

"ಈ ಕೊಟ್ಟಿಗೆ!"

"ಯಾಕೆ ಏನಾಗಿದೆ ?"

"ಏನಾಗಿದೆ ? ಬರಿಬತ್ತಲೆ!"

"ಅದಕ್ಕೂ ಗೋಡೆ ಮೆತ್ತ ಬೇಕಾಗಿತ್ತೆಂದು ನಿಮ್ಮ ಅಭಿಪ್ರಾಯ ವೇನು?."

"ಗೋಡೆ ಅಲ್ಲದಿದ್ದರೆ ನಾಲ್ಕು ಮಡಲಾದರೂ ಕಟ್ಟ ಬೇಕಿತ್ತು. ಇಲ್ಲದಿದ್ದರೆ ಹೆಂಗಸರ ಜಲಕ್ರೀಡೆ ನಡೆದಾಗ ದೇವೀ ದರ್ಶನವಾದೀತು."

ಗೋವಿಂದರಾಯರ ಈ ವಿನೋದದ ಮಾತನ್ನು ಕೇಳಿ ಅತ್ತೆ ಸೊಸೆಗೆ ನಗೆ ಬಂದಿತು. ಸುಭಾಷಿಣಿ ತಲೆ ತಗ್ಗಿಸಿ ಸೆರಗಿನ ತುದಿಯನ್ನು ಬಾಯಲ್ಲಿ ಕಚ್ಚಿ ಕೊಂಡಳು. "ಇದು ಕರಾವಳಿಯಲ್ಲ. ಮಡಲು ಸಮೀಪ ಸಿಗುವುದಿಲ್ಲವೆಂದು ತೋರುತ್ತದೆ. ಅದೇ ಆಗಬೇಕೆಂದೇನು? ಬಿದಿರಿನ ಸಲಿಕೆ ಕಟ್ಟಿ ಗಿಡಗಳ ಆಡರ್ ಚುಚ್ಚಿದರೂ ಸಾಕು. ಇಲ್ಲಿ ಅಂಥಾ ರಂಭೆ ಊರ್ವಶಿಯರು ಯಾರಿದ್ದಾರೆ? ಶುಭಾ ನಾಳೆ ಗಂಡನೊಡನೆ ಹೊರಟಳು. ನಾನೊಬ್ಬಳಲ್ಲ ಮುದುಕಿ"! ಎಂದರು ಸೀತಮ್ಮನವರು.

"ಮುದುಕಿಯಿರಲಿ ಮೋನಕೆಯಿರಲಿ ಎಲ್ಲ ಒಂದೇ" ಎಂದು ಉತ್ತರಿಸುತ್ತ ಮತ್ತೂ ನಾಲ್ಕು ಹೆಜ್ಜೆ ದೂರ ನಡೆದರು. ಅಂಗಳದ ಅಂಚಿಗೇ ಗಿಡ ಮರಗಳು ಬೆಳೆದಿದ್ದುವು.- ಅವುಗಳ ಎಡೆಯಿಂದ ನುಸುಳಿ ಎಲ್ಲ ನೋಡಿ ಬರ ಬೇಕೆಂದು ಅವರ ಆತುರ. ಆದರೆ ಹುಲಿ ಹುಲ್ಲೆಯಿದ್ದೀತೆಂದು ಅಂಜಿ ಅಲ್ಲೇ ನಿಂತರು. ರಾತ್ರಿ ಏನೇನೋ ಅಪಸ್ವರ ತೆಗೆದುದೂ ಅವರ ನೆನಪಿಗೆ ಬಂತು ಈ ನಿರ್ಜನ ಪ್ರದೇಶದಲ್ಲಿ ದುಷ್ಟ ಮೃಗಗಳೂ ಇರಬಹುದೆಂದು ಅವರು ನಂಬಿ ಮತ್ತೆ ಅಂಗಳದ ಮಧ್ಯಕ್ಕೆ ಬಂದು ನಾಲ್ಕೂ ಕಡೆ ನೋಡ ತೊಡಗಿದರು.

ಮನೆಯ ಹಿಂಬದಿ ದಕ್ಷಿಣ ದಿಕ್ಕಿನಲ್ಲಿ ಹೆಮ್ಮರಗಳ ಕಾಡು. ಪಶ್ಚಿಮದಲ್ಲಿ ಅವುಗಳ ಗಾತ್ರ ಸ್ವಲ್ಪ ಕಡಿಮೆ. ಆದರೆ ದೂರದಲ್ಲಿ ದಿಗಂತದ ಅಂಚು ಕಾಣಿಸುವವರೆಗೂ ಅನೇಕ ಸಣ್ಣ ದೊಡ್ಡ ಗುಡ್ಡಗಳೂ ಅವುಗಳಲ್ಲಿ ಬೆಳೆದಿರುವ ಅರಣ್ಯವೂ ಗೋಚರವಾಗುತ್ತದೆ. ಮನೆಯ ಪೂರ್ವಕ್ಕೆ ಮುಂಡಾಜೆಯಿಂದ ಬಂದ

ರಸ್ತೆ. ಅದರ ಆಚೆ ಮಗ್ಗುಲಲ್ಲಿ ಸಣ್ಣ ಸಣ್ಣ ಗುಡ್ಡಗಳು. ಅವುಗಳನ್ನು ದಾಟಿದರೆ ಬೃಹದಾಕಾರವಾಗಿ ದೂರದಲ್ಲಿ ತಲೆ ಎತ್ತಿ ನಿಂತಿರುವ ಬಲ್ಲಾಳರಾಯನ ದುರ್ಗ. ಅದೇ ಪರ್ವತ ಮುಮ್ಮೂಲೆಯಾಗಿ ಉತ್ತರದಲ್ಲಿ ಎಳ್ನೀರ್ ಘಾಟಿಯೆಂದೂ ವಾಯುವ್ಯದಲ್ಲಿ ಕುದುರೆ ಮುಖವೆಂದೂ ಹೆಸರು ಪಡೆದಿರುವುದು ಕುದುರೆ ಮುಖ ಪರ್ವತ ರಾಕ್ಷಸಾಕಾರದ ಒಂದು ಮಹಾ ಬೆಟ್ಟವಾಗಿದ್ದರೂ ಅದರ ತುತ್ತ ತುದಿಯಲ್ಲಿ ಅನೇಕ ಪ್ರತ್ಯೇಕ ಶಿಖರಗಳಿವೆ. ಹಸುರು ಸೀರೆಯ ಸೆರಗನ್ನು ತಲೆಯ ಮೇಲೂ ಎಳೆದುಕೊಂಡವು ಕೆಲವು. ಕೆಲವು ಶಿಖರಗಳ ಮೇಲ್ತುದಿ ಉರಿದು ಹೋಗಿರುವುದರಿಂದ ಕೋಡುಗಲ್ಲುಗಳೇ. ಒಂದಕ್ಕೆ ಮತ್ತೊಂದರೊಡನೆ ಸ್ಪರ್ಧಿಸುವ ಹುಮ್ಮಸ್ಸು. ಅವುಗಳಲ್ಲಿ ಎರಡು ಗಿರಿಗಳು ದೊಡ್ಡವು. ಕುಮಾರಿ ಭೂಮಿಯ ಕುಚಧ್ವಯಗಳಂತೆ ಅವು ಮನ ಮೋಹಕವಾಗಿವೆ. ಈ ಗಿರಿಗಳ ಮಧ್ಯೆ ಮಧ್ಯೆ ಕಣಿವೆ. ಅವುಗಳಲ್ಲಿ ವನಶ್ರೀ. ದೇವಲೋಕದಿಂದ ಹತ್ತಿಯ ಗಂಟುಗಳನ್ನೇ ಬಿಚ್ಚಿ ಎಸೆದರೋ ಎಂಬಂತೆ ಹೆರೆಹೆರೆಯಾಗಿ ಬಿಳಿ ಮೋಡ ಇಳಿದು ಗಿರಿಯನ್ನು ಮುಚ್ಚಲೆತ್ನಿಸುತ್ತಿತ್ತು. ಈ ಅನುಪಮ ಗಿರಿವನ ಸೌಂದರ್ಯಶ್ರೀಯನ್ನು ಕಂಡು ಗೋವಿಂದರಾಯರು ಬೆಪ್ಪು ಬೆರಗಾದರು. ಮುಖಮಂಟಪಕ್ಕೆ ಬಂದು ಅಲ್ಲಿಟ್ಟಿದ್ದ ಒಂದು ಮುರುಕು ಕುರ್ಚಿಯ ಮೇಲೆ ಕುಳಿತು ನಸ್ಯವೇರಿಸಿ ಪರ್ವತಗಳ ಕಡೆ ಮತ್ತೆ ನೋಡ ತೊಡಗಿದರು.

ಅತ್ತೆ ಸೊಸೆಗೆ ಇದನ್ನೆಲ್ಲ ನೋಡಲು ಅವಕಾಶವಿರಲಿಲ್ಲ. ಮನೆಯ ಸ್ವಚ್ಛತೆಯ ಕಡೆಗೆ ಅವರ ಲಕ್ಷ. ಹಾರೆ, ಪಿಕ್ಕಾಸು, ಕೊಡಲಿ, ಮಡು, ಕತ್ತಿ ಬೆತ್ತದ ಬುಟ್ಟಿಗಳನ್ನೆಲ್ಲ ಮನೆಯೊಳಗೇ ಒಟ್ಟಲಾಗಿದ್ದಿತು. ಒಂದೊಂದಾಗಿ ಅವುಗಳನ್ನು ಮೋಹನ ಹೊತ್ತು ಹೊರಗಿಟ್ಟ. ಆ ಮೇಲೆ ಕಸ ಹೆಕ್ಕಲು ಆರಂಭ. ಮುಳಿ ಹುಲ್ಲಿನ ಚೂರುಗಳೂ ಯಥೇಚ್ಛವಾಗಿ ಬಿದ್ದಿದ್ದುವು. ನೆಲಕ್ಕೆ ಸಿಮೆಂಟ್ ಹಾಕಿದ್ದರೂ ನಯವಿರಲಿಲ್ಲ. ಗೋಡೆಗೆ ಬಳಿದಿದ್ದ ಸುಣ್ಣ ಅಲ್ಲಲ್ಲಿ ಮುದ್ದೆ ಮುದ್ದೆಯಾಗಿ ಬಿದ್ದು ನೆಲದ ಬಣ್ಣ ಕೆಡಿಸಿತ್ತು. ಅದನ್ನೆಲ್ಲ. ತೆಗೆದು ಅತ್ತೆ ಕಸ ಗುಡಿಸಿದಾಗ ಸೊಸೆ ಬಾಲ್ದಿಯಲ್ಲಿ ನೀರು ತಂದು, ಒದ್ದೆ ಬಟ್ಟೆಯಿಂದ ನೆಲವನ್ನೊರಸಿದಳು. ಉಂಡು ಬಂದುದರಿಂದ ಬಂದ ರಾತ್ರಿ ಅವರು ಅಡಿಗೆ ಮಾಡಿದ್ದಿಲ್ಲ. ಈಗ ಬೇಕಲ್ಲ. ಆದರೆ, ಅಡಿಗೆ ಮನೆಯಲ್ಲಿ ಒಲೆಯೇ ಇರಲಿಲ್ಲ. ನಾಲ್ಕು ಕಲ್ಲುಗಳನ್ನಿಟ್ಟು ಬೆಂಕಿ ಹೊತ್ತಿಸಿದ್ದುದು ಕಾಣುತ್ತಿತ್ತು

ಸಮೀಪ ಕೆಲವು ಮಣ್ಣಿನ ಗಡಿಗೆಗಳೂ ಗೆರಟೆಯ ಸಟ್ಟುಗಗಳೂ ಬಿದ್ದಿದ್ದುವು. ಮೋಹನ ಅವನ್ನೆಲ್ಲ ಹೊರಗೆಸೆದ. ಹೊಸ ಒಲೆ ಹೂಡಲು ಸೀತಮ್ಮನವರ ಹಂಚಿಕೆ. ಮೋಹನ ಹಾರೆಯಿಂದ ಮಣ್ಣನ್ನಗೆದ. ಸುಭಾಷಿಣಿ ನೀರೆರೆದಳು. ಸೀತಮ್ಮನವರು ಮಣ್ಣನ್ನು ಕಲಸಿ, ಮುದ್ದೆ ಮಾಡಿ ಅಡಿಗೆ ಮನೆಗೆ ತಂದು ಮೆತ್ತಿ ಒಲೆಯ ಆಕಾರ ತಂದರು. ನಿತ್ಯದ ಅತ್ಯಗತ್ಯದ ಕೆಲವು ಪಾತ್ರೆ ಪರಡಿ ಅವರು ತಂದುದರಿಂದ ಸುಭಾಷಿಣಿ ಅವನ್ನು ತೊಳೆದೂ ಇಟ್ಟಿದ್ದಳು. ಬಾಗೀರಥಿ ಬಂದಿಲ್ಲವಾದುದರಿಂದ ಶುದ್ಧಕ್ಕೆ ಸೆಗಣಿ ನೀರೇ ಇಲ್ಲ. ದೇವರ ಪೆಟ್ಟಿಗೆಯಲ್ಲಿ ತುಂಬಿದ್ದ ತುಳಸಿ ಕುಡಿಗಳನ್ನು ತೆಗೆದು ಮನೆಗೆಲ್ಲ ತೀರ್ಥ ಚಿಮುಕಿಸಿದರು. ಹಸಿ ಒಲೆಯ ಮೇಲೆಯೇ ಬಿಸಿ ನೀರು ಕುದಿಸಲು ಹೊಸ ಪಾತ್ರೆಯನ್ನಿಟ್ಟರು ಸೀತಮ್ಮ. ರಾಜಾ ಬರುವುದೊಂದೇ ಬಾಕಿ ಕಾಫಿ ಪುಡಿ ಸುರಿಯಲು.

ರಾಜಾ ಬಂದಾಗ ತಂಪಗೆ ತುಂಬ ಹಾಲಿನೊಂದಿಗೆ ಬಾಳೆ ಹಣ್ಣುಗಳನ್ನೂ ತಂದ. ಹಿಂದಿನಿಂದ ಬೋರ ಗೌಡ ಬೆನ್ನ ಮೇಲೆ ಗೋಣಿಯನ್ನು ಹಾಕಿಕೊಂಡು ಮುಖಮಂಟಪದಲ್ಲಿಳಿಸಿ ಅಯ್ಯಾಬ್ಬ" ಎಂದು ನಿಟ್ಟುಸಿರು ಬಿಟ್ಟ. ಗೋಣಿಯಲ್ಲಿ ಅಕ್ಕಿ, ನಾಲ್ಕಾರು ತೆಂಗು, ಕುಂಬಳಗಳಿದ್ದವು. ಅಡಿಗೆ ಮನೆಗೊಯ್ಯಲು ಬಂದ ತಾಯಿಯನ್ನು ಕಂಡು ರಾಜಾ ಹೇಳಿದ. "ಅಮ್ಮಾ ಈಗ ಇಷ್ಟಿದೆ. ಒಳಗಿಡು. ಕಾಫಿ ಕುಡಿದು ಇಲ್ಲೇ ಬಂಗಾಡಿ ಪೇಟೆಗೆ ಹೋಗಿ ಬರುತ್ತೇವೆ. ಒಂದು ವಾರದ ಮಟ್ಟಿಗೆ ಉಪ್ಪು ಹುಳಿ ಮೆಣಸು ಜಿನಸು ಎಷ್ಟು ಬೇಕಾದೀತೆಂದು ಹೇಳಿ ಬಿಡು. ಮತ್ತೆ ಬೆಳ್ತಂಗಡಿಗೆ ಗಾಡಿ ಬಂದಾಗ ನಿಲ್ಲಿಸಿ ಮಳೆಗಾಲಕ್ಕೆ ಬೇಕಾದ್ದನ್ನೆಲ್ಲ ಅದರಲ್ಲಿ ಹೇರಿ ಕಳಿಸುತ್ತೇನೆ."

"ಆಗಲಿ ಆಗಲಿ. ಕಾಫಿಕುಡಿದಾಗಲಿ. ಬಿಸಿ ನೀರು ರೆಡಿಯಾಗಿದೆ. ಒಂದೇ ನಿಮಿಷ" ಎಂದು ಒಳಗೆ ಜಿಗಿದರು ಸೀತಮ್ಮ.

"ಕೆಲಸಗಾರರು ಒಬ್ಬರೂ ಇಲ್ಲ. ಮೈಗಳ್ಳರು. ಕೂಲಿಗೆ ಮಾತ್ರ ನನ್ನ ತಲೆ ಕಂಡರೆ ಓಡಿಬರುತ್ತಾರೆ" ಎಂದು ಮುಖಮಂಟಪದಲ್ಲಿ ಕುಳಿತಿದ್ದ ತಂದೆಗೆ ಕೇಳಿಸುವಂತೆ ರಾಜಾ ನುಡಿದು ಬೋರನ ಕಡೆ ಹೊರಳಿ, "ಬೋರಾ, ನೀನು ಒಂದಿಷ್ಟು ಬಿಸಿನೀರು ಕುಡಿದು ಆ ಅಹ್ಮದಬ್ಯಾರಿ, ತುಕ್ರ ಪೂಜಾರಿ ಅವರನ್ನೆಲ್ಲ ಕರೆದು ಕೊಂಡೇ ಬಾ. ಅಯ್ಯ ಬಂದಿದ್ದಾರೆ. ಹಿಂದಿನ

ಬಾಕಿ ತೀರಿಸಿ ಬಿಡುತ್ತಾರೆಂದು ಹೇಳು. ಮಧ್ಯಾಹ್ನದ ಮೇಲೆ ಈ ಮನೆಯ ಬಡಗುದಿಕ್ಕಿನ ಸ್ಥಳಕ್ಕೆ ಬೆಂಕಿ ಕೊಡೋಣ. ಮತ್ತೆ ನೀನೂ ತಪ್ಪಿಸಬೇಡ" ಎಂದುನುಡಿದ.

ಬೆಂಕಿ ಹಚ್ಚುವ ಈ ಕೆಲಸವೇನೆಂದು ಗೋವಿಂದರಾಯರಿಗೆ ಅರ್ಥವಾಗ ಲಿಲ್ಲ. ಅವರು ಸ್ವಲ್ಪ ಗಾಬರಿಯಾಗಿ ಕೇಳಿದರು. ಎಲ್ಲಿಗೆ ಬೆಂಕಿ? ಯಾವ ಸ್ಥಳಕ್ಕೆ? "

" ಇದೇ ನಮ್ಮ ಕಾಡಿಗೆ. ಈ ಹಟ್ಟಿಯಿಂದ ಆಚೆ ಇರುವ ಸ್ಥಳಕ್ಕೆಲ್ಲ ಬೆಂಕಿ ಕೊಡಬೇಕಾಗಿದೆ. ಎರಡು ತಿಂಗಳ ಹಿಂದೆ ದೊಡ್ಡ ದೊಡ್ಡ ಮರಗಳನ್ನೆಲ್ಲ ಕಡಿದು ಸ್ವಲ್ಪ ಕಾಡು ಸಫಾಯಿ ಮಾಡಿದ್ದೇನೆ. ಆದರೂ ಕಾಡಿನಲ್ಲಿ ಕಾಲಿಡುವುದೇ ಕಷ್ಟ. ಎದೆಯುಷ್ಟು ಎತ್ತರ ಮುಳಿ ಹುಲ್ಲೂ ಬೆಳೆದಿದೆ. ವರ್ಷ ಸಂಪ್ರತಿ ಒಮ್ಮೆ ಬೆಂಕಿ ಕೊಡಲೇ ಬೇಕು. ಮುಳಿಯೊಂದಿಗೆ ಕಸಕಡ್ಡಿ, ತರಗೆಲೆ ಎಲ್ಲ ಸುಟ್ಟು ಬೂದಿಯಾಗುವುದು ".

'ಗಾಳಿಗೆ ಕಿಡಿ ಮನೆಕಡೆ ಹಾರಿದರೆ?" ಎಂದು ಕಳವಳ ಪಟ್ಟರು ತಂದೆ.

"ಹಾಗೇನಾಗುವುದಿಲ್ಲ. ಆಚೆ ಹೊಳೆಯಿದೆ. ಮೂರು ಬದಿಯಲ್ಲಿ ದರೆ ಯಿದೆ. ಉರಿ ಮೇಲಕ್ಕೇಳಲು ಗಿಡಗಳು ಬಿಡುವುದೇ ಇಲ್ಲ. ಕರಾವಳಿಯಂತೆ ಬೆಂಕಿ ಪ್ರಜ್ವಲಿಸುತ್ತದೆಯೆಂದು ತಿಳಿದಿರಾ? ಅಲ್ಲಿ ಒಂ. ಇಲ್ಲಿಷ್ಟು ಸುಡುತ್ತದೆ. ಮರಗಳಡಿಗೆ ತಾಗುವುದೇ ಇಲ್ಲ. ನಾನೆಲ್ಲ ತೋರಿಸುತ್ತೇನೆ. ಕಾಫಿ ಆಗಲಿ. ಆ ಮೇಲೆ ಬಂಗಾಡಿ ಪೇಟೆಗೂ ಹೋಗಿ ಬರೋಣ" ಎಂದು ಸಂತೈಸಿದ.

ಅವನ ಮಾತು ಮುಗಿಯುವುದರೊಳಗೆ ಎರಡೆರಡು ಬಾಳೆಹಣ್ಣು ಕಾಫಿ ಬಂತು "ನಿಮಗೆಲ್ಲ ಹಸಿವೆ ಆಗಿದೆಯೇನೋ. ತಿಂಡಿಗೆ ಏನಿಲ್ಲ. ಮಧ್ಯಾಹ್ನ ಅಡಿಗೆ ಬೇಗನೇ ಮಾಡುತ್ತೇನೆ. ಜಿನಸು ತರಲು ಹೊತ್ತು ಮಾಡಬೇಡ" ಎಂದು ಮಗನ ಮುಂದೆ ಸೀತಮ್ಮ ನುಡಿದರು. ಕಾಫಿ ಕುಡಿದು ತನ್ನಷ್ಟೇ ಉದ್ದ ವಿರುವ ಒಂದು ಕೋಲನ್ನು ಹಿಡಿದು ರಾಜಾ ಹೊರಟ. ಗೋವಿಂದರಾಯರು ಅಂಗಿ ಕೋಟು ರುಮಾಲುಗಳನ್ನು ಧರಿಸಿದರು. ತಂದೆ ಮಗ ಮುಖಮಂಟಪ ದಿಂದ ಇಳಿದು ರಸ್ತೆಯಿಂದ ಮನೆಗೆ ಬರುವ ಪೂರ್ವದಿಕ್ಕಿನ ದಾರಿಹಿಡಿದು ಅಗಳು ದಾಟಿದ ಮೇಲೆ ಅದರ ಬದಿಯಲ್ಲೇ ತೆಂಕು ಬದಿಗೆ ತಿರುಗಿದರು. ರಾಜಾ ಒಂದೊಂದೇ ಮಾತು ಆರಂಭಿಸಿದ.

"ನೋಡಿ ನಮ್ಮ ಈ ಆಸ್ತಿ ತೆಂಕು ಬಡಗಾಗಿದೆ. ಅಗಲ ಅರ್ಧ ಫರ್ಲಾಂಗು. ತೆಂಕು ಬಡಗು ಪೂರ್ವ ಬದಿಗಳಲ್ಲಿ ಅಗಳು ಹಾಕಿಸಿದ್ದೇನೆ. ಪಶ್ಚಿಮದಲ್ಲಿ ನೇತ್ರಾವತಿ. ಆಸ್ತಿಯುದ್ದಕ್ಕೂ ಬಡಗಿನಿಂದ ತೆಂಕು ಮುಖವಾಗಿ ಹರಿಯುತ್ತಿದೆ. ಈ ಅಗಳು ಪೂರ್ವದ್ದು. ಈ ಬದಿಯಲ್ಲೇ ಮನೆ. ಮನೆಯ ತೆಂಕು ಬದಿಯಲ್ಲಿರುವ ಈ ಕಾಡು ಹತ್ತು ಎಕರೆ ಆಗ ಬಹುದು. ಇದನ್ನು ಮಾತ್ರ ಸದ್ಯ ಮುಟ್ಟುವಂತಿಲ್ಲ. ಗದ್ದೆ ತೋಟ ಮಾಡಿದಾಗ ಸೊಪ್ಪು ಸೌದೆಗಳು ಬೇಕೇ ಬೇಕು."

ಅಷ್ಟರಲ್ಲಿ ಅಪ್ಪಯ್ಯ, ಕರಡಿ! ಕರಡಿ!" ಎಂದು ಮೋಹನ ಹಿಂದಿನಿಂದ ಕೂಗಿದ. ತಂದೆ ಮಗ ಹಾವು ಮೆಟ್ಟಿದವರಂತೆ ಹೌಹಾರಿ ಹೋದರು. "ಎಲ್ಲಿ? ಎಲ್ಲಿ?" ಎಂದವರು ಏಕಕಾಲಕ್ಕೆ ಕಣ್ಣರಳಿಸಿ ನೋಡುತ್ತ ಕೇಳಿದರು. ಮೋಹನ ಮುಂದಿದ್ದ ಹೆಮ್ಮರವನ್ನು ತೋರಿಸಿದ. ಅದು ಘೂಂ, ಘೂಂ" ಎಂದು ಕೂಗಿ ಮತ್ತೊಂದು ಮರಕ್ಕೆ ನೆಗೆಯಿತು. ನೋಡಿದ ರಾಜಾನಿಗೆ ನಗು ಬಂದಿತು. "ಅದು ಕರಡಿಯಲ್ಲ, ಮುಜ್ಜ. ದೊಡ್ಡ ಕಪ್ಪು ಮಂಗ" ಎಂದ. ಗೋವಿಂದರಾಯರು ಮಾತ್ರ ರೇಗಿ "ನೀನು ಯಾಕೆ ಬಂದೆ? ನಮಗೊಂದು ಬಾಲವೇನು? ನಾವು ಕಾಡಿನಲ್ಲೆಲ್ಲ ನುಸುಳುತ್ತೇವೆ. ಇಲ್ಲಿ ಹಾವುಗಳೂ ಉಂಟು. ನಡಿ, ನಡಿ" ಎಂದು ಗದರಿಸಿದರು. ಮೋಹನ ಸಣ್ಣ ಮೋರೆ ಮಾಡಿಕೊಂಡು ಮನೆಗೆ ಮರಳಿದ.

ತಂದೆ ಮಗ ಮತ್ತೆ ಹೋದ ದಾರಿಯಿಂದಲೇ ಮರಳಿ ಮನೆಯ ಅಂಗಳಕ್ಕೆ ಬಂದು ಬಿಸಿ ನೀರಿನ ಕೊಟ್ಟಿಗೆಯ ದಾರಿಯಿಂದ ಪಶ್ಚಿಮದ ಕಡೆ ಕಾಡಿಗೆ ನುಸುಳಿದರು. ಅರ್ಧ ಫರ್ಲಾಂಗು ದೂರದಲ್ಲಿ ಮಾತ್ರ ಹೆಮ್ಮರಗಳು ಸಾಲಾಗಿ ಬೆಳೆದು ನಿಂತಿದ್ದುವು. ರಾಜಾ ಕೈ ತೋರಿಸಿ ಇದೇ ನೇತ್ರಾವತಿ" ಎಂದ. ಗೋವಿಂದರಾಯರು ಬಗ್ಗಿ ನೋಡಿ, 'ನೀರು ಬಹಳವಿಲ್ಲ" ಎಂದರು.

"ಈಗ ಬೇಸಿಗೆ. ಇಷ್ಟೇ ನೀರು. ಆದರೆ ಮಳೆಗಾಲದಲ್ಲಿ ತುಂಬಿ ಬಿಡುತ್ತದೆ. ಆಗ ಅದರ ಅವತಾರ ನೋಡಬೇಕು. ದಾಟಲೂ ಸಾಧ್ಯವಿಲ್ಲ."

"ದೋಣಿಗಳಿಲ್ಲವೇನು?"

"ದೋಣಿ? ದೋಣಿ ಹಾಯಿಸಲು ಒಯ್ಯಲ್ಲ ಬಿಟ್ಟೀತಾ? ದೋಣಿಯೂ ಸಿಗಲಿಕ್ಕಿಲ್ಲ; ದೋಣಿಯವನೂ ಜೀವದಿಂದ ಬದುಕಲಾರ. ನೀರು ಕೆಳಮುಖ

ವಾಗಿ ರಭಸದಿಂದ ಹರಿಯುತ್ತಿದೆ. ದೋಣಿಯನ್ನು ಬಂಡೆಗಲ್ಲುಗಳಿಗೆ ಅಪ್ಪಳಿಸಿ ಬಿಡುವುದು. ಮಳೆಯಲ್ಲಿ ಬಿದ್ದ ದೊಡ್ಡ ದೊಡ್ಡ ಮರಗಳೂ ತೇಲುತ್ತ ಬರುತ್ತವೆ. ಯಾರಿಗೆ ಜೀವ ಬೇಡಾಗಿದೆ?"

"ಮತ್ತೆ ಮಳೆಗಾಲದಲ್ಲಿ ದಾಟುವುದು ಹೇಗೆ?"

ನೆರೆ ಬಂದಾಗ ದಾಟುವಂತಿಲ್ಲ. ಈಚೆಯವರು ಈಚೆ. ಆಚೆಯವರು ಆಚೆ. ನೆರೆ ನೀರು ಬಹಳ ದಿನ ಉಳಿಯುವದಿಲ್ಲ. ದಾಟಬಹುದು. ದಾಟಿದವರೂ ಇದ್ದಾರೆ. ಆದರೆ ಇಲ್ಲಿ ಶಕ್ಯವಿಲ್ಲ. ನದಿಯ ಮೇಲಿನ ಮೂಲಕ್ಕೆ ಇನ್ನೂ ಹತ್ತು ಹನ್ನೆರಡು ಮೈಲು ತೆರಳಿ ದಾಟುತ್ತಾರೆ. ಎಲ್ಲ ಸ್ಥಳಗಳಲ್ಲಿ ಹೊಳೆಗೆ ಇಳಿಯುವಂತಿಲ್ಲ."

ಸ್ವಲ್ಪ ಹೊತ್ತು ಗೋವಿಂದರಾಯರು ಮೌನ. ಹೊಳೆಯ ಕಡೆಯೇ ಅವರ ದೃಷ್ಟಿ. ಹೊಳೆಯ ಮಧ್ಯೆ ಅಲ್ಲಲ್ಲಿ ಬಂಡೆಗಲ್ಲುಗಳು. ಈ ಕಲ್ಲುಗಳ ಎಡೆಯಲ್ಲಿ ಚಿಕ್ಕ ಚಿಕ್ಕ ಗಿಡಗಳು ಬೆಳೆದಿವೆ. ಕಲ್ಲುಗಳ ಎಡೆಗಳಿಂದ ಝುಳು ಝುಳು ನೀರು ಹರಿಯುತ್ತಿದೆ. ಹೊಳೆಯ ಮಧ್ಯದಲ್ಲಿ ಈಗಲೂ ನೀರಿಗೆ ಸ್ವಲ್ಪ ರಭಸವಿದೆ. ಹೊಳೆ ಆಳವಿದ್ದುದು ಅವರ ದೃಷ್ಟಿಗೆ ಬಿದ್ದುದರಿಂದ "ಈ ಹೊಳೆಗೆ ಕಟ್ಟೆ ಕಟ್ಟುವುದು ಹೇಗೆ? ಪಾತಾಳದಲ್ಲಿದೆ ನೀರು! ನೀರು ಮೇಲಕ್ಕೇರಿ ಈ ಭೂಮಿಗೆ ಹರಿದೀತಾ ?" ಎಂದು ಪ್ರಶ್ನಿಸಿದರು.

ಹಾ, ಇಲ್ಲಿ ಕಟ್ಟೆ ಹಾಕುವುದಿಲ್ಲ. ಹಾಕಲಿಕ್ಕೆ ಶಕ್ಯವೂ ಇಲ್ಲ. ಇನ್ನೂ ಮೇಲಕ್ಕೆ ಇದರ ಮೂಲದ ಕಡೆ ಇನ್ನು ಒಂದು ಮೈಲು ತೆರಳಬೇಕು. ಅಲ್ಲಿ ಕಟ್ಟೆ ಕಟ್ಟಲು ಸಾಧ್ಯ. ಹಿಂದಿನ ಕಾಲದಲ್ಲಿ ಅಲ್ಲೇ ಕಟ್ಟುತಿದ್ದರಂತೆ."

"ಯಾರು ಕಟ್ಟಿದ್ದರು ಹಿಂದೆ?"

"ಓಹೋ, ಅದನ್ನು ನಿಮಗೆ ಹೇಳಲಿಲ್ಲ. ಇದು ಪಾಳು ಭೂಮಿ. ನೂರಾರು ವರುಷಗಳ ಹಿಂದೆ ಯಾರೋ ಹೆಬ್ಬಾರರು ಇಲ್ಲಿ ವಾಸಿಸುತಿದ್ದರಂತೆ. ಒಕ್ಕಲುಗಳೂ ಇದ್ದುವು. ಜರಿದ ಮನೆಗಳ ಕುರುಹೂ ಅಲ್ಲಲ್ಲಿ ಕಾಣಿಸುತ್ತಿದೆ. ನೀರು ಹರಿದು ಬರುತ್ತಿದ್ದ ತೋಡೂ ಉಂಟು. ಈಗ ಮಣ್ಣು ತುಂಬಿದೆ. ಕಟ್ಟೆ ಕಟ್ಟುವಾಗ ತೋಡು ಕೆರೆಸಬೇಕು."

ಮಾತನಾಡುತಿದ್ದಂತೆ ರಾಜಾ ಮನೆಯ ಬಡಗು ದಿಕ್ಕಿಗೆ ತಂದೆಯನ್ನು ಕರೆದು ಕೊಂಡು ಹೊರಟ. ಮನೆಯ ಈ ಬಡಗು ಪ್ರದೇಶದಲ್ಲಿ ಹೊಳೆ

ಪರಿಗಿನ ಅಡ್ಡ ಅಗಲ ಒಟ್ಟು ೨೦ ಎಕರೆ ಭೂಮಿ. ಕಾಡು ಬೆಳೆದಿದ್ದರೂ ಮನೆಯ ಹಿಂಬದಿ ತೆಂಕು ಬದಿಯಲ್ಲಿರುವಷ್ಟು ದಟ್ಟಡವಿ ಅಲ್ಲ. ಅಲ್ಲಲ್ಲಿ ದೊಡ್ಡ ದೊಡ್ಡ ಕಾಡು ಮರಗಳನ್ನು ಕಡಿದೊಗೆದಿದ್ದರು. ಎಲೆಗಳೆಲ್ಲ ಒಣಗಿ ಅದರ ಬಡಕಲು ಕಟ್ಟಿಗೆ ಮಾತ್ರ ಉಳಿದಿತ್ತು. ಉಳಿದುದೆಲ್ಲ ಹತ್ತು ಹನ್ನೆರಡಡಿ ಎತ್ತರದ ಕುಂಟಾಲ, ಕರ್ಮಾರ, ಸರೋಳಿಗೆ, ಆಲ ಪಾಲೆ, ಮತ್ತಿ, ಮರುವ, ಬಣಪ, ಕಾಸರಕ ಮೊದಲಾದ ಕಾಡು ಮರಗಳೂ ಇವೆ. ಮಧ್ಯೆ ಮಧ್ಯೆ ವಿಶಾಲವಾದ ಬಯಲು ಪ್ರದೇಶವೂ ಇದೆ. ಅದರಲ್ಲಿ ಲಂತಾನದಂತಹ ಸಣ್ಣ ಸಣ್ಣ ಪೊದೆ ಪೊದರಗಳೂ ಮುಳ್ಳು ಗಿಡಗಳೂ ಬೆಳೆದಿವೆ. ಮಿಕ್ಕುದುದೆಲ್ಲ ಹುಲ್ಲು. ಹುಲ್ಲು ಮಾತ್ರ ಎಲ್ಲಿ ನೋಡಿದರಲ್ಲಿ ಕಾಲನ್ನು ತಡೆಯುತ್ತದೆ. ಹಸುರು ಹುಲ್ಲು, ಕುಸುರು ಹುಲ್ಲು, ಮುಳಿ ಹುಲ್ಲು, ಆನೆ ಹುಲ್ಲು ಎಲ್ಲ ಹುಲ್ಲಿನ ಪ್ರಪಂಚ. ಜರಿದ ಮನೆಗಳ ಕಲ್ಲು ಮಣ್ಣುಗಳನ್ನೂ ಈ ಹುಲ್ಲು ಮುಚ್ಚಿರುವುದನ್ನು ಅವರು ಕಂಡರು. ಈ ಮನೆಗಳ ಅಕ್ಕ ಪಕ್ಕದಲ್ಲಿ ಅಲ್ಲಲ್ಲಿ ಒಂದೆರಡು ಮಾವು, ಹಲಸು ಮರಗಳೂ ಇದ್ದುವು. ಮರ ಕಡಿವಾಗ ಈ ಜಾತಿ ಮರಗಳನ್ನು ಕಡಿದಿಲ್ಲವಲ್ಲ!" ಎಂದು ಗೋವಿಂದರಾಯರು ಶಂಕೆ ತೆಗೆದರು.

"ಇಲ್ಲ. ಅವುಗಳನ್ನೆಲ್ಲ ಮುಟ್ಟಬಾರದೆಂದು ಆಳುಗಳಿಗೆ ಹೇಳಿದ್ದೆ. ಕಡಿದಿಲ್ಲ. ಹಲಸು, ಹೆಬ್ಬಲಸು, ಓಟೆಹುಳಿ, ಚಳ್ಳಂಗಾಯಿ, ಮೃಗನಹುಳಿ, ಮರಗಳೂ ಅನೇಕ ಉಂಟು" ಎಂದುತ್ತರವಿತ್ತು ರಾಜಾ, ಇಲ್ಲಿ ನೋಡಿ ಈ ಕಲ್ಲುಗಳನ್ನು. ಇದೇನು ಭೂತದ ಕಲ್ಲುಗಳೇ ಹೇಗೆ?" ಎಂದು ಕೈ ತೋರಿಸಿದ.

ಗೋವಿಂದರಾಯರು ಬಗ್ಗಿ ನೋಡಿದರು. ಅತ್ತಿತ್ತ ನೋಡಿ ಸುತ್ತುಮುತ್ತಲಿನ ವಾತಾವರಣವನ್ನು ಪರಿಕಿಸಿದರು. ಕಲ್ಲುಗಳ ಬದಿಗಳಲ್ಲಿ ಬೆಳೆದ ಮರ ಬಳ್ಳಿಗಳನ್ನು ದಿಟ್ಟಿಸಿದರು. "ಇರಬೇಕು. ಭೂತದ ಕಲ್ಲುಗಳೇ. ಒಕ್ಕಲುಗಳು ಇದ್ದುವೆಂದು ನೀನು ಹೇಳಿದಿಯಲ್ಲ.. ಅವರು ಆರಾಧಿಸಿರಬೇಕು ಇವುಗಳನ್ನು" ಎಂದು ಗಂಭೀರವಾಗಿ ನುಡಿದರು.

"ಒಂದು ನಾಗ ಕಲ್ಲುಗಳ ಬನವೂ ಇದೆ" ಎಂದು ರಾಜಾ ಸ್ಮರಿಸಿ ನುಡಿದು ಅಲ್ಲಿಯವರೆಗೆ ದಾರಿ ತೋರಿದ. ಬನ ದೊಡ್ಡದು. ಸೂರ್ಯನ ಕಿರಣಗಳು ನುಸುಳುವಂತಿರಲಿಲ್ಲ. ನಾಗ ಕಲ್ಲುಗಳೂ ಒಂದೆರಡಲ್ಲ. ಹತ್ತಿಪ್ಪತ್ತು. ಮಣ್ಣಿನಲ್ಲಿ ಅವು ಅರ್ಧಮರ್ಧ ಹುಗಿದು ಹೋಗಿವೆ. ಕಾಣುವ ಭಾಗಗಳ ಮೇಲೂ ಪಾಚಿ

ಹೆಪ್ಪು ಗಟ್ಟಿದೆ. ಕೆಲವು ಕಲ್ಲುಗಳು ಅಡ್ಡಾ ದಿಡ್ಡಿಯಾಗಿ ಬಿದ್ದಿವೆ. ಅವುಗಳ ಮೇಲೆ ಬನದ ಎಲೆಗಳು ಉದುರಿವೆ. ಆ ಎಲೆಗಳನ್ನು ಕೈಯಿಂದ ಹಿಡಿದು ಕೋಲಿನಿಂದ ಅತ್ತಿತ್ತ ಸರಿಸಲು ರಾಜಾ ಬಯಸಿ ಬಳಿಗೆಹೋದ. "ಬೇಡ, ಬೇಡ, ಹಾವು ಗೀವು ಇದ್ದೀತು ಬಿಲಗಳಲ್ಲಿ. ಮುಟ್ಟಬೇಡ" ಎಂದು ಗೋವಿಂದರಾಯರು ತಡೆದರು. "ಎಲ್ಲಿಯ ಹಾವು?" ಎಂದು ರಾಜಾ ಬಾಯಲ್ಲಿ ನುಡಿದರೂ ಮುಟ್ಟಲು ಧೈರ್ಯ ಬರಲಿಲ್ಲ. ಗೋವಿಂದರಾಯರ ಮುಖಮುದ್ರೆ ಮಾತ್ರ ಬಹಳ ಗಂಭೀರವಾಗಿತ್ತು. ಕೈಜೋಡಿಸಿ, ಕಣ್ಮುಚ್ಚಿ ಏನೇನೋ ಅಂದರು ಮಂತ್ರ. ಅಲ್ಲಿಂದ ಮರಳಿದ ಮೇಲೂ ಅವರು ಮಗನ ಮಾತಿಗೆ ಸರಿಯಾದ ಉತ್ತರ ಕೊಡಲಿಲ್ಲ. ಗಮನವೆತ್ತಲೋ ಇದೆಯೆಂದು ಕಂಡು ಕೊಂಡ ರಾಜಾ, "ಅಪ್ಪಯ್ಯ, ಏನಾಯ್ತು? ಏನು ವಿಚಾರ?" ಎಂದು ಕುತೂಹಲದಿಂದ ಕೇಳಿದ.

"ಏನಿಲ್ಲ. ಆ ಬನ ನೋಡಿದ ಮೇಲೆ ಅಲ್ಲಿ ಕೊಪ್ಪರಿಗೆ ಇರಬೇಕೆಂದು ನನಗನ್ನಿಸಿತು" ಎಂದರು.

"ಕೊಪ್ಪರಿಗೆ" ಎಂಬ ಮಾತು ಅವರ ಬಾಯಿಂದ ಉದುರಿದ ಕೂಡಲೇ ರಾಜಾ ಗಹ ಗಹಿಸಿ ನಕ್ಕ. "ಯಾರು ನಮ್ಮ ತಾತ ಹುಗಿದಿಟ್ಟಿದ್ದಾನೇನು ಈ ಕಾಡಿನಲ್ಲಿ?" ಎಂದು ಪರಿಹಾಸದ ಧ್ವನಿ ತೆಗೆದ.

"ಛೆ ಹಾಗೆಲ್ಲ ತಮಾಷೆ ಮಾಡಬೇಡ. ನಾಗ ಕಲ್ಲುಗಳ ಹಿಂಬದಿಯಿದ್ದ ಆ ಮರವನ್ನು ನೋಡಿದಿಯಾ? ಅದಕ್ಕೆ ಎಷ್ಟು ಮದನ ಕೈಗಳು ಇವೆ ನೋಡು. ಅಡಿಯಲ್ಲಿ ಕೊಪ್ಪರಿಗೆ ಇದ್ದರೆ ಮಾತ್ರ ಮರಗಳಿಗೆ ಮದನ ಕೈ. ಬೇರೆ ಮರಗಳಿಗುಂಟೇನು ಹಾಗೆ? ಹಿಂದೆ ಈ ಸ್ಥಳದಲ್ಲಿ ದೊಡ್ಡ ಹೆಬ್ಬಾರರಿದ್ದರೆಂದು ನೀನೆ ಹೇಳಿದಿ."

ತಂದೆಯ ಮಾತನ್ನಾಲಿಸಿದ ರಾಜಾ ಇದ್ದರೂ ಇರಬಹುದೆಂದು ಭಾವಿಸಿದ. ಅಲ್ಲಿಂದ ದರೆ ದಾಟಿ ನದಿ ದಂಡೆಯ ಬೆಟ್ಟು ಗದ್ದೆಗಳಲ್ಲಿ ನಡೆದು ಹೊಳೆಗೆ ಕಟ್ಟು ಹಾಕುವ ಸ್ಥಳಕ್ಕೆ ಬಂದರು. ಇಲ್ಲಿ ಹೊಳೆಯ ಮಧ್ಯದಲ್ಲಿ ಮಣ್ಣಿನ ಕುದುರು ಇದೆ. ಅದರಲ್ಲಿ ಗಿಡಮರಗಳೂ ಬೆಳೆದಿವೆ. ಹೊಳೆ ಇಬ್ಭಾಗವಾಗಿರುವರಿಂದ ಕಟ್ಟ ಕಟ್ಟಲು ಸುಲಭವೆಂದು ತರ್ಕಿಸಿದರು. ಹೊಳೆ ದಾಟಿ ಆಚೆ ದಡದ ಬೈಲು ಸೇರಿದರು. ಕಣ್ಣು ಕಾಣುವ ವರೆಗೂ ಬೈಲು. ನೇತ್ರಾ

ವತಿಯ ಎರಡು ದಂಡೆಗಳಲ್ಲಿ ವಿಶಾಲವಾದ ಬೈಲುಗಳು. ಈಗ ಭತ್ತದ ಪೈರಿಲ್ಲ. ನಡು ನಡುವೆ ಅಲ್ಲಲ್ಲಿ ಒಂದೊಂದು ಗುಡಿಸಲುಗಳಿವೆ.

"ಇಲ್ಲೆಲ್ಲ ಮನೆ ಮಾರು ಉಂಟು" ಎಂದರು ತಂದೆ.

"ಹೌದು. ನಮ್ಮ ಆಸ್ತಿಯಲ್ಲಿಷ್ಟೇ ಸ್ವಲ್ಪ ಕಾಡಿದೆ. ಅದರ ಆಚೆ ಈಚೆ ಬೈಲುಗಳಿವೆ. ಈ ಬೈಲು ಹತ್ತು ಹನ್ನೆರಡು ಮೈಲು ಉದ್ದವಿದೆ. ಬಂಗಾಡಿ ಬೈಲಿದು. ನದಿಯ ಇಮ್ಮಗ್ಗುಲಲ್ಲೂ ಬೈಲುಗಳು. ಎಳ್ನೀರ್ ಘಾಟಿ ವರೆಗೂ ಹೀಗೆಯೇ."

"ಅಲ್ಲಿಯ ವರೆಗೆ ಹೊಳೆಯಿದೆಯಾ?"

"ಅಲ್ಲಿಂದಲೇ ಹರಿದು ಬಂದಿದೆ. ನೇತ್ರಾವತಿ ಇಲ್ಲೀ ಈ ಕುದುರೆ ಮುಖ ಪರ್ವತಗಳ ಗರ್ಭದಿಂದಲೇ ಇಳಿದು ಬಂದಿದೆ. ಅದು ಹುಟ್ಟಿದುದು ಈಚೆ ಬದಿಯಿಂದ. ಪರ್ವತದ ಆಚೆ ಬದಿಯಲ್ಲಿ ತುಂಗ ಮತ್ತು ಭದ್ರಾನದಿಗಳು ಹುಟ್ಟಿವೆ. ಆ ಹೊಳೆಗಳಿಂದ ನಮ್ಮ ಜಿಲ್ಲೆಗೆ ಪ್ರಯೋಜನ ದೊರೆತಿಲ್ಲ. ಶೃಂಗೇರಿ, ಶಿವಮೊಗ್ಗ ಮೊದಲಾದ ಘಟ್ಟದ ಮೇಲಿನ ಜನರಿಗೆ ಉಪಕಾರಿಯಾಗಿದೆ. ನೇತ್ರಾವತಿ ನಮ್ಮ ಜಿಲ್ಲೆಯ ಭಾಗ್ಯದೇವಿ. ಇಲ್ಲಿಂದ ನಿಡಿಗಲ್, ಧರ್ಮಸ್ಥಳದ ವರೆಗೂ ತೆಂಕು ಮುಖವಾಗಿ ಹರಿದು ಆ ಮೇಲೆ ಪಶ್ಚಿಮಕ್ಕೆ ತಿರುಗುವಳು. ಉಪ್ಪಿನಂಗಡಿಯಲ್ಲಿ ಕುಮಾರ ಧಾರಾ ಸಂಗಮ. ಬಂಟ್ವಾಳ ಕಂಡು ಮಂಗಳೂರಲ್ಲಿ ಸಮುದ್ರ ರಾಜನನ್ನು ಕೂಡುತ್ತಾಳೆ. ಇದರ ದಂಡೆಯಲ್ಲಿ ಎಷ್ಟು ಬೈಲು! ಎಷ್ಟು ತೋಟ! ಎಷ್ಟು ಕಡೆಗಳಲ್ಲಿ ಕಟ್ಟ ಕಟ್ಟಿ ಹೊಲಗದ್ದೆಗಳಿಗೆ ನೀರುಣಿಸುತ್ತಾರೆ! ಎಷ್ಟು ಫಲವತ್ತಾದ ಭೂಮಿಗಳಿವೆ!"

ರಾಜನ ಉಲ್ಲಾಸದ ಮಾತು ಕೇಳಿದ ತಂದೆ, "ಕರಾವಳಿಯಲ್ಲಿ ಇಂಥ ಭೂಮಿ ದೊರಕುತ್ತಿದ್ದರೆ ಬಂಗಾರ ಭೂಮಿಯಾಗುತ್ತಿತ್ತು. ಈ ಮಲೆ ರಾಜ್ಯದಲ್ಲಿ ಆಯಿತಲ್ಲ!" ಎಂದು ಉದ್ಗರಿಸಿದರು.

ಅವನಿಗೆ ಈ ಮಾತು ರುಚಿಸಲಿಲ್ಲವೋ ಏನೋ? ಹೌದು ಮಲೆರಾಜ್ಯ. ಇನ್ನೆಷ್ಟು ವರುಷ ಹೀಗೆಯೇ ಇದ್ದೀತು. ನಾನು ಬೆಳ್ತಂಗಡಿಗೆ ಬಂದಾಗ ಸುತ್ತುಮುತ್ತು ವಿಪರೀತ ಕಾಡಿತ್ತು. ಈಗ ಕಟ್ಟಿಗೆ ಕೂಡಾ ದೊರೆಯುವುದಿಲ್ಲ. ಈಗ ಜನ ಈಚೀಚೆ ಬರುತಿದ್ದಾರೆ. ಹೊಸ ಹೊಸ ರಸ್ತೆಗಳಾಗುತ್ತಿವೆ. ಈ ಮುಂಡಾಜೆ ಬಂಗಾಡಿ ರಸ್ತೆಯನ್ನು ಬೈಲುಗಳ ಅಂಚಿನಲ್ಲಿ ಎಳ್ನೀರ್ ವರೆಗೆ ಎಳೆದು

ಘಟ್ಟದ ಮೇಲಿನ ಕಳಸಕ್ಕೆ ಮುಟ್ಟಿಸಿದರೆ ಸರಿ. ಚಾರ್ಮಾಡಿ ಮಂಗಳೂರು ರಸ್ತೆಯ ಬದಲು ಇದೇ ಮುಖ್ಯ ರಸ್ತೆಯಾಗುತ್ತದೆ. ಅದಕ್ಕಿಂತ ಇದು ಹತ್ರ ಚಾರ್ಮಾಡಿ ಘಾಟಿಗಿಂತ ಎಳ್ನೀರ್ ಏರಲು ಮೋಟಾರ್ ಗಳಿಗೆ ಸುಲಭ. ಕೊಪ್ಪ ಕಾವೇರಿಕಾನ ಮೊದಲಾದ ಕಾಫಿ ಚಾ ತೋಟಗಳೆಲ್ಲ ಇರುವುದು ಎಳ್ನೀರಿನಾಚೆಯೇ. ಈಗೆಲ್ಲ ಕೂಲಿಕಾರರು ಚಾರ್ಮಾಡಿ ಮಾರ್ಗ ಸುತ್ತಿ ಆ ತೋಟಗಳಿಗೆ ತೆರಳುವರು. ಈ ಎಳ್ನೀರ್ ಒಳದಾರಿಯಿಂದ ನಡೆಯುವವರು ವಿರಳ. ಮೋಟಾರ್ ರಸ್ತೆ ಆದ ಮೇಲೆ ಮತ್ತೇನು ಹೇಳಲಿ! ಈ ಭೂಮಿಗೆಲ್ಲ ಬಂಗಾರದ ಬೆಲೆಯೇ ಬಂದೀತು. ಈಗಾಗಲೇ ರಸ್ತೆಗೆ ಎಸ್ಟಿಮೇಟಾಗಿದೆ. ಮಾಡಿಸುವವರಿಲ್ಲ. ಸರಕಾರಕ್ಕೆ ಮಾಡಿಸಲು ಮನಸ್ಸು ಇಲ್ಲ. ಎಲ್ಲ ಕೆಲಸಗಳ್ಳರು. ಲಾಭಬಡಕರು. ಈಗಲ್ಲದಿದ್ದರೆ ಹತ್ತು ವರುಷಗಳ ಮೇಲಾದರೂ ಆಗದೆ ಇರಲಿಕ್ಕಿಲ್ಲ. ನೆನೆಗುದಿಗೆ ಬಿದ್ದರೆ ಗಾಂಧೀ ರಾಜ್ಯ ಬಂದ ಮೇಲೆ ಬಾಕಿ ಬೀಳದು. ಅಷ್ಟರ ವರೆಗೆ ಸ್ವಲ್ಪ ಕಷ್ಟ ಪಡಬೇಕು"

ಗೋವಿಂದರಾಯರು ಉತ್ತರವನ್ನೀಯಲಿಲ್ಲ. ಬಿಸಿಲೂ ಏರುತ್ತ ಬಂದಿತು. "ಪೇಟೆಗೆ ಹೋಗಿ ಬರೋಣ" ಎಂದು ಅವರು ತಿಳಿಸಿದುದರಿಂದ ಹೊಳೆಯ ಆಚೆ ದಂಡೆಯಲ್ಲಿದ್ದ ಒಳ ದಾರಿ ಹಿಡಿದ ರಾಜಾ. ಒಂದರ್ಧ ಮೈಲು ಹೊಳೆ ಹರಿದಂತೆ ಅನುಸರಿಸಿ, ಮತ್ತೆ ತಿರುಗಿ ಮತ್ತೊಂದು ರಸ್ತೆಗೆ ಬಂದರು. "ಇದು ಯಾವ ರಸ್ತೆ?" ಎಂದು ಕೇಳಿದುದಕ್ಕೆ, ಬೆಳ್ತಂಗಡಿಯಿಂದ ನಾವೂರು ಮಾರ್ಗವಾಗಿ ಬಂದ ಈಚೆಯ ರಸ್ತೆ" ಎಂದು ರಾಜಾ ತಿಳಿಸಿದ. ಆ ಮೇಲೆ ಆ ರಸ್ತೆ ಹಿಡಿದೇ ಅರ್ಧ ಮೈಲು ಸಾಗಿದರು. ರಸ್ತೆಯ ಬದಿಗಳಲ್ಲಿ ಅಲ್ಲಲ್ಲಿ ಒಂದೊಂದು ಗುಡಿಸಲುಗಳು ಕಾಣಿಸಿದುವು. ಒಂದೆಡೆ ಎರಡೂ ಮಗ್ಗುಲಲ್ಲಿ ಮನೆಗಳಿದ್ದುವು. "ಇದೇ ಬಂಗಾಡಿ ಪೇಟೆ" ಎಂದ ರಾಜ.

ಗೋವಿಂದರಾಯರಿಗೆ ಆಶ್ಚರ್ಯವಾಯ್ತು. ಎರಡು ಮೂರು ಅಂಗಡಿಗಳಿದ್ದಿಲ್ಲ. ರಸ್ತೆಯ ಬದಿಗೇ ಹತ್ತಿಪ್ಪತ್ತು ಮನೆಗಳು. ಒಂದು ಮನೆಯ ಪೌಳಿಗೇ "ಬಂಗಾಡಿ ಶಾಲೆ" ಎಂದು ಬೋರ್ಡನ್ನು ತೂಗ ಹಾಕಿತ್ತು. ಒಂದು ದೇವಸ್ಥಾನದಂತೆ ತೋರುತ್ತಿತ್ತು. "ಇದೇ ದೇವಸ್ಥಾನವೇನು?" ಎಂದು ಪ್ರಶ್ನಿಸಲು, "ದೇವಸ್ಥಾನ ಇಲ್ಲಿಲ್ಲ. ನಮ್ಮ ಕಟ್ಟದಿಂದಲೂ ಬಡಗು ನಾಲ್ಕು ಮೈಲು ತೆರಳಿದರೆ ಕೊಲ್ಲಿ ದೇವಸ್ಥಾನವಿದೆ. ಇದು ಜೈನರ ಬಸ್ತಿ" ಎಂದು ರಾಜಾ

ಹೇಳಿದ. ಬಂಗಾಡಿಯ ಬಂಗ ಜೈನ ಅರಸರ ಇತಿಹಾಸವು ಗೋವಿಂದರಾಯರ ಸ್ಮರಣೆಗೆ ಬಂತು. ಶಾಲೆಯಲ್ಲಿ ಹುಡುಗರಿಗೂ ಅವರು ಅದನ್ನು ಕಲಿಸಿದ್ದರು. ಬಂಗಾಡಿ ಅವರ ರಾಜಧಾನಿ ಎಂದಿದೆ ಇತಿಹಾಸದಲ್ಲಿ. ಪ್ರಾಯಶಃ ಇದೇ ಇರ ಬೇಕೆಂದು ಅವರು ಊಹಿಸಿದರು. ಕಾಲಗತಿಗೆ ಸಿಕ್ಕಿ ಪಾಳು ಬಿದ್ದಿದೆ ಎಂದು ಅವರು ತರ್ಕಿಸದೇ ಇರಲಿಲ್ಲ. ಈ ಯೋಚನೆಯ ಮಧ್ಯೆ ಮಾತೆತ್ತಿ, ಬಂಗ ಅರಸು ಕುಲದವರು ಈಗ ಇದ್ದಾರೇನು? ಅಥವಾ ಸಂತಾನ ನಿಸ್ಸಂತಾನವಾಗಿ ಹೋಗಿದೆಯೋ?" ಎಂದು ಕೇಳಿದರು.

"ಇದ್ದಾರೆ. ಒಂದು ಹಳೇ ಅರಮನೆಯೂ ಇದೆ. ಆದರೆ ಅದು ಹೆಸರಿಗೆ ಮಾತ್ರ, ದೊಡ್ಡ ಜಮೀನ್ದಾರರ ಮನೆಯಷ್ಟಿದೆ. ಅಷ್ಟೆ. ಅವರಲ್ಲಿ ಕೆಲವರು ನಾವೂರು ಮೊದಲಾದ ಕಡೆ ತೆರಳಿ ಈಗ ದಿಕ್ಕಾಪಾಲಾಗಿದ್ದಾರೆ. ಈಗಿನ ಕಾಲಕ್ಕೆ ಈ ಅರಸು ಪೊಡಸುಗಳನ್ನು ಯಾರು ಕೇಳುತ್ತಾರೆ? ಕೋಟೆ ಕೊತ್ತಲ ಮಂದಿ ಮಾರ್ಬಲ ಇರುವ ವರೆಗೆಲ್ಲ ಅವರ ದರ್ಬಾರ್. ನಮ್ಮಂತೆ ಬಡತನ ಕ್ಕಿಳಿದ ಮೇಲೆ ದಾರಿಯಲ್ಲಿ ಹೋಗುವ ನಾಯಿಯೂ ಗುರ್ರೆನ್ನುತ್ತದೆ."

ಅಂಗಡಿಯಲ್ಲಿ ಮನೆನಿತ್ಯ ಖರ್ಚಿಗೆ ಆವಶ್ಯವಿದ್ದ ಜಿನಸು ಸಾಮಾನು ಗಳನ್ನೆಲ್ಲ ಕೊಂಡು ಕೊಂಡರು. ಸಾವುಕಾರ ಕಾಗದದ ತೊಟ್ಟೆ ಮಾಡಿ ಒಂದೊಂ ದಾಗಿ ಎಣಿಸಿ ಲೆಕ್ಕ ಗುಣಿಸಿದ. "ಹಾ, ಬೈರಾಸ್ ಬಿಟ್ಟು ಬಂದೆವಲ್ಲ. ಇದನ್ನು ಒಯ್ಯುವ ಬಗೆ ಹೇಗೆ?' ಎಂದು ರಾಜಾ ಚಿಂತಿಸಿದ. ಗೋವಿಂದರಾಯರು ಸಣ್ಣ ಸಣ್ಣ ಪೊಟ್ಟಣಗಳನ್ನೆಲ್ಲ ಕೋಟಿನ ಕೆಳ ಕಿಸೆಗಳಿಗೆ ತುರುಕಿಸಿದರು. ತಲೆಯ ಮೇಲಿನ ಮುಂಡಾಸನ್ನು ಬಿಚ್ಚಿ ಉಳಿದುದನ್ನು ಗಂಟು ಕಟ್ಟಿ ಹೆಗಲ ಮೇಲೆ ಹಾಕಿಕೊಂಡರು. ಮತ್ತೆ ಏನೋ ನೆನಪಾಗಿ "ಮಕ್ಕಳಿಗೆ ಒಂದು ಮುಕ್ಕಾಲಿನ ದ್ರಾಕ್ಷಿ, ಒಂದು ಮುಕ್ಕಾಲಿನ ಕಲ್ಲು ಸಕ್ಕರೆ" ಎಂದು ಪುನಃ ಹೇಳಿ ತೆಗೆದುಕೊಂಡರು. ಅಂಗಡಿಯಿಂದ ಹೊರಡುವಾಗಲೇ ಸೂರ್ಯ ನೆತ್ತಿಗೇರಿದ್ದ.

ಇನ್ನು ಅಷ್ಟು ದೂರ ನಡೆಯ ಬೇಕಲ್ಲ" ಎಂದು ಬಳಲಿ ನುಡಿದ ತಂದೆಯ ಮಾತನ್ನು ಕೇಳಿ ರಾಜಾ, 'ಒಳದಾರಿಯಿಂದಲೇ ಮರಳೋಣ. ಈ ಬಂಗಾಡಿ ಪೇಟೆ, ನೇತ್ರಾವತಿಯ ಈಚೆ ದಡದಲ್ಲಿದ್ದರೆ ಸರೀ ಆಚೆ ದಡದಲ್ಲಿ ನಮ್ಮ ಮನೆ. ಕೆಲವು ಬೆಟ್ಟು ಗದ್ದೆಗಳನ್ನ ದಾಟಿದರೆ ಒಂದು ಸಣ್ಣ

ಕಾಡು. ಕಾಡಿನ ಅಂಚಿನಲ್ಲೇ ಹೊಳೆಯಿದೆ. ನದಿಯಲ್ಲಿ ನೀರೂ ಬಹಳವಿಲ್ಲ."
ಎಂದುಸುರಿ ಆ ದಾರಿಯಿಂದಲೇ ಕರೆದುಕೊಂಡು ಬಂದ.

ಸಾಯಂಕಾಲ ಮುಳಿ ಹುಲ್ಲಿಗೆ ಉರಿಹಚ್ಚಲು ಸಿದ್ಧತೆಯಾಯಿತು. ಅಂಗಳದ ಈಚೆಗೆ ಕಿಡಿ ಹಾರದಂತೆ ಕೊಡಗಳಿಂದ ತಣ್ಣೀರೆರೆದರು ಕೊಡ ಮತ್ತು ಬಾಲ್ದಿಗಳಲ್ಲಿ ನೀರನ್ನು ತುಂಬಿಸಿಕೊಂಡು ಅಂಗಳದಲ್ಲಿ ಎಲ್ಲರು ಎವೆಯಿಕ್ಕದೆ ನಿಂತುಕೊಂಡರು. ಮನೆಯ ಹಿಂಬದಿಯಿರುವ ಕಾದಿಟ್ಟ ಕಾಡನ್ನು ಬಿಟ್ಟು ಉಳಿದೆಲ್ಲ ಭಾಗಗಳಿಗೆ ಬೆಂಕಿ ಹಚ್ಚಲು ರಾಜಾನ ನಿರ್ಧಾರ. ಅಂಗಳದ ಬದಿಯಿಂದಲೇ ಉರಿಹಚ್ಚಿಬಿಟ್ಟರು. ಹೊತ್ತುತ್ತ ಹೊಗೆಯುತ್ತ ಬೆಂಕಿ ಪಶ್ಚಿಮದಲ್ಲಿ ಹೊಳೆಯವರೆಗೂ ಹರಿಯಿತು. ಹಟ್ಟಿಯ ಹಿಂಬದಿ ಇಟ್ಟ ಕೊಳ್ಳಿ ಬಡಗು ದಿಕ್ಕನ್ನು ವ್ಯಾಪಿಸಿತು. ಪಟಪಟ ಮುಳಿಹುಲ್ಲು ಸುಟ್ಟುಸುಡುತ್ತ ಒಣಗಿದ ಭಾಗದಲ್ಲಿ ಭೇಗನೇ ಹೊತ್ತುತ್ತ ಹೋಯಿತು. ಬಿದಿರಿನ ಮೆಳೆಗಳ ಬುಡದಲ್ಲಿ ಬಿದ್ದಿದ್ದ ಚೂರುಗಳಿಗೆ ಹತ್ತಿಕೊಂಡಾಗ ಸಿಟಿಸಿಟಿಲ್ ಎಂಬ ಸದ್ದಾಯಿತು. ಮರಗಳಡಿಯಲ್ಲಿ ಬಿದ್ದಿದ್ದ ತರಗೆಲೆಯ ರಾಶಿಗಳು ಬಸ್ಮವಾವಾದುವು. ನೀರಿನ ಪಸೆಯಿದ್ದ ಜಾಗದಲ್ಲಿ ಬೆಂಕಿ ನಿಂತಿತು. ಕೆಲವು ಮರಗಳಿಗೆ ಸುತ್ತಿದ್ದ ಬಳ್ಳಿಗಳು ಒಣಗಿ ಹೋಗಿದ್ದುವು. ಬೆಂಕಿ ಅದಕ್ಕೆ ಹತ್ತಿಕೊಂಡುದುದರಿಂದ ಮರಗಳ ತುದಿಗಳಿಗೂ ಬೆಂಕಿ ತಾಗಿದಂತೆ ತೋರಿತು. ನಡುನಡುವೆ ಆ ಬಳ್ಳಿಯ ಒಂದೊಂದೇ ತುಂಡು ತುಂಡಾಗಿ ಕೆಳಗೆ ಬೀಳುತಿತ್ತು.

"ಮಿಡಿತೆ ಹಾತೆ ಹಾವುಗಳೆಲ್ಲ ಈ ಬೆಂಕಿಗೆ ಬದುಕಲುಂಟಾ? ಎಷ್ಟು ಜೀವರಾಶಿ ನಾಶವಾಯಿತೋ ಏನೋ" ಎಂದು ಗೋವಿಂದರಾಯರು ಚಡಪಡಿಸಿದರು.

ಹಾಗೆಲ್ಲ ದಯೆ ತೋರಿಸಿದರೆ ಈ ಮಲೆ ರಾಜ್ಯದಲ್ಲಿ ಮನುಷ್ಯ ಬದುಕಲಿಕ್ಕಿಲ್ಲ. ದುಷ್ಟ ಪ್ರಾಣಿಗಳು ಜೀವವನ್ನೆ ನುಂಗುವವು. ಇದೆಂತಹ ಬೆಂಕಿ? ನೋಡಿ, ಎದುರಿಗೆ ಕಾಣುವ ಆ ಮಹಾ ಅರಣ್ಯಗಳಿಗೂ ವರುಷಂಪ್ರತಿ ಬೆಂಕಿ ಹಚ್ಚುತ್ತಾರೆ" ಎಂದ ರಾಜ.

ಮರುದಿನ ಬೆಂಕಿ ಎಲ್ಲೆಲ್ಲಿ ಹಬ್ಬಿದೆಯೆಂದು ನೋಡಿಕೊಂಡು ಬಂದರು. ನೆಲವೆಲ್ಲ ಕರಿಯಿಂದ ಕುವರಿತ್ತು. ಕೆಲವು ಗಿಡಗಳೆಲ್ಲ ಅರ್ಧ ಸುಟ್ಟಿದ್ದುವು. ಅವುಗಳ ಮೇಲ್ಭಾಗದ ಎಲೆಗಳೂ ಬಾಡಿದ್ದುವು. ಬಿದ್ದು ಒಣಗಿದ ಪೊಳ್ಳು ಮರಗಳಲ್ಲಿ ಇನ್ನೂ ಹೊಗೆಯಾಡುತಿತ್ತು. ಆದರೆ ಮುಳಿಯೆಲ್ಲನಾಶವಾಗಿದ್ದುದರಿಂದ ಅಲ್ಲಲ್ಲಿ

ವಿಶಾಲವಾದ ಮೈದಾನ ಸ್ಥಳ ಕಾಣಿಸುತ್ತಿದೆ ಈಗ. ಪಾಳುಬಿದ್ದ ಹುಣಿಗಳನ್ನು ಗುರುತಿಸಲೂ ಸಾಧ್ಯ. ಈಗ ಕಾಡು ಅಷ್ಟು ದಟ್ಟವಾಗಿಲ್ಲ ಎಂದೆನ್ನಿಸಿತು ಗೋವಿಂದರಾಯರಿಗೆ.

ಆಳುಗಳಿಗೆ ಬಾಕಿ ಹಣ ತೆತ್ತು, ಮುಂದಿನ ಕೆಲಸವನ್ನು ತಿಳಿಸಿ ರಾಜಾ ಹೆಂಡತಿ ಮಕ್ಕಳೊಂದಿಗೆ ಹೊರಟ. "ಗಾಡಿ ಮೂರು ನಾಲ್ಕು ದಿವಸಗಳೊಳಗೆ ಬಂದೀತು. ಅದರಲ್ಲಿ ಮಳೆಗಾಲದ ಸಾಮಾನು ಕಳಿಸುತ್ತೇನೆ. ಏನಾದರೂ ಜಿನಿಸು ಬಿದ್ದರೆ ಆಳುಗಳ ಮೂಲಕ ತರಿಸಿ. ನಿಮಗೆ ದಾರಿ ತಪ್ಪೀತು. ತಣ್ಣೀರು ಮಾತ್ರ ಕುಡಿಯ ಬೇಡಿರಿ. ಇದು ಮಲೆ ರಾಜ್ಯ. ಒಳ್ಳೇ ಮೆಣಸಿನ ಬಿಸಿನೀರೇ ಉಪಯೋಗಿಸಿರಿ. ಗಾಡಿಯೊಡನೆ ನಾನು ಬಂದರೂ ಬಂದೆ. ಏನಾದರೂ ಕೆಲಸ ಇದ್ದರೆ ಮಳೆ ಬೀಳುವುದರೊಳಗೆ ಖಂಡಿತ ಬರುತ್ತೇನೆ. ನೀವೇನೂ ಬೇಸರ ಮಾಡಬಾರದು. ಆಳುಗಳಿದ್ದಾರೆ. ಅವರ ಹೆಂಡರು ಮಕ್ಕಳು ಆಗಾಗ ಬರುತ್ತಾರೆ" ಎಂದು ಪದೇ ಪದೇ ರಾಜಾ ಹೇಳಿದ. ಅವರನ್ನು ಬೀಳ್ಕೊಡಲು ಮನೆಯ ಮೇಲಿನ ರಸ್ತೆಯ ವರೆಗೂ ಗೋವಿಂದರಾಯರು ಬಂದರು.

ಅವರನ್ನು ಹಿಂದೆ ಬಿಟ್ಟು ಬಹುದೂರ ಬಂದ ಮೇಲೆ ಸುಭಾಷಿಣಿ ಕೇಳಿದಳು. "ಈ ದಂಡಕಾರಣ್ಯದಲ್ಲಿ ಅವರು ನೆಲೆಸಿಯಾರೇನು?"

ರಾಜಾ ಉತ್ತರ ಕೊಡಲಿಲ್ಲ.

# ೫ನೆಯ ಅಧ್ಯಾಯ

ಮೇ ಉರುಳಿ ಜೂನ್ ತಿಂಗಳು ಅರಳಿತು. ಕರಾವಳಿ ಗಾಳಿ ಜೋರಾಗಿ ಬೀಸ ತೊಡಗಿತು. ಅದರೊಂದಿಗೆ ಕರಿಮೋಡ ತೆರೆ ತೆರೆಯಾಗಿ ಹರಿದು ಬಂತು. ಘಟ್ಟದ ಸಾಲಿನ ಉನ್ನತ ಬೆಟ್ಟಗಳು ಸಿಟ್ಟಿನಿಂದ ಎದೆ ಮರೆಸಿ ನಿಂತು ಮೋಡಗಳನ್ನು ತಡೆದು ನಿಲ್ಲಿಸಿದುವು. ಮೋಡಗಳು ದಿಕ್ಕುಗಾಣದೆ ಅಲ್ಲೇ ಹೆಪ್ಪು ಗಟ್ಟಿದುವು. ತಿಳಿಬಾನು ಕರಿ ಮೋಡಗಳ ರಾಶಿಯಿಂದ ಮುಚ್ಚಲ್ಪಟ್ಟಿತು. ಭೂಮಿತಾಯ ಮೇಲೆ ವಿಶಾಲವಾದ ಅಂತರಿಕ್ಷದಲ್ಲಿ ಯಾರೋ ಕಬ್ಬಿಣದ ಕವಚವನ್ನೇ ತೊಡಿಸಿದಂತೆ ಕಾಣಲಾರಂಭಿಸಿತು. ತನ್ಮಧ್ಯೆ ಗುಡು ಗುಡು ಗುಡುಗೂ ಗುಡುಗ ತೊಡಗಿತು. ನಭವೇ ಒಡೆದು ಬಿದ್ದಿತೋ, ಗ್ರಹಗಳು ಬಂಡೆಗಲ್ಲುಗಳ ಮೇಲೆ ಬಡೆದುವೋ, ಕುದುರೆ ಮುಖದ ಕೋಡು ಗಲ್ಲುಗಳನ್ನು ಉರುಳಿಸಿ ಬಿಟ್ಟರೋ ಎಂಬಂತೆ ಭೀಕರ ಶಬ್ದ. ಕುಡಿಮಿಂಚು, ಕೋಲ್ಮಿಂಚು, ಸರಳ್ಮಿಂಚು, ಬಳ್ಳಿಮಿಂಚು, ಜಗ್ಗನೆ ಮಿಂಚಿದುವು. ಗಾಳಿ ಮಳೆ, ಹನಿ ಹನಿ ಮಳೆ, ಜಡಿ ಮಳೆ, ಜಿರಾವರ್ತಿ ಮಳೆಯೂ ಸುರಿಯ ತೊಡಗಿತು. ಮಳೆಗಾಲ ಆರಂಭವಾಯಿತು.

ಬಿಸಿಲಿನ ತಾಪಕ್ಕೆ ಒಣಗಿ ತುಟಿಗಳೊಡೆದ ಗದ್ದೆ ನೀರನ್ನು ಹೀರಿತು. ಭೂಮಿಯ ಬಾಯಾರಿಕೆ ಇಂಗಿತು. ಇಂಗಿದ ನೀರು ಬೇಸಿಗೆಗೆ ಗಟ್ಟಿಯಾಗಿದ್ದ ಮಣ್ಣಿನ ಅಣು ಕಣಗಳನ್ನು ಮೃದು ಗೊಳಿಸಿತು. ಮುರಿದ ಮುದುಡಿದ ಗಿಡ ಮರಗಳ ಬೇರುಗಳು ಅತ್ತಿತ್ತ ನುಸುಳಿದುವು. ಹೊಸ ಉಲ್ಲಾಸ ಹೊಸ ಶಕ್ತಿ ಚೈತನ್ಯದಿಂದ ಟೊಂಗೆಗಳು ಚಿಗುರಿದುವು. ಬಿದಿರು ಬಾಣದಂತಹ ಕಣೆ ತೊಟ್ಟಿತು. ಲಂತಾನ ದಪ್ಪ ಬೆಳೆಯಿತು. ಕರ್ಮಾರ್, ಮತ್ತಿ ಮೊದಲಾದ ಮರಗಳು ಇನ್ನಷ್ಟು ಉದ್ದವಾದುವು. ಅವುಗಳ ಬುಡದಲ್ಲಿ ಬಿದ್ದ ಬೀಜಗಳು ಸದ್ದಿಲ್ಲದೆ ಮೊಳಕೆ ಒಡೆದುವು. ಈ ಗಿಡ ಮರ ಬಳ್ಳಿಗಳದೇ ರಾಜ್ಯ. ಅವುಗಳದೇ ಆನಂದ ಸಾಮ್ರಾಜ್ಯ. ಹುಲಿ ಹರಿಣಗಳಿಗೆ ಅವೇ ತಮ್ಮ ಎಲೆ ಕೊಡೆ ಹಿಡಿಯುತ್ತವೆ. ಪೊದರಿನಲ್ಲಿ ಮೈ ಮುದುಡಿ ಅರೆ ಕಣ್ಮುಚ್ಚಿ ಕುಳಿತ ಮೊಲ ಅಲ್ಲೇ

ಚಿಗುರೆಲೆಗಳನ್ನು ಜಗಿಯುತ್ತದೆ. ಉಂತಾನದ ಹೊದರಿನೊಳಗೆ ಕಾಡು ಕೋಳಿ ಕಾಲು ಕೆದರಿ ಹುಳ ಹುಪ್ಪಡಿಗಳನ್ನು ಹಿಡಿದು ನುಂಗುತ್ತದೆ. ಕಾಡು ಗುಬ್ಬಿ, ಕಾಡು ಪಾರಿವಾಳ, ಗೊರವ ಮೊದಲಾದ ನಾನಾ ಜಾತಿಯ ಹೆಸರಿಲ್ಲದ ಚಿತ್ರ ವಿಚಿತ್ರ ಬಗೆ ಬಗೆ ಬಣ್ಣದ ಹೆಣ್ಣು ಗಂಡು ಹಕ್ಕಿಗಳು ರಕ್ಕೆಗಳೊಳಗೆ ಕೊಕ್ಕನ್ನು ತುರುಕಿಸಿ ಮರಗಳ ಮರೆಯಲ್ಲಿ ಕುಳಿತು ವಸಂತದ ಸವಿ ಸ್ಮರಣೆಗಳನ್ನು ಮೆಲುಕಾಡಿದುವು.

ಗೋವಿಂದರಾಯರು, "ಜೂನ್, ಜುಲಾಯಿ" ಎಂದು ಮಳೆಗಾಲದ ತಿಂಗಳುಗಳನ್ನು ಲೆಕ್ಕ ಹಾಕ ತೊಡಗಿದರು. ಇನ್ನೂ ಇದೆ ಅಗಸ್ಟ್. ಮಳೆ ಸಪ್ಟಂಬರ್ ತಿಂಗಳಲ್ಲಿ ಇಳಿ ಮುಖ. ಆದರೆ ಇದೆಲ್ಲ ಕರಾವಳಿ ಲೆಕ್ಕ. ಘಟ್ಟದ ನೆರಳಲ್ಲಿ ಹಾಗೆ ಅಥವಾ ಹೀಗೆ ಎಂದು ತರ್ಕಿಸುವುದು ಕಷ್ಟ. ಅಲ್ಲದೆ ಈ ಭಾಗದಲ್ಲಿ ಅವರು ಕಳೆವ ಮೊದಲನೇ ಮಳೆಗಾಲವಿದು. ಅನುಭವವಿಲ್ಲ. ಇಷ್ಟರವರೆಗೆ ಕಳೆದ ಎರಡು ತಿಂಗಳುಗಳೇ ಎರಡು ವರುಷಗಳಂತೆ ಭಾಸವಾಗಿದೆ ಅವರಿಗೆ. ಮಳೆಗಾಲ ಆರಂಭವಾದುದೇ ಆದುದು ಒಂದು ನರ ಹುಳ ಅವರ ಮನೆಗೆ ಬರಲಿಲ್ಲ. ಮಳೆ ಹನಿಯುವ ಮೊದಲು ಬೋರನ ಹೆಂಡತಿ ಲಚ್ಚಿಮಿ ಅಹಮ್ಮದನ ಬೀಬಿ ಹಸೀನ್, ತುಕ್ರನ ಬೈದ್ಯೆತಿ ಪಾರ್ವತಿ ಆಗಾಗ ಬಂದಿದ್ದರು. ಮುಳಿ ಹುಲ್ಲು ಕಿತ್ತಲು ಬಂದವರು, ದನಕರುಗಳನ್ನು ಹುಡುಕುಲು ನಿಂದವರು ಅವರನ್ನು ನೋಡಲೆಂದಾದರೂ ಕಾಣಿಸಿಕೊಂಡುದುಂಟು. ರಸ್ತೆಯಲ್ಲಿ ತೆರಳುವ ದಾರಿ ಹೋಕರು ಮುಳಿ ಹುಲ್ಲನ್ನು ಕಂಡು ಬಿಸಿ ನೀರಿಗೆ ಬಾಯಾರಿ ಬರುತ್ತಿದ್ದರು. ಬೋರ, ಅಹ್ಮದ್, ತುಕ್ರ ಮೊದಲಾದ ಆಳುಗಳು ಹಣದಾಶೆಗಾಗಿ ಕೆಲಸಕ್ಕೆ ಹಾಜರಿರುತ್ತಿದ್ದರು. ಆದರೆ, ಮಳೆಗಾಲ ಆರಂಭವಾದ ಮೇಲೆ ಅವರ ಸುಳಿವಿಲ್ಲ.

ಸೀತಾ ವತಿ ತುಂಬಿ ಹರಿಯುತ್ತಿದ್ದುದ್ದರಿಂದ ಅದನ್ನು ದಾಟಿ ಬರಲು ಹೊಳೆಯಾಚೆಯ ಅಹ್ಮದ್ ಬ್ಯಾರಿಗೂ ಅಶಕ್ಯ. ನೀರು ಭೋರ್ಗರೆದು ಹರಿವ ಶಬ್ದ ಮನೆಯ ವರೆಗೂ ಕೇಳಿಸುತ್ತಿತ್ತು ಗೋವಿಂದರಾಯರಿಗೆ. ದಡ ಉಕ್ಕಿ ಹರಿದು ಬಂತೇ, ಮನೆಗೆ ಅಪಾಯ ಉಂಟೇ ಎಂದು ಅಂಜಿ, ಗಾಳಿಗೆ ಹಾರಿ ಹೋಗದಂತೆ ಹರುಕು ಹಳೇ ಕೊಡೆಯನ್ನು ಅರ್ಧ ಬಿಡಿಸಿ ತಲೆಯ ಮೇಲೆ ಹಿಡಿದುಕೊಂಡು ಹೊಳೆಯವರೆಗೂ ಒಮ್ಮೆ ಅವರು ಬಂದಿದ್ದರು. ದಡ ಮೀರದಿ

ದ್ದರೂ ತುಂಬಿತ್ತು. ನೀರಿನ ರೌದ್ರಾವತಾರವನ್ನು ನೋಡಿ ಅವರ ಕಾಲು ಗಳು ನಡುಗಿದುವು. ಬೇಸಿಗೆಗೆ ತಮ್ಮ ಮೂಗು ಮೇಲೆಂದು ನೀರಿನ ಮೇಲೆ ತಲೆ ಎತ್ತಿ ನಿಂತಿದ್ದ ಒಂದೂ ಬಂಡೆಗಲ್ಲು ಕಾಣಿಸಲೊಲ್ಲದು. ಅವುಗಳ ಎಡೆ ಯಲ್ಲಿ ಬೆಳೆದಿದ್ದ ಈಚಲ ಹುಲ್ಲು, ಸಸಿಗಳ ಸುಳಿವಿಲ್ಲ. ಅಲ್ಲಲ್ಲಿ ಒಂದೊಂದು ಗಿಡದ ಕೈ, ಜುಟ್ಟು ಮಾತ್ರ ಗೋಚರಿಸುತ್ತದೆ. ನೀರಿನ ಭರಕ್ಕೆ ಅದೂ ಒಮ್ಮೆ ಹಿಂದೆ ಮುಂದೆ ಎಳೆಯಲ್ಪಡುತ್ತವೆ. "ಮುಳುಗಿದೆ. ಮುಳುಗಿದೆ" ಎಂದು ಗೋಳಿಡುವಂತೆ ಕಂಡಿತು ಗೋವಿಂದರಾಯರಿಗೆ. ನದಿಯ ನೀರಿನ ಪ್ರವಾಹ ಅಷ್ಟು ಜೋರು. ಅದರ ಬಣ್ಣ ನೋಡಿದಾಗಲೇ ಸಾಮಾನ್ಯರಿಗೆ ಕಣ್ಣು ಕತ್ತಲೆ ಬಂದೀತು. ದಡದ ಬಳಿಯಲ್ಲಿ ನೀರಿಗೆ ಸ್ವಲ್ಪ ಕರಿ ಛಾಯೆ. ಸುಟ್ಟ ಮಲೆಯ ಕರಿ ನೀರು ಕೂಡಿ ಬಂದುದರಿಂದ ಹೀಗಿರಬೇಕು ಆದರೆ ಮುಂದೆ ಮುಂದೆ ಹಳದಿ ಕೆಂಬಣ್ಣ ಮಿಶ್ರ ನೀರು. ಒಮ್ಮೊಮ್ಮೆ ದೊಡ್ಡ ದೊಡ್ಡ ಮರ ಗಳೂ ತೇಲಿ ಬರುತ್ತಿದ್ದುವು. ಕರಾವಳಿಯಲ್ಲಿ ಅವನ್ನು ಬಿಡುವವರು ಕಡಿಮೆ. ದೋಣಿ ನಡೆಸಿ ಅಥವಾ ಈಸಿ, ಮರಗಳಿಗೆ ಹಗ್ಗ ಎಸೆದು ದಡಕ್ಕೆ ಎಳೆದು ತರುವ ಸಾಹಸಿಗರುಂಟು. ಕರಾವಳಿಯಲ್ಲಿ ಹೊಳೆಗಳು ಅಗಲವಿರುವುದರಿಂ ದಲೂ ಹೆಚ್ಚಾಗಿ ಸಮತಟ್ಟಾದ ಬೈಲಿನ ಮಧ್ಯೆ ಹರಿಯುವುದರಿಂದಲೂ ಅದು ಕೆಲವರಿಗೆ ಸಾಧ್ಯ. ಆದರೆ ಎತ್ತರದಿಂದ ತಗ್ಗಿಗೆ ರಭಸದಿಂದ ಹರಿವ ಬಂಡೆ ಗಲ್ಲು ಮರಗಳಿರುವ ಈ ಮಲೆನಾಡಿನಲ್ಲಿ ನೆರೆಗಿಳಿಯಲು ನರ ಮನುಷ್ಯರಿಗೆ ಎದೆಯಿಲ್ಲ. ಪಾಪ! ಅಹ್ಮದ್ ಬ್ಯಾರಿ ಏನು ಮಾಡಿಯಾನು?

ಹೌದು. ಹೊಳೆಯಾಚೆಯ ಆಳುಗಳಿಗಾಗಲೀ ಜನರಿಗಾಗಲೀ ಬರಲು ಅಸಾಧ್ಯ. ಆದರೆ ಹೊಳೆಯೀಚೆಯ ಬೋರ, ತುಕ್ರರೂ ನಾಪತ್ತೆ. ಮಳೆ ಬಿದ್ದೊಡನೆ ಅವರು ಕೆಲಸಕ್ಕೆ ಬರುವುದನ್ನು ನಿಲ್ಲಿಸಿದರು. ಅವರದೂ ತಪ್ಪಲ್ಲ. ಏಕೆಂದರೆ ಅವರೂ ಹಂಗಿನ ಚಾಲಗೇಣಿ ಒಕ್ಕಲುಗಳೇ. ಧನಿಯರ ಬೇಸಾಯ ಬಿಟ್ಟ ಬೇಗಾರಿ ಇದ್ದದ್ದೇ. ಅದು ಮುಗಿದ ವೇಳೆ ಒತ್ತಾಯ ದಿಂದ ಕಟ್ಟಿ ಕೊಟ್ಟ ತಮ್ಮ ವ್ಯವಸಾಯ ಬಿಡುವಂತಿಲ್ಲ. ಬೇಸಾಯದ ಕೆಲಸ ಒಂದೆರಡಲ್ಲ. ಮನುಷ್ಯನ ಮೈ ಗದ್ದೆಯಲ್ಲಿ ಎಷ್ಟು ಮುದ್ದೆಯಾಯಿತೋ ಅಷ್ಟು ಒಳ್ಳೇದು. ಕೆಸರು ತುಳಿದು ತುಳಿದು ಮೊಸರಿನಂತಾದರೆ ಭತ್ತದ ತೆನೆ ಯಥೇಚ್ಛ ಬಂದು ಬಾಯಿ ಮೊಸರಾಗುತ್ತದೆ. ಅದಕ್ಕೂ ಒಂದು ಹೊತ್ತು

ಗೊತ್ತುಂಟು. ಉತ್ತು ನೇಜಿ ನೆಡುವ ಕೆಲಸ ಮುಗಿದ ಮೇಲೆ ಕೊಯ್ಲಿನ ವರೆಗೆ ಅವರಿಗೆ ಬಿಡುವು. ಆಗ ಮಾತ್ರ ಆಗಾಗ ಕಾಣಿಸಿಕೊಂಡರು. ಒಂದು ದಿನ ಬಂದರೆ ಇನ್ನೊಂದು ದಿನವಿಲ್ಲ. ಕೆಲಸವಿಲ್ಲದೆ ಗೋವಿಂದರಾಯರಿಗೆ ಅದು ಗೊತ್ತಾಗುವುದಿಲ್ಲ. ಅವರಿಗೆ ಜನವಿಲ್ಲದೆ ಹೊತ್ತೇ ಹೋಗುವುದಿಲ್ಲ.

ಸಮಯವೂ ಗೊತ್ತಾಗುವುದಿಲ್ಲ. ಹಗಲಿರುಳೂ ಒಂದಾಗಿವೆ. ಹಗಲನ್ನು ಇರುಳು ನುಂಗಿದಂತೆ ಕಾಣುತ್ತದೆ. ಹಗಲೂ ಸಣ್ಣದಾಗುತ್ತ ನಡೆದಿದೆ. ಏಕೆಂದರೆ [illegible] ಬೆಳಗಾದ ಮೇಲೆಯೇ ಅವರು ಹೊರ ಬಾಗಿಲನ್ನು ತೆರೆದು ಮುಖ ಮಂಟಪಕ್ಕೆ ಕಾಲಿಡುವರು. ಸಾಯಂಕಾಲ ಸರಿ ಕತ್ತಲೆ ಪಸರಿಸುವ ಮೊದಲೇ ಬಾಗಿಲಿಗೆ ಚಿಲುಕವಿಕ್ಕಿ ಒಳಗೆ ಕುಳಿತು ಬಿಡುವರು. ಅಲ್ಲದೆ, ಬಂಗಾಡಿಯಲ್ಲಿ ಸೂರ್ಯೋದಯವೂ ಸ್ವಲ್ಪ ತಡ. ಸೂರ್ಯ ಮೂಡಿದ ಒಂದು ತಾಸಿನ ಮೇಲೆಯೇ ಅಲ್ಲಿ ಸೂರ್ಯ ಪ್ರಕಾಶ. ಅಷ್ಟರ ವರೆಗೆ ಬಲ್ಲಾಳರಾಯದುರ್ಗ ತಡೆದು ಬಿಡುತ್ತದೆ. ಒಂದೆರಡು ತಾಸು ಮೊದಲೇ ಸೂರ್ಯಾಸ್ತವಾದಂತೆಯೂ ತೋರುತ್ತದೆ. ಏಕೆಂದರೆ ಕುದುರೆ ಮುಖ ಪರ್ವತಾವಳಿ ಕರಿಸೆರಗನ್ನು ಸೂರ್ಯನಿಗೆ ಅಡ್ಡ ಹಿಡಿದು ಬಿಡುವುದು. ಆಚೆಯ ಸೂರ್ಯನ ದರ್ಶನ ಈಚೆಯವರಿಗಿಲ್ಲ. ಬೆಟ್ಟದ ನೆರಳಿನಲ್ಲಿ ಕತ್ತಲೆ ಬೆರೆತು ಬೇಗನೇ ಒಕ್ಕಲಾಗುತ್ತದೆ ಬಂಗಾಡಿಯಲ್ಲಿ. ಆದುದರಿಂದ, ಹಗಲಿಗಿಂತ ರಾತ್ರಿ ಬಹಳ ದೊಡ್ಡದಾಗಿದೆಯೆಂದು ಗೋವಿಂದರಾಯರು ಕಂಡುದು ಸಹಜವೇ ಆಗಿದೆ.

ರಾತ್ರಿ ಆರಂಭವಾದೊಡನೆಯೇ ಮೋಹನ, ಸೀತಮ್ಮನವರ ಸೆರಗು ಬಿಡುವುದಿಲ್ಲ. “ಮಗ್ಗಿ, ನಕ್ಷತ್ರ, ಸಂವತ್ಸರಗಳ ನಾಮ ಹೇಳು. ಘಟ್ಟದ ಬುಡಕ್ಕೆ ಬಂದ ಮೇಲೆ ಕಲಿತುದು ಘಟ್ಟ ಹತ್ತುವುದು ಬೇಡ” ಎಂದು ಅವರು ಬೆದರಿಸಿದರೂ ಕೇಳಲಾರ. “ಊಟ ಆಗಲಿ. ಮಲಕೊಳ್ಳುವ ಮೊದಲು ಹೇಳುತ್ತೇನೆ” ಎಂದು ಹಾರಿಸಿ ಕೊಳ್ಳುವನು. ಊಟವಾದ ಮೇಲೆ ಒಂದು, ಎರಡು ಎಂದು ಹೇಳಲಾರಂಭಿಸಿ ನೂರರ ಅಂಕೆ ಮುಟ್ಟುವುದರೊಳಗೆ ಅವನು ಬಾಯಿ ಆಕಳಿಸಿ ಬಿಡುವನು. ಆ ಮೇಲೆ ಅವನೆಲ್ಲೋ ಅವನ ಧ್ಯಾನವೆಲ್ಲೋ? “ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ” ಎಂದು ಆರಂಭಿಸಿ ತನ್ಮಧ್ಯೆ “ನಳ, ಪಿಂಗಳ” ಎಂದು ಉಸುರಿ ಬಿಡುವುದೂ ಇದೆ. ತಪ್ಪಿದುದನ್ನು ಗೋವಿಂದರಾಯರು ತಿದ್ದಿ ಹೇಳಿದಾಗ ಅವರೆಂದಂತೆ ಪುನರುಚ್ಚರಿಸುವ. ಮತ್ತೆ ಅದೇ ಸೊಲ್ಲು.

"ಹುಂ, ನಿನಗೆ ನಿದ್ದೆ ಬಂತೆಂದು ತೋರುತ್ತದೆ, ಮಲಗು" ಎಂದವರು ಹೇಳುವುದೇ ತಡ ಅವನ ದೇಹ ಹಾಸಿಗೆ ಕಾಣುತ್ತದೆ.

ಮೋಹನ ನಿದ್ದೆ ಹೋದ ಮೇಲೆ ಜಾಗ್ರತಾವಸ್ಥೆಯಲ್ಲಿ ಉಳಿದ ಜೀವ ಎರಡೇ. ಸೀತಮ್ಮ, ತಂದೆ ಮಗನ ಊಟವಾದ ಮೇಲೆಯೇ ತಾವು ಬಡಿಸಿ ಕೊಂಡು ಕುಳಿತು ಕೊಳ್ಳುವರು. "ನಾನು ಮಲಗಿಲ್ಲ. ನೀನು ಹೆದರುವುದು ಬೇಡ" ಎಂದು ಹೆಂಡತಿಗೆ ತಿಳಿಯಬೇಕೆಂದೋ ಏನೋ ಅಡಿಗೆ ಮನೆಗೆ ಕೇಳು ವಂತೆ "ರಾಂ, ರಾಂ, ಸೀತಾ ರಾಂ" ಎಂದು ಗಟ್ಟಿ ಧ್ವನಿ ತೆಗೆಯುವರು. ಧ್ವನಿ ಇಳಿದಾಗ ಚಪ್ಪಾಳೆ ಬಡೆದು ಹೇಳುವರು. ಆದರೆ ಅವರ ಊಟ ಮುಗಿವ ಹೊತ್ತಿಗೆ ಸೀತಾ ರಾಂ" ಶಬ್ದ ಹೊರಗಿನ ಗುಡುಗು ಜಡಿ ಮಳೆಗಳ ಅನಂತ ಗದ್ದಲದಲ್ಲಿ ಅಡಗಿ ಹೋಗುತ್ತದೆ. "ಏನು ಮಳೆ ? ಎಂಥಾ ಸಿಡಿಲು? ' ಎಂದು ಹೇಳುತ್ತ ಗೋವಿಂದರಾಯರು ಮುಪ್ಪಿನ ಹೊದೆನು ಕೊಂಡೇ ಅಡಿಗೆ ಮನೆಯ ಅಗಳಿಯ ಮೇಲೆ ಬಂದು ಕುಳಿತು ಬಿಡುವರು. ಗಾಳಿಗೆ ಮುಖ ಮಂಟಪದ ಬಾಗಿಲು ಸ್ವಲ್ಪ ಅಲುಗಿದರೆ ಅವರ ಮೈ ಜುಂ ಎಂದೆನ್ನುತ್ತದೆ.

"ಹೌದೇನೇ, ಯಾರಾದರೂ ಕಳ್ಳರು ಬಂದು ಬಾಗಿಲು ಬಡಿದರೆ ನಾವು ಮಾಡುವುದಾದರೂ ಏನು? ಹೆದರಿಸಬೇಕೆಂದರೆ ನಮ್ಮನೆಯಲ್ಲಿ ಒಂದು ಕೋವಿ ಯೂ ಇಲ್ಲ. ನಾಲ್ಕು ಜನ ಬಂದು ನಮ್ಮ ಕುತ್ತಿಗೆ ಹಿಚುಕಿದರೆ ಕೇಳುವ ವರೂ ಇಲ್ಲ "ಎಂದು ಹೆಂಡತಿ ಮುಂದೆ ಆಡುವರು.

"ಹೌದು. ನಿಮಗದೇ ಚಿಂತೆ. ನಮ್ಮಲ್ಲಿ ಕೊಪ್ಪರಿಗೆ ಇದೆಯೇನು ಕಳ್ಳ ರಿಗೆ? ಈ ಕಣ್ಣು ಕಾಣದ ಕತ್ತಲೆ ಗುಡುಗು ಮಳೆಗೆ ಕಳ್ಳರು ಬರುತ್ತಾರೆ! ಅವರಿಗೆ ಜೀವದಾಶೆಯಿಲ್ಲವೆಂದು ತಿಳಿದಿದ್ದೀರಿ. ಒಬ್ಬೊಬ್ಬರಿಗೆ ಈ ಕಾಡಿಗೆ ಬರಲು ಕಾಲು ನಡುಗೀತು. ಒಬ್ಬಿಬ್ಬರು ಬಂದರೆ ನಾವು ಹೆದರುವಂತೆಯೂ ಇಲ್ಲ. ಕೋವಿ ಇಲ್ಲದಿದ್ದರೆ ಕತ್ತಿ ಕೊಡಲಿಯಾದರೂ ಉಂಟಲ್ಲ."

"ನೀನು ಕ್ಷತ್ರಿಯರ ಕುಲದಲ್ಲಿ ಹುಟ್ಟಬೇಕಿತ್ತಪ್ಪಾ. ಹಾಗೆಲ್ಲಾದರೂ ಹುಟ್ಟಿದ್ದರೆ ಏನೇನು ಮಾಡುತಿದ್ದಿಯೋ?"

"ಮಾಡುವುದೇನು? ಝಾನ್ಸಿರಾಣಿ ಏನುಮಾಡಿದಳು? ಅದನ್ನೆ ಮಾಡುತಿದ್ದೆ."

"ಅಬ್ಬ, ಅಬ್ಬ, ಈಗಲಾದರೂ ಏನಾಯ್ತು? ಕಾಲ ಮಿಂಚಿ ಹೋಗಿಲ್ಲ ಝಾನ್ಸಿ ರಾಣಿಯಾಗದಿದ್ದರೆ ಬಂಗಾಡಿ ರಾಣಿಯಾದರೂ ಆಗು"

ಆಗುತಿದ್ದೆನಲ್ಲ! ಏನು ಮಾಡುವುದು? ಪಾರಾಯುಷ್ಯಲ್ಲಿ ವಕ್ರ ಬರೆದ ಅದಕ್ಕೇ ಹೀಗಾಗಿದ್ದೇನೆ. ಈ ಕಾಡಿಗೆ ಬರಬೇಕಾಯ್ತು."

"ಓಹೋ, ಈಗ ಗೊತ್ತಾಯಿತು ನಿನಗೆ! ಉಡುಪಿಯಲ್ಲಿದ್ದಾಗ ಥೈ, ಥೈ, ಕುಣಿಯುತಿದ್ದಿ ಮಕ್ಕಳ ಮನೆಗೆ ತೆರಳಬೇಕೆಂದು."

"ಹಾಂ, ನೀವು ನನ್ನನ್ನು ಹಂಗಿಸಲು ಸುರುಮಾಡಿದಿರಾ? ನಾನು ಕುಣಿದೆ ನಿಜ. ನೀವು ಒಲ್ಲೆ ಎಂದೆನ್ನುತಿದ್ದರೆ ನಾನೊಬ್ಬಳೇ ಎಲ್ಲಿ ಬರುತಿದ್ದೆ? ಮನೋಸ್ಸನದೊಳಗೆ ನಿಮಗೂ ಆಸೆಯಿತ್ತು ಎಂದನ್ನಿ. ಅಪವಾದ ಹೊರಿಸಲು ಮನುಷ್ಯನಿಗೆ ಹೆಂಡತಿಯೇ ಸೈ. ಯಾರ ಮೇಲೆ ಹೊರಿಸಿದರೆ ಯಾರೂ ಕೇಳುವವರಿಲ್ಲ. ಆಗಲಿ, ರಾಜಾ ಬರಲಿ ಈಸಲ. ಕೇಳಿಬಿಡುತ್ತೇನೆ ಅವನನ್ನು!'

ಸೀತಮ್ಮನವರು ನೆನಸಿದಂತೆ ಒಂದು ಆದಿತ್ಯವಾರ ರಾಜಾ ಬಂದ. ಉಡುಪಿಯಿಂದ ಗಾಡಿ ಒಂದು ಮುಟ್ಟೆದ ಮೇಲೆ ಅವನು ಆಗಾಗ ಒಂದೆರಡು ಸಲ ಆಗಮಿಸಿದ್ದ. ಆದರೆ ಜಡಿಮಳೆ ಆರಂಭವಾದಂದಿನಿಂದ ಬಂದಿರಲಿಲ್ಲ. ಈಗ ಅಗಸ್ಟ ಆಗಮಿಸಿದ್ದುದರಿಂದ ಬಿಟ್ಟು ಬಿಟ್ಟು ಮಳೆ ಸುರಿಯುತ್ತಿತ್ತು. ಗಾಳಿ ಬಂದ ಕಡೆ ಕೊಡೆ ಹಿಡಿದರೂ ಅವನ ಕೋಟು ಅಲ್ಲಲ್ಲಿ ಒದ್ದೆ ಮುದ್ದೆಯೇ ದೋತರದ ಚುಂಗನ್ನು ಎತ್ತಿ ಸೊಂಟಕ್ಕೆ ಸಿಕ್ಕಿಸಿದ್ದರೂ ಜೋಡಿನ ಕೆಸರು ನೀರು ಹಿಂಬದಿ ಸಿಡಿದಿದೆ. ಅವನ ಮೋರೆಯಲ್ಲೂ ಸ್ವಲ್ಪ ಸಿಡುಕಿನ ಭಾವವನ್ನೇ ಕಂಡರು ಗೋವಿಂದರಾಯರು. "ಮಗು ಹೇಗಿದೆ.? ಶುಭಾ ಚೆನ್ನಾಗಿದ್ದಾಳಾ?" ಎಂದು ತಾಯಿ ಕೇಳಿದುದಕ್ಕೆ ಸರಿ ಉತ್ತರವನ್ನೇ ಕೊಡಲಿಲ್ಲ "ಅವರಿಗೇನಾಗಿದೆ ದಾಢಿ?" ಎಂದೇ ಮುಕ್ತಾಫಲಗಳು ಉದುರಿದುವು. ಗೋವಿಂದರಾಯರು ಒಮ್ಮೆ ಅಡಿಗೆ ಮನೆಗೆ ತೆರಳುವರು. ಒಮ್ಮೆ ಪಡಸಾಲೆಗೆ ಬಂದು ಮುಖಮಂಟಪದ ಕಡೆ ಹಣಕಿ ನೋಡುವರು. "ನಸ್ಯ ತಂದಿಯೇನು?" ಎಂದು ಕೇಳಲು ಅವರ ಆಶೆ. ನಸ್ಯ ಮುಗಿದು ಹೋಗಿದ್ದುದರಿಂದ ಅದರ ಹಂಬಲವಾದಾಗ ಬರೇ ಬುರುಡೆ ಮೂಸಲು ಅವರು ಆರಂಭಿಸಿ ಎರಡು ಮೂರು ದಿವಸಗಳಾಗಿವೆ. ಅವನು ಕುದುರೆ ಮುಖ ನೋಡುತ್ತ ಏನೋ ಚಿಂತಿಸುತಿದ್ದಾನೆ. ಮೋಹನ ಬಟ್ಟಲು, ನೀರು ಮಣೆಯಿಟ್ಟು. "ಅಣ್ಣಾ ಊಟಕ್ಕೇಳ

ಬೇಕಂತೆ" ಎಂದು ಹೇಳಿದಾಗಲೇ "ಹುಂ" ಎಂದಷ್ಟೇ ಹೇಳಿ ಬಂದ. ಯಂತ್ರ ದಂತೆಯೇ ಊಟ ಮಾಡಿದ. ಆಮೇಲೆ ಚಾಪೆಬಿಡಿಸಿ ಮಲಗಿಕೊಂಡ.

ಏನೋ ಆಗಿದೆ. ಅವನು ಎಂದಿನಂತಿಲ್ಲ" ಎಂದು ತರ್ಕಿಸಿ ಮುಖ ಮಂಟಪಕ್ಕೆ ಬಂದು, "ನಸ್ಯ ಪುರಿತಿಯೇನು ರಾಜಾ" ಎಂದು ಗೋವಿಂದರಾಯರು ಮಾತನಾಡಿಸಿದರು.

ಕೋಟಿನ ಕಿಸೆಯಲ್ಲಿದೆ" ಎಂದಷ್ಟು ಉತ್ತರ ಬಂತು.

ಗೋವಿಂದರಾಯರು ಅಷ್ಟಕ್ಕೇ ಬಿಡದೆ ಅವನ ಚಾಪೆಯ ಬಳಿಯಲ್ಲೇ ಕುಳಿತು ಪೊಟ್ಟಣ ಬಿಚ್ಚಿ ಒಮ್ಮೆ ಮೂಗಿಗೇರಿಸಿ ಮತ್ತೆ ಬುರುಡೆಗೆ ತುಂಬಿಸಲು ತೊಡಗಿದರು. ತನ್ಮಧ್ಯೆ ಕೇಳಿದರು. "ಏಕೆ ನಿನಗೆ ಹುಷಾರಿಲ್ಲವೇನು.?"

"ಹುಷಾರಿಲ್ಲದಿದ್ದರೆ ಇಲ್ಲಿಯ ವರೆಗೆ ನಡೆದು ಬರುತ್ತಿದ್ದೆನಾ?"

ಮತ್ತೇನು ಹೇಳು. ನೀನು ಯಾವಾಗಲೂ ಹೀಗಿರುವವನಲ್ಲ. ಮೋರೆ ಸಣ್ಣದು ಮಾಡಿಕೊಂಡು ಮಲಗಿದರೆ ನಮಗೂ ಬೇಸರವಾಗುತ್ತದೆ. ಅವಳು ಸರಿ ಊಟವನ್ನೇ ಮಾಡಲಿಲ್ಲ. ನಮ್ಮೊಡನೆ ಹೇಳುವ ಸಂಗತಿಯಾದರೆ ಹೇಳು, ಏನಾಯಿತು?"

ಆಗುವುದೇನು? ಈ ಪಂಚ್ಯಾತ್ ಬೋರ್ಡ್ ಇಲಾಖೆಯನ್ನು ಎಬೋಲಿಷ್ ಮಾಡಿದರು"

ಗೋವಿಂದರಾಯರಿಗೆ ಚೂರಿಯಿಂದ ತಿವಿದಂತಾಯ್ತು. ಒಂದು ಕ್ಷಣ ಅವರು ಸ್ತಬ್ಧರಾದರು, "ಅಂದರೆ ಸುಪರ್ ವೈಜರರಿಗೂ ಬಂತಾ ಚಕ್ರ"? ಎಂದು ಆಶ್ಚರ್ಯದಿಂದ ಕೇಳಿದರು.

"ಎಲ್ಲರಿಗೆ ಬಂತು. ಆದರೆ ನಮ್ಮದು ಕೆಲಸ ಖಾಯಂ ಆಗಿರುವುದರಿಂದ ಮನೆಗೆ ಕಳಿಸಲು ಅವರಿಗೆ ಸಾಧ್ಯವಾಗಿಲ್ಲ, ಡಿಸ್ಟ್ರಿಕ್ಟ್ ಬೋರ್ಡಿನ ಕೈಕೆಳಗೆ ದುಡಿಯ ಬೇಕು ಇನ್ನು."

"ಓಹೋ, ಇಷ್ಟಕ್ಕೆ ಇಷ್ಟು........"

ಅವರು ವಾಕ್ಯ ಮುಗಿಸಿರಲಿಲ್ಲ, ನಡುವೆ ಅವನೇ ತಡೆದು "ಇಷ್ಟಕ್ಕೇಕೆ ಚಿಂತೆ ಎಂದರೆ? ನಿಮಗೆ ಗೊತ್ತಾಗಲಿಲ್ಲ. ಇನ್ನು ಮಂಗಳೂರಿನಲ್ಲಿ ಕೆಲಸಕ್ಕೆ ಹಾಜರಾಗಬೇಕು. ನಾನಲ್ಲಿ, ಈ ಆಸ್ತಿ ಇಲ್ಲಿ. ಇಲ್ಲೆಲ್ಲ ಸರಿ ಕೆಲಸ ಯಾರು ಮಾಡಿಸಬೇಕು?"

ಗೋವಿಂದರಾಯರು ಮೌನವೇ ಈಗ ಒಳ್ಳೇದೆಂದು ಸುಮ್ಮಗಿದ್ದರು.

ರಾಜಾ ಮಾತು ಮುಂದುವರಿಸಿದ. "ಮಂಗಳೂರಿಗೆ ವರ್ಗವಾದ ಮೇಲೆ ಪ್ರತ್ಯೇಕ ಬಿಡಾರ ಮಾಡದೆ ಬೇರೆ ಉಪಾಯವಿಲ್ಲ. ಅಲ್ಲೊಂದು ಬಿಡಾರ! ಇಲ್ಲೊಂದು ಬಿಡಾರ!"

ಮತ್ತೂ ತಂದೆ ತುಟಿ ಎತ್ತಲಿಲ್ಲ.

ಅವನು ನಿಲ್ಲಿಸಲಿಲ್ಲ. "ಈ ಎರಡು ಬಿಡಾರದ ವೆಚ್ಚ ಸಹಿಸಿದ ಮೇಲೆ ಉಳಿಯುವುದೇನು? ಆಳುಗಳಿಗೆ ಏನು ಕೊಡಲಿ? ಈ ಕಾಡನ್ನೆಲ್ಲ ಕಡಿದು ಕೃಷಿ ಮಾಡಿಸುವ ಬಗೆ ಹೇಗೆ? ನಾನು ಪೂರ್ವಾಪರ ವಿಚಾರವಿಲ್ಲದೆ ಸುಮ್ಮಗೆ ಹುಚ್ಚಾಗಿ ಈ ಕಾಡು ಭೂಮಿ, ಈ ಪಾಳು ಭೂಮಿ ತೆಗೆದುಕೊಂಡೆ. ಹುಚ್ಚು ಕಟ್ಟೆ ನಿಮ್ಮನ್ನೂ ಕರೆಸಿಕೊಂಡೆ. ಈಗ ಇದನ್ನು ನುಂಗಲೂ ಅಲ್ಲ. ಉಗುಳಲೂ ಅಲ್ಲ. ಏನು ಮಾಡಬೇಕೆಂದು ತೋಚುವುದಿಲ್ಲ. ಒಟ್ಟು ಹುಚ್ಚನಂತಾಗಿದೆ ನನಗೆ" ಎಂದುಸುರಿ ರಾಜಾ ಹಣೆಯ ಮೇಲೆ ಬಲಗೈಯನ್ನಿಟ್ಟುಕೊಂಡ.

ತಟಪಟ ಮಳೆಯ ದೊಡ್ಡ ದೊಡ್ಡ ಹನಿಗಳು ಆಕಾಶದಿಂದ ಉದುರಿದುವು. ಗಾಳಿ ಸುಂಯ್ ಸುಂಯ್ ಎಂದು ಬೀಸುತ್ತಿತ್ತು. ಮಗನ ಸಿಟ್ಟುಸಿರನ್ನೂ ಅವನ ಮಾತುಗಳನ್ನೂ ಕೇಳಿ ಗೋವಿಂದರಾಯರಿಗೆ ಒಂದೆಡೆ ಆಶ್ಚರ್ಯವೂ ಇನ್ನೊಂದೆಡೆ ಅನಂತ ವೇದನೆಯೂ ಆಯಿತು. ಅವನ ಅಧೈರ್ಯಕ್ಕಾಗಿ ಆಶ್ಚರ್ಯ. ಹತಾಶೆಗಾಗಿ ವ್ಯಸನ. ದುಃಖದಿಂದ ಗೋವಿಂದರಾಯರ ಕಣ್ಣುಗಳಲ್ಲಿ ನೀರು ತುಂಬಿದುವು. ಆದರೆ ಅದನ್ನು ತೋರಗೊಡಬಾರದೆಂದು ಒಂದು ಚಿಟಿಕೆ ನಸ್ಯ ಏರಿಸಿ ಮೂಗೊರಸಿಕೊಂಡಾಗ ಕಣ್ಣುಗಳನ್ನು ಒರಸಿಕೊಂಡರು. ನಾಲ್ಕು ಮಾತುಗಳನ್ನು ಹೇಳಿ ಸಂತೈಸಬೇಕೆಂದು ಅವರ ಮನಸ್ಸು ಎಳೆಯತೊಡಗಿತು. ಸ್ವಲ್ಪ ಗಂಭೀರವಾಗಿಯೇ ಅವರು ಆರಂಭಿಸಿದರು.

"ರಾಜಾ, ನೀನು ಹೇಳಿದುದೆಲ್ಲ ಅರ್ಥವಾಯಿತು. ಆದರೆ ಇದಕ್ಕಾಗಿ ನೀನು ಚಿಂತಿಸುವ ಕಾರಣ ಮಾತ್ರ ನನಗೆ ಅರ್ಥವಾಗುವುದಿಲ್ಲ. ಮಂಗಳೂರಿಗೆ ವರ್ಗವಾದ ಮಾತ್ರಕ್ಕೆ ಇಷ್ಟು ಮನೋದೌರ್ಬಲ್ಯ ಹೇಗೆ ಬಂತು? ಇಲ್ಲಿ

ಯಾರೂ ಕೆಲಸ ಮಾಡುವವರಿಲ್ಲವೆಂದೇ? ನಾವಿಲ್ಲವೇನು? ನಿನಗೆ ಆ ಶಂಕೆ ಯಾಕೆ ಉತ್ಪನ್ನವಾಯ್ತು?"

ರಾಜಾ ಚಾಪೆಯಿಂದ ಎದ್ದು ಕುಳಿತು, "ಸಂಶಯವಲ್ಲ. ನಿಮಗೆ ವಯಸ್ಸಾಗುತ್ತ ಬಂತು. ಮತ್ತು ನಿಮಗೆ ಕೆಲಸ ಮಾಡಿಸಲು ತ್ರಾಣ ಇರಲಾರದೆಂದು ಹಾಗೆ ಹೇಳಿದೆ" ಎಂದ.

"ಹಾ, ನನಗೆಷ್ಟು ವಯಸ್ಸಾಯಿತ? ಇನ್ನೂ ಅರುವತ್ತಕ್ಕೆ ಮುಟ್ಟಲ್ಲಿ ನನ್ನ ತಲೆ ಹಣ್ಣಾದೊಡನೆ ನಾನು ಮುದುಕನಾಗಲಿಲ್ಲ. ಈಗ ಕೂಡಾ ಒಂದು ಮುಡಿ ಅಕ್ಕಿಯನ್ನು ಎತ್ತಿ ಇಡುವೆ. ಹೊತ್ತು ಹತ್ತು ಮಾರು ನಡೆವೆ. ಅಷ್ಟು ತ್ರಾಣವಿಲ್ಲದಿರುತಿದ್ದರೆ ನಿನ್ನ ಹೆಜ್ಜೆಯ ಮೇಲೆ ಹೆಜ್ಜೆ ಹಾಕಿ ಮುಂಡಾಜೆಯಿಂದ ಇಲ್ಲಿಯ ವರೆಗೆ ನಡೆಯುತಿದ್ದೆನೇನ? ನಾವು ಹಿಂದಿನ ಮನುಷ್ಯರು. ನಮ್ಮ ಎಲುಬುಗಳು ಕಬ್ಬಿಣದ ಸರಳುಗಳಂತಿವೆ. ನೋಡು" ಎಂದು ಗೋವಿಂದರಾಯರು ತಮ್ಮ ಒಲತೋಳನ್ನೆತ್ತಿದರು.

ರಾಜಾ ವಿಸ್ಮಿತನಾದ.

ಗೋವಿಂದರಾಯರ ಆವೇಶ ಇಳಿದಿರಲಿಲ್ಲ. ಬಿಟ್ಟಲ್ಲಿಂದ ಮಾತಿನ ಎಳೆಯನ್ನು ಮತ್ತೆ ಹಿಡಿದೆಳೆದರು. "ಹೌದು. ಮಂಗಳೂರಲ್ಲೊಂದು ಬಿಡಾರ ಮತ್ತೆ ಇಲ್ಲೊಂದು ಬಿಡಾರ ನಡೆಸಲು ಕಷ್ಟ. ನಿನ್ನ ಬಿಡಾರಕ್ಕೆ ನೀನು ಎಷ್ಟು ಖರ್ಚು ಮಾಡುತ್ತಿ, ಮಂಗಳೂರಲ್ಲಿ ಎಷ್ಟು ವೆಚ್ಚವಾದೀತೆಂದು ನಾನು ಹೇಳಲಾರೆ. ಆದರೆ, ಇಲ್ಲಿಯ ಬಿಡಾರದ ಭಾರ ನಿನ್ನ ಮೈಮೇಲೆ ಬೀಳಲಾರದು ಈ ಮೂರು ಜೀವಗಳಿಗೆ ಎಷ್ಟು ಬೇಕು? ತಿಂಗಳೊಂದಕ್ಕೆ ಒಂದು ಮುಡಿ ಅಕ್ಕಿ ಯಥೇಚ್ಛ. ಮುಡಿ ಅಕ್ಕಿಗೆ ಮೂರು ರೂಪಾಯಿಗಳು- ಮೇಲೆ ಜಿನಸು ಸಾಮಾನುಗಳಿಗೆ ಎರಡು ಮೂರು ರೂಪಾಯಿಗಳಿದ್ದರೆ ಸಾಕು. ಹಾಲು ತುಪ್ಪಕ್ಕಾಗಿ ನಮಗೆ ಕಾಸಿನ ಖರ್ಚಿಲ್ಲ. ಬಾಗೀರಥಿ ಕರು ಹಾಕಿದೆ. ಪೇಟೆಯಂತೆ ಇಲ್ಲಿ ತರಕಾರಿ ಕ್ರಯಕ್ಕೆ ಕೊಳ್ಳುವುದೂ ಇಲ್ಲ. ಕಾಲಿನಲ್ಲಿ ಮಣ್ಣು ಕೆದರಿ ಬೀಜಗಳನ್ನೆಸೆದರೂ ನಮಗೆ ಬೇಕಾದ ತರಕಾರಿ ಬೆಳೆಯುತ್ತದೆ. ಅಂಥಾ ಭೂಮಿ ಇದು. ಅಷ್ಟು ಫಲವತ್ತಾಗಿದೆ."

ರಾಜಾ ಎದ್ದು ಬೆನ್ನಿಗೆ ಎರಡು ಕೈಗಳನ್ನೂ ಹೆಣೆದುಕೊಂಡು ಮುಖಮಂಟಪದಲ್ಲಿ ಅತ್ತಿತ್ತ ಅಲೆಯಲಾರಂಭಿಸಿದ.

ಅಪಸು ಆಲಿಸುತ್ತಿರುವುದನ್ನು ನೋಡಿ ತಂದೆ ಇನ್ನಷ್ಟು ಉತ್ಸಾಹ ದಿಂದ ನುಡಿದರು. "ಇದು ಕಾಡು ಭೂಮಿ; ಕೃಷಿ ಮಾಡಿಸುವುದು ಹೇಗೆ? ಎಂದೆಲ್ಲ ಇನ್ನೊಮ್ಮೆ ಆಡಬೇಡ. ಕಾಡು ನಮ್ಮ ಸಂಪತ್ತು. ಅದರ ಕಟ್ಟಿಗೆ ನಮಗೆ ಅವಶ್ಯ. ಅದರ ಸೊಪ್ಪು ಹಟ್ಟಿ ಗೊಬ್ಬರಕ್ಕೆ ಬೇಕು. ಕಾಡು ಕಡಿದೇ ನಾಡಾಗಿದೆ. ಕಾಡು ಮನುಷ್ಯನೇ ನಾಡಿಗಿಳಿದ. ಕಾಡಿನ ನೆರಳಲ್ಲೇ ನೆರೆಯಲ್ಲೇ ನಾಡು ಕಟ್ಟಿದ. ಕಾಡಿಲ್ಲದ ನಾಡು ಸುಡುಗಾಡು. ಸ್ವಲ್ಪ ಸ್ವಲ್ಪ ಕಾಡನ್ನು ನಾವೂ ಕಡಿದು ಗದ್ದೆ ಮಾಡೋಣ. ಒಂದೊಂದೇ ಗದ್ದೆ ಮಾಡಿ ಬಿತ್ತುವ. ಒಂದೊಂದೇ ಸಸಿ ನೆಟ್ಟು ತೋಟ ಬೆಳೆಸುವ. ಒಮ್ಮೆಗೊಂದು ಎಕರೆ. ವರುಷ ಕ್ಕೊಂದು ತುಂಡು. ಹತ್ತು ವರುಷ ಈ ರೀತಿ ದುಡಿಯಬೇಕು. ಹತ್ತು ವರುಷ ಗಳಲ್ಲಿ ಹತ್ತು ರಾಜ್ಯ ಕಟ್ಟಬಹುದು. ಹತ್ತು ವರುಷ ಹತ್ತು ಯುಗವಲ್ಲ. ಕಣ್ಮುಚ್ಚಿ ತೆರೆದಾಗ ಹತ್ತು ವರುಷ ಉರುಳುತ್ತದೆ. ಹತ್ತು ವರುಷಕ್ಕೆ ಹತ್ತು ನೂರು, ಹತ್ತು ಸಹಸ್ರ ಪುಡಿಯಾದರೂ ವ್ಯರ್ಥ ಎಂದೆನಬೇಡ. ಮಣ್ಣಿ ನಲ್ಲಿ ಚೆಲ್ಲಿದ ಹೊನ್ನು ಮೊಳಕೆ ಒಡೆದು ಗಿಡ ಮರವಾಗಿ ಬೆಳೆದು ಚಿನ್ನದ ಹೂ ಹಣ್ಣು ಬಿಡುವುದು. ಮಣ್ಣಿನಲ್ಲೇ ನಮ್ಮ ಹಿರಿಯರು ಬೇರು ಬಿಟ್ಟರು. ಆಳದ ವರೆಗೆ ಬೇರು ಇಳಿದರೆ ಗಾಳಿ ಮಳೆ ಸೋಂಕದು. ಗೆದ್ದಲು ಬದನಿಕೆ ಗಳು ಜೀವರಸವನ್ನು ಹೀರಲಾರವು. ಇದು ಬಂಗಾರ ಭೂಮಿ. ಈ ಭೂಮಿ ಯಲ್ಲಿ ಕೊಪ್ಪರಿಗೆಯಿದೆ. ಇದು ಪಾಳೇ?"

ಗೋವಿಂದರಾಯರ ಮಾತು ಮುಗಿದಾಗ ನಭವನ್ನು ಮುತ್ತಿದ್ದ ಮೋಡಗಳೆಲ್ಲ ತಿಳಿಯಾಗಿ ಸೂರ್ಯನ ಬಿಸಿಲು ಬಿದ್ದಿತು. ಕಾಡು ಪಾರಿವಾಳ ಗುಟುರು ಹಾಕ ತೊಡಗಿತು. ಅಂಗಳದಿಂದ ಓತಿಯೊಂದು ಓಡಿ ಬಂದು ಮುಖಮಂಟಪದ ದಂಡೆಯ ಮೇಲೆ ಕುಳಿತು ತಲೆದೂಗಿತು. ಜಂತಿಯ ಮೇಲಿನ ಹಲ್ಲಿ "ಹೌದು ಹೌದು" ಎಂದು ಲೊಚಗುಟ್ಟಿತು. ಮನೆಯ ಹಿಂಬದಿ ಬೆಳೆದ ಕಾಡಿನಲ್ಲಿ ಮಂಗಗಳು ಟರ್ ಟರ್ ಅರಚಲು ಆರಂಭಿಸಿದುವು. ರಾಜು ಅಂಗಳಕ್ಕೆ ಇಳಿದು ಬಂದು, "ಹಿಡಿ, ಹಿಡಿ" ಎಂದು ದೂರದಿಂದಲೇ ಮಂಗಗಳನ್ನು ಬೆದರಿಸಲಾರಂಭಿಸಿದ.

"ಹಣ್ಣು ಗಿಣ್ಣಿದ್ದರೆ ಮಂಗಗಳು ಒಂದನ್ನೂ ಉಳಿಸಲಿಕ್ಕಿಲ್ಲ" ಎಂದರು ಅಂಗಳಕ್ಕೆ ಬಂದ ಸೀತಮ್ಮ

“ ಕೋವಿಯಿಂದ ಡಂ ಡಂ ಗುಂಡು ಹೊಡೆದರೆ ಸರಿ” ಎಂದ ಮೋಹನ ಕೈಗಳನ್ನು ಕೋವಿಯಾಕಾರ ನೀಡಿ.

ತಮ್ಮನ ಮಾತು ಕೇಳಿ ರಾಜನಿಗೆ ನಗು ಬಂತು. “ನೀನು ಮಂಗಗಳ ಸಮೀಪ ಹೋಗ ಬೇಡ. ಆ ದೊಡ್ಡ ಮುಸು ನಿನ್ನನ್ನು ಎತ್ತಿಕೊಂಡು ಹೋದೀತು. ” ಎಂದು ನುಡಿದ.

“ ಆಗಲಿ, ಒಮ್ಮೆ ಜುಟ್ಟು ಹಿಡಿದು ಎಳೆದೊಯ್ಯಲಿ. ನಾನು ಬೇಡ ವೆಂದರೆ ಕೇಳುವುದಿಲ್ಲ. ಮಂಗ ಕಂಡ ಕೂಡಲೇ ಕಲ್ಲೆಸೆಯುತ್ತಾನೆ. ಇವನೂ ಒಂದು ಮಂಗವೇ. ಒಮ್ಮೆ ಬುದ್ಧಿ ಬರಲಿ ” ಎಂದು ಸೀತಮ್ಮ ಮಾತು ಕೂಡಿ ಸಿದರು.

“ ಬೋರ, ತುಕ್ರ ಮೊದಲಾದವರು ಕೆಲಸಕ್ಕೆ ಸರಿ ಬರುತ್ತಾರಾ? ಕಟ್ಟಿಗೆ ಇದೆಯಾ?” ಎಂದು ತಾಯಿಯನ್ನು ಕೇಳಿದ ರಾಜಾ.

“ ಬೇಸಾಯ ಇದ್ದಾಗ ಅವರು ತಲೆ ತೋರಿಸಲಿಲ್ಲ. ನಡುನಡು ಒಂದೊಂದು ದಿನ ಬಂದರು. ಇನ್ನು ಕೊಯ್ಲು. ಅದು ಮುಗಿದ ಮೇಲೆಯೇ ಬರಬಹುದು. ಕಟ್ಟಿಗೆ ಮೊದಲೇ ರಾಶಿ ಮಾಡಿದ್ದಾರೆ ಕೊಟ್ಟಿಗೆಯಲ್ಲಿ. ನಾಲ್ಕು ಮದುವೆಗೆ ಸಾಲುವಷ್ಟಿದೆ ಇನ್ನೂ. ”

ಅಲ್ಲಿಂದ ಕೊಟ್ಟಿಗೆಯ ಬಳಿ ತೆರಳಿದ. ಎರಡು ಸಣ್ಣಗದ್ದೆಗಳಷ್ಟು ಸ್ಥಳ ದಲ್ಲಿ ಕಾಡುಗಿಡಗಳನ್ನೆಲ್ಲ ಕಡಿದಿದ್ದರು. ಮಳೆಗಾಲವಾಗಿದ್ದುದರಿಂದ ಆ ಗುತ್ತಿ ಗಳು ಮತ್ತೆ ಚಿಗುರಿದ್ದವು. ಇದೇ ರೀತಿ ಹೊಳೆಯ ವರೆಗೂ ಗದ್ದೆ ಮಾಡ ಬೇಕೆಂದೂ ರಾಜಾ ಯೋಚಿಸಿದ. ವಿಚಾರ ಮಾಡುತ್ತ ಹೊಳೆಯ ವರೆಗೂ ಬಂದ. ಕೆಂಬಣ್ಣ ಹೊಂಬಣ್ಣದ ನೀರು ತಿಳಿಯಾಗಿದೆ. ನೀರಿನೊಡನೆ ಹರಿದು ಬಂದ ಉಸುಕು ಹೊಳೆಯಲ್ಲಲ್ಲಿ ಇರುವ ದೊಡ್ಡ ದೊಡ್ಡ ಹೊಂಡಗಳಿಗೆ ಇಂಗಿದೆ. ಕೆಸರು ತಿಳಿಯಾಗಿ ಸುಭಾಷಿಣಿಯ ಕಣ್ಣಾಲಿಗಳ ಬಣ್ಣ ಬಂದಿದೆ ನೀರಿಗೆ. ಆಚೆ ಈಚೆ ದಂಡೆಯ ವರೆಗೆ ಏಕಪ್ರಕಾರವಾಗಿದ್ದ ನೀರು ಈಗ ದಂಡೆಯಿಂದ ಒಂದೆರಡು ಕೋಲು ಇಳಿದಿದೆ. ನದಿಯ ಮಧ್ಯದಲ್ಲಿದ್ದ ಒಂದೊಂದು ಗಿಡಗಳ ಟೊಂಗೆಗಳೂ ಹಣುಕಿನೋಡುತ್ತಿವೆ. “ ಇನ್ನೂ ದಾಟಲು ಸಾಧ್ಯವಿಲ್ಲ.” ಎಂದೆಂದುಕೊಂಡು ರಾಜಾ ಹೊಳೆಯ ದಂಡೆಯಲ್ಲೇ ನಡೆದ. ಕಾಲಿಟ್ಟಲ್ಲಿ ನೀರು. ಹೆಜ್ಜೆಯಿಟ್ಟಲ್ಲಿ ಹಸುರು ಹುಲ್ಲು. ಹುಲ್ಲಿನ ಎಸಳು

ಗಳ ಮೇಲಿದ್ದ ಬಿಳಿ ಮುತ್ತಿನಂತ ಹನಿಗಳೂ ಸಿಡಿದುವು ಮೊಣ ಗಂಟಿನ ವರೆಗೆ. ಮುಂದೆ ಮುಂದೆ ಹೋದಂತೆ ಹಿಂದಿನ ಹೆಜ್ಜೆಗಳೂ ಮೂಡಿದುವು. ನೇರವಾಗಿ ನಡೆಯುವಂತೆಯೂ ಇಲ್ಲ. ಒಂದೆಡೆ ಎದುರಿಗೆ ಬಲೆಯಂತಹ ಸೀಗೆಯ ಬಳ್ಳಿ. ಇನ್ನೊಂದೆಡೆ ತೊಡೆಯಾಕಾರದ ಬಳ್ಳಿಗಳು. ಮತ್ತೊಂದೆಡೆ ತಲೆ ತಗ್ಗಿಸಿ ನುಸುಳಬೇಕು. ಕೆಲವು ಕಡೆ ಕೈಯಿಂದ ಗಿಡಗಳ ಎಳೆ ಟೊಂಗೆ ಗಳನ್ನು ಸರಿಸಿ ಸರಿಯುವದೂ ಅತ್ಯಗತ್ಯ. ಒಮ್ಮೆ ಮರಗಳ ತೊಗಟೆ ಯಲ್ಲಿ ಅಂಟಿಕೊಂಡ ಜಿಟ್ಟೆ ಹುಳಗಳ "ಜೀಂ ಜೀಂ" ಶಬ್ದವನ್ನಾಲಿಸಿ ವಿಸ್ಮಿತ ನಾದ. ಇನ್ನೊಮ್ಮೆ ಕಾಲಡಿ ಓಡಿದ ಆರಣೆ ನೋಡದೆ ಹಾವೆಂದು ಭ್ರಮಿಸಿ ಅತ್ತಿತ್ತ ತಿರುಗಿ ನೋಡಿದ. ಹಾವಿನ ಭಯದಿಂದ ಬೇಗ ಬೇಗನೇ ಬಡಗು ದಿಕ್ಕಿನ ದರೆ ದಾಟಿ ಆಚೆಯ ಜಿಬ್ಬು ಗದ್ದೆಗಳಿಗೆ ಹಾರಿದ. ಅಲ್ಲಿಂದ ತಿರುಗಿ ನೋಡಿದಾಗ ಅವನಿಗೆ ಇನ್ನಷ್ಟು ಆಶ್ಚರ್ಯವಾಯಿತು. ಮೊದಲು ಅವನು ಕಂಡಾಗ ಅಗಳು ಬೋಳಾಗಿತ್ತು. ಆದರೆ ಈಗ ಅದರ ತುದಿಯ ಮೇಲೆ ಒಂದೊಂದು ಮೊಳದ ಕಿರು ಬೆರಳಿನ ಗಾತ್ರದ ಕಡ್ಡಿಗಳನ್ನು ನೆಟ್ಟಿದ್ದರು. ಹತ್ತಿರ ಬಂದು ಅಗಳು ಏರಿ ಪುನಃ ಬಗ್ಗಿ ನೋಡಿದ. ಕೆಲವು ಚಿಗುರಿದ್ದುವು. ಚಿಗುರುಗಳನ್ನು ಕಿತ್ತು ಅಂಗೈಯಲ್ಲಿ ತಿಕ್ಕಿ ಮೂಸಿದ. ಲಂತಾನ. ಹೌದು ಲಂತಾನ ಕಡ್ಡಿಗಳು. ಜೀವಪಿವೆ. ಕೆಲವು ಚಿಗುರಿ ಜೀವದುಸಿರು ಸೇದುತ್ತಿವೆ. "ಆಸ್ತಿಯ ಮೂರು ಬದಿಯಲ್ಲಿರುವ ಅಗಳಿಗೂ ಇದನ್ನು ನೆಡಿಸಬೇಕು. ಇದು ಒಳ್ಳೆಯ ಬೇಲಿ" ಎಂದು ಯೋಚಿಸುತ್ತಾ ಮರಳಿದ.

ಮನೆಗೆ ಮರಳುತಿದ್ದಾಗ ರಾಜನಿಗೆ ನಾಗ ಬನದ ನೆನಪಾಯ್ತು ಮತ್ತೆ. ರವಿವರ್ಮನ ಚಿತ್ರದಲ್ಲಿ ನಿರೂಪಿಸಿದಂತೆ ನಾಗ ಶೇಷನ ಹೆಡೆಯಂತೆ ಬೆಳೆದ ಬನ. ಬನದಲ್ಲಿ ಸುತ್ತಿದ ವಿಚಿತ್ರ ಬಳ್ಳಿಗಳು, ಕೊಡೆಯಂತೆ ಹೆಣೆದ ರೀತಿ, ಆ ವಿಚಿತ್ರ ಮರ, ಅವರಲ್ಲಿ ಇಳಿದ ಮದನ ಕೈ ರಾಜನ ಮೈಯಲ್ಲಿ ನಮಿರೇ ಳಿಸಿದುವು. ಮನವನ್ನು ಆಕರ್ಷಿಸಿದುವು. ಅದನ್ನು ಒಂದು ದಿನ ಅಗೆಸ ಬೇಕು. ಕೊಪ್ಪರಿಗೆಯಿದೆಯೆಂದರು ಅಪ್ಪಯ್ಯ. ಇರಲೇಬೇಕು. ಅದರೊ ಳಗೆ ಏನಿದೆಯೆಂದು ನೋಡಬೇಕು. ಚಿನ್ನವಿದ್ದರಂತೂ ನನ್ನ ಪುಣ್ಯವೇ ಎಲ್ಲ ಮಾರಿ ಈ ಭೂಮಿಗೆ ಹಾಕುತ್ತೇನೆ. ಹತ್ತು ವರುಷವೇಕೆ ಹತ್ತು

ತಿಂಗಳೊಳಗೆ ಹೊಲಗದ್ದೆ ಮಾಡಿ ಬಿಡಬಹುದು" ಎಂದೂ ಭಾವಿಸಿ ಬಂದು ಬನದೊಳಗೆ ನುಸುಳಿದ.

ತಂದೆ ಅಲ್ಲಿ ನಿಂತಿದ್ದರು.

ರಾಜ ಲಜ್ಜೆಯಿಂದ ತಲೆ ತಗ್ಗಿಸಿದ. "ಊಟಕ್ಕಾಯ್ತು. ನೀನೆಲ್ಲಿ ಹೋದಿ? ಹೊಳೆಯ ಕಡೆ ತೆರಳಿದವನು ಬಹಳ ಹೊತ್ತಾದರೂ ಹಿಂದಿರುಗಲಿಲ್ಲ. ಕರೆದರೂ ನೀನು ಓ ಗೊಡಲಿಲ್ಲ" ಎಂದರು ತಂದೆ.

"ಹೊಳೆಯ ಬದಿಗೆ ಹೋಗಿದ್ದೆ. ನೀರಿನ ಗರ್ಜನೆಗೆ ನೀವು ಕರೆದುದು ಕೇಳಿಸಲಿಲ್ಲ".

"ಒಬ್ಬೊಬ್ಬರೇ ಇಲ್ಲೆಲ್ಲ ಓಡಾಡಬಾರದು. ಹುಲ್ಲು ಕಸ ಕಡ್ಡಿಗಳ ಎಡೆಯಲ್ಲಿ ಚೇಳು ಹಾವುಗಳಿದ್ದರೂ ಗೊತ್ತಾಗುವುದಿಲ್ಲ."

"ರಾಜಾನ ದೃಷ್ಟಿ ಕಾಲಿನ ಪಾದದ ಕಡೆ ಹರಿಯಿತು. ಬನದೊಳಗೆ ಕಸ ಕಡ್ಡಿ ತರಗೆಲೆಗಳು ಬಹಳ-ಇದ್ದಿರಲಿಲ್ಲ. ಯಾರೋ ಅದನ್ನೆಲ್ಲ ಬಳಿದಿದ್ದುದು ಗೋಚರಿಸಿತು. ಅಡ್ಡ ಬಿದ್ದ ನಾಗಕಲ್ಲುಗಳನ್ನು ಎತ್ತಿ ಕೂಡಿಸಲಾಗಿತ್ತು. ಅರ್ಧ ಹುಗಿದಂತಿದ್ದ ಕಲ್ಲುಗಳ ಮೇಲೆ ಅಂಟಿಕೊಂಡಿದ್ದ ಪಾಚಿ, ಹುಲ್ಲುಗಳನ್ನು ಕಿತ್ತಿದ್ದರು. ಎಲ್ಲ ಕಡೆ ಮನುಷ್ಯ ಕೈ ಚಾಚಿದ ಚಿಹ್ನೆಗಳೇ. "ಇದನ್ನೆಲ್ಲ ನೀವು ಮಾಡಿದಿರಾ?' ಎಂದು ಕೇಳಿದ.

ಹೌದು, ನಾಗರ ಪಂಚಮಿಗೆ ಹಾಲು ಎರೆದೆ" ಎಂದು ಹೇಳಿ ಅವರು ಹೊರಟರು. ಮೋಹನನಂತೆ ಹಿಂದಿನಿಂದ ಅನುಸರಿಸಿದ ರಾಜಾ.

ಮಧ್ಯಾಹ್ನ ಊಟವಾದ ಮೇಲೆ ಹೊಳೆಯಾಚೆಯ ಆಳುಗಳನ್ನು ಕಂಡು ಬರಲು ತೆರಳಿದ ರಾಜಾ ಹಿಂತಿರುಗಿದಾಗ ಕತ್ತಲಾಗಿತ್ತು. ಒಟ್ಟಿಗೆ ಬೋರ ಬಂದಿದ್ದ. ಬೋರ ಅಲ್ಲೇ ರಾತ್ರಿ ಮಲಗಬೇಕೆಂದೂ ಬೆಳಗಿನ ಜಾವಕ್ಕೆ ಎದ್ದು ಮುಂಡಾಜೆಯ ವರೆಗೆ ಇಬ್ಬರೂ ತೆರಳಬೇಕೆಂದೂ ನಿಶ್ಚಯವಾಯಿತು. ನಸುಕಿಗೆ ಮುಂಡಾಜೆಯಲ್ಲಿ ಬಸ್ಸಿನಲ್ಲಿ ಕುಳಿತರೆ ಹತ್ತು ಗಂಟೆಯೊಳಗೆ ಮಂಗಳೂರಿಗೆ ತಲುಪುತ್ತದೆ. ಆಫೀಸಿಗೆ ಸೋಮವಾರ ಹಾಜರಾಗಲು ತೊಂದರೆಯಿಲ್ಲ. ಬೋರ ಬೆಳಗಾದ ಮೇಲೆ ಮುಂಜಾನೆಯಿಂದ ಹಿಂತಿರುಗುವನು.

ರಾತ್ರಿ ಊಟವಾಗುವಾಗ ಬಡಿಸುವ ತಾಯಿಯ ಮೋರೆ ನೋಡಿ ರಾಜಾ ನುಡಿದ. "ಅಮ್ಮಾ ಮನೆಯಲ್ಲಿ ಏನೇನು ಸಾಮಾನಿಲ್ಲವೆಂದು ಹೇಳು.

ಜೋರ ನನ್ನೊಟ್ಟಿಗೆ ಹೇಗೂ ಬರುವ. ಮುಂಡಾಜೆಯಿಂದ ಬೇಕಾದ್ದನ್ನೆಲ್ಲ ತಲೆ ಹೊರೆಯಲ್ಲಿ ಕಳಿಸುತ್ತೇನೆ."

"ಉಪ್ಪು ಹುಳಿ ಮೆಣಸು ಬೆಲ್ಲ. ಮತ್ತೆಲ್ಲ ಇದೆ. ಕಾಫಿಪುಡಿಯೊಂದಿಲ್ಲ." ಎಂದರು ಸೀತಮ್ಮ.

ಬೆಳಗಿನ ಜಾವಕ್ಕೆ ಎದ್ದು ಅವರು ದೀಪ ಹಿಡಿದುಕೊಂಡೇ ಹಟ್ಟಿಗೆ ತೆರಳಿ ಭಾಗೀರಥಿಯನ್ನು ಎಬ್ಬಿಸಿ ಹಾಲು ಹಿಂಡಿಕೊಂಡು ಬಂದು ರಾಜು ಹೊರಟಾಗ ಕಾಫಿ ತಯಾರಿಸಿ ಕೊಟ್ಟರು. ಮಗನೊಂದಿಗೆ ಮಾರ್ಗವವರೆಗೆ ತೆರಳುವುದು ಗೋವಿಂದರಾಯರ ಪದ್ಧತಿ. ಆವರೆ, ಕತ್ತಲೆಯಿದ್ದುದರಿಂದ ಮುಖಮಂಟಪದಿಂದ ಇಳಿಯಲಿಲ್ಲ. ಅಗಳು ದಾಟಿದಾಗ ರಾಜಾ, "ಕೆಲಸ ಸಾಗಲಿ ಅಪ್ಪಯ್ಯ. ಜೋರನವರಿಗೆಲ್ಲ ತಿಳಿಸಿ ಬಂದಿದ್ದೇನೆ. ಒಂದೆರಡು ವಾರಗಳ ಮೇಲೆ ಬರುವೆ." ಎಂದು ಕೂಗಿ ಹೇಳಿದ.

"ಮಂಗಳೂರು ನಸ್ಯ ಒಂದು ಮುಕ್ಕಾಲಿನದ್ದು ಮರೆಯ ಬೇಡ" ಎಂದು ಅವರು ಉತ್ತರವಿತ್ತರು.

## ೬ನೆಯ ಅಧ್ಯಾಯ

ಮುಂಡಾಜೆಯಿಂದ ಮನೆ ಸಾಮಾನುಗಳನ್ನು ಮನೆಗೆ ಹೊತ್ತು ತಂದ ಬೋರ ಆ ದಿನ ಕೆಲಸಕ್ಕೂ ನಿಂತ. ಹಿಂದಿನ ದಿನ ರಾಜಾ ಹೇಳಿ ಬಂದಿದ್ದುದರಿಂದ, ತುಕ್ರನೂ ಮುಂಜಾನೆ ಉದಯವಾದ. ಕತ್ತಿ ಕೊಡಲಿ ಮಡುಗಳನ್ನು ಮೋಹನ ಹೊರಗಿಟ್ಟ. ಬೆಣಚು ಕಲ್ಲುಗಳನ್ನು ಪುಡಿ ಮಾಡಿ ಅದನ್ನು ಒರೆ ಮಣೆಗೆ ಸುರಿದು ಕೊಡಲಿ ಕತ್ತಿ ಹತ್ಯಾರುಗಳನ್ನು ತಿಕ್ಕಿ ಕಿಡಿ ಹಾರಿಸಿದರು ಆಳುಗಳು. ಆ ಮೇಲೆ ಎಲೆಯಡಿಕೆ ಬಾಯಿಗೆ ತುರುಕಿಸಿ, ಹೊಗೆ ಸೊಪ್ಪಿನ ಕರಿದಂಟನ್ನು ಚಿವುಟಿ ಆದಕ್ಕೆ ಸುಣ್ಣ ಸೇರಿಸಿ ಅಂಗೈಯಲ್ಲಿ ಹಾಕಿ ತಿಕ್ಕಿ ನಾಲಿಗೆಯ ಮಧ್ಯದಲ್ಲಿಟ್ಟು, “ಅಯ್ಯ, ಹುಂ, ಹೋಗೋಣ ನಡೆಯಿರಿ” ಎಂದು ಎದ್ದರು. ಗೋವಿಂದರಾಯರು ಅವರನ್ನು ಮನೆಯ ಹಿಂಬದಿ ಕರೆದೊಯ್ದು ತೆಂಕು ದಿಕ್ಕಿಗಿರುವ ಕುರಿಚಲು ಕಾಡಿನ ಕಡೆ ಕೈ ನೀಡಿ, ಬೋರ, ಈ ಗೋಡೆಯಿಂದ ನೂರು ಹೆಜ್ಜೆಯವರೆಗೆ ಗಿಡ ಮರಗಳನ್ನು ಸಫಾಯಿ ಮಾಡಬೇಕು. ಅಷ್ಟುದೂರ ಸಣ್ಣ ಸಣ್ಣ ಗಿಡ ಮರಗಳೇ ಇವೆ. ಆ ಮೇಲೆ ದಟ್ಟಡವಿ. ಆದರೆ, ಇದು ಕುರಿಚಲು ಕಾಡೆಂದು ತಾತ್ಸಾರ ಮಾಡಿದರೆ ನಾಲ್ಕು ಮಳೆಗಾಲ ದಾಟುವುದರೊಳಗೆ ಭೈರವ ರೂಪ ತಾಳೀತು. ಮನೆಯ ಹಂತ ಅಂತರದಲ್ಲಿ ಕಾಡಿನ ಒಂದು ರೂಪ ಇರಕೂಡದು. ಇಲಿಗಳ ಆಶೆಗಾಗಿ ಮೆಲ್ಲಗೆ ಹಾವು ಹರಿದು ಬಂದು ಗೋಡೆಯೇರಿ ಮಾಡಿನಲ್ಲಿ ಮಡಚಿ ಕುಳಿತರೆ ಯಾರಿಗೂ ಗೊತ್ತಾಗಲಿಕ್ಕಿಲ್ಲ. ಜಾತಿ ಮರ ಮುಟ್ಟಬೇಡಿ. ಉಳಿದದ್ದೆಲ್ಲ ಕಾಸರಕನ ಮರ, ಕರ್ಮಾರ್ ಒಂದೂ ಉಳಿಸುವುದು ಬೇಡ. ಇದು ಮುಗಿದ ಮೇಲೆ ಹಟ್ಟಿಯ ಹಿಂಬದಿ ಬಡಗು ದಿಕ್ಕಿನ ಕಾಡನ್ನು ಕಡಿಯೋಣ. ಅದನ್ನೂ ಅಷ್ಟು ದೂರ ಸವರಿ ಬಿಡಬೇಕು. ಉದ್ದ ಇಷ್ಟಾದರೆ ಮತ್ತೆ ಅಡ್ಡ ಪಶ್ಚಿಮಕ್ಕೆ ತಿರುಗಿ ಹೊಳೆಯ ಬದಿಯ ವರೆಗೆ ಕಡಿಯಬೇಕು. ಅಂದರೆ ಸಾಧಾರಣ ಮನೆಯ ಸಮೀಪ ನಾಲ್ಕೈದು ಎಕರೆ ಬೇಸಾಯಕ್ಕೆ ಸಿಕ್ಕಿದಂತಾಗುತ್ತದೆ”

"ಅಯ್ಯ, ಇಬ್ಬರಿಂದ ಇದು ಆದೀತಾ?" ಎಂದು ಬೋರ ಕೇಳಿದ.

"ಆಗದೇನು? ಒಂದೇ ದಿನದ ಕೆಲಸವಲ್ಲ. ಒಂದೊಂದೇ ದಿನ ನೀವು ಸತತ ಹದಿನೈದು ದಿನ ಬಂದರೆ ಎಲ್ಲ ಬಟ್ಟ ಬಯಲಾಗುತ್ತದೆ. ಅಷ್ಟರೊಳಗೆ ಅಹ್ಮದ್ ಕುಟ್ಟಿ ಬಾರದೇ ಇದ್ದೀತಾ? ಹೊಳೆಯಲ್ಲಿ ಸ್ವಲ್ಪ ನೀರು ತಗ್ಗಿ ದಾಟಲು ಸಾಧ್ಯವಾದರೆ ಅದು ಕೂಡಲೇ ಓಡಿ ಬಂದೀತು. ನೀವು ಮರ ಕಡಿವ ಪಟ ಪಟ ಸಪ್ಪಳ ಹೊಳೆಯಾಚೆ ಕೇಳಿಸಿದರೆ ಈಸಿಯಾದರೂ ಬಂದೀತು. ಬ್ಯಾರಿ ನಾಲ್ಕಾಣೆಯೆಂದರೆ ಪ್ರಾಣ ಬಿಡುತ್ತದೆ. ಹುಂ, ಸುರು ಮಾಡಿ. ಮಾತಿನಲ್ಲಿ ವೇಳೆ ಕಳೆಯಬೇಡಿ." ಎಂದು ಸಂಜ್ಞೆ ಮಾಡಿದರು ಕೈಯಿಂದ.

ಬೋರ ಎಡಗೈಯಲ್ಲಿ ಗಿಡಗಳ ಜುಟ್ಟನ್ನು ಹಿಡಿದು ಬಲಗೈಯಿಂದ ಅವುಗಳ ಬುಡವನ್ನೇ ಕತ್ತಿಯಿಂದ ಕಡಿದ. ಕತ್ತಿಗೆ ಸಿಲುಕದ ಗಿಡಗಳ ಬುಡಕ್ಕೆ ತುಕ್ರ ಮಡು ಬೀಸಿದ. ಕಡಿದ ಗಿಡಗಳ ಟೊಂಗೆಗಳನ್ನು ಕೈಯಲ್ಲಿ ಹಿಡಿದು ಅವರ ಸೊಪ್ಪನ್ನು ಒಂದೆಡೆ ಸವರಿ, ದಂಟು ಕಟ್ಟಿಗೆಗಳನ್ನು ಮತ್ತೊಂದೆಡೆ ಎಸೆದರು. ಒಂದೆಡೆ ಸೊಪ್ಪಿನ ರಾಶಿಯಾದರೆ ಇನ್ನೊಂದು ಕಡೆ ಕಟ್ಟಿಗೆಯ ರಾಶಿಯಾಯ್ತು. ಮುಂದೆ ಮುಂದೆ ಕಡಿಯುತ್ತ ಹೋದಂತೆ ಇಂಥ ಅನೇಕ ಸಣ್ಣ ಸಣ್ಣ ಕಟ್ಟಿಗೆ ಮತ್ತು ಸೊಪ್ಪಿನ ಗುಂಪುಗಳಾದುವು. ಮನೆಯ ತೆಂಕು ಬದಿಯಲ್ಲಿದ್ದ ಅಗಳು ಎದ್ದು ಕಾಣತೊಡಗಿತು. ಬೋರ ತುಕ್ರರು ಮುಂಜಾನೆ ಕೆಲಸಕ್ಕೆ ಬಂದಾಗ ಒಂದೊಂದು ಕಟ್ಟು ದಾಸಾಳ, ಆಡುಸೋಗೆ, ಗೋರಟೆಗಳ ಕಟ್ಟುಗಳನ್ನು ಅಂಗಳದಲ್ಲಿ ಒಗೆದಿದ್ದರು. ಆಳುಗಳು ಕಾಡು ಕಡಿದಾಗ, ಗೋವಿಂದರಾಯರು ಮೋಹನನೊಂದಿಗೆ ತೆರಳಿ ಆ ಅಗಳಿನ ಮೇಲೆ ಒಂದೊಂದೇ ದಂಟನ್ನು ಚುಚ್ಚತೊಡಗಿದರು. ಮೋಹನ ಒಂದೊಂದೇ ದಂಟನ್ನು ಅವರ ಕೈಗೆ ಕೊಡುತ್ತಿದ್ದ. "ಅಯ್ಯಾ, ಬಡಗಿನ ಅಗಳಿಗೆ ಲಂತಾನ ಹಚ್ಚಿದಿರಿ. ಇಲ್ಲಿ ಈ ದಾಸಾಳ ಆಡುಸೋಗೆ ಬೇಕೆಂದಿರಿ." ಎಂದು ಆಳುಗಳು ಕೇಳಲೂ ಮರೆಯಲಿಲ್ಲ. "ಮನೆಯ ಸಮೀಪ ಬಲ್ಲೆ ಆಗಬಾರದು. ಹೂ ಸಮೀಪ ಹಚ್ಚಿದರೆ ಮಕ್ಕಳಿಗಾಗುತ್ತದೆ" ಎಂದು ಅವರು ಉತ್ತರ ಕೊಟ್ಟರು.

ಗೋವಿಂದರಾಯರು ಊಹಿಸಿದಂತೆ ಎರಡು ಮೂರು ದಿವಸಗಳ ಮೇಲೆ ಅಹ್ಮದ್ ಬ್ಯಾರಿ ಸವಾರಿ ಬಂತು. ತಲೆಯ ಮೇಲೆ ಭತ್ತದ ಬಣ್ಣದ ಉರುಟು ತಪ್ಪಲೆಯಂತಹ ಟೊಪ್ಪಿ. ಕುತ್ತಿಗೆಗೊಂದು ತಾಯಿತ. ಕೆಂಪು ಚಚ್ಚೌಕ

ಮುದ್ರೆಗಳುಳ್ಳ ದುಪ್ಪಟಿಯಂತಿದ್ದ ಅಡ್ಡ ಪಂಚೆ ಸುತ್ತಿದ್ದ. ಅದು ಜಾರದಂತೆ ಚರ್ಮದ ಬೆಲ್ಟ್. ಈ ಸೊಂಟ ಪಟ್ಟಿಯ ಮೇಲೆ ಉಡುದಾರವೂ ಸುತ್ತಿ ಕೊಂಡಿತ್ತು. ಬೆಲ್ಟಿನಿಂದ ಒಂದು ಚೂರಿಯೂ ಜೋತಾಡುತ್ತಿತು. ಪಂಚೆ ಅಲ್ಲಲ್ಲಿ ಒದ್ದೆಯಾದುದನ್ನು ಕಂಡ ಗೋವಿಂದರಾಯರು ಹೊಳೆ ಹೇಗೆ ದಾಟಿ ಬಂದಿರಿ? ನೀರು ಬಹಳವಿದೆ ಇನ್ನೂ" ಎಂದರು.

"ಅಕ್ಕ್, ಪೊಳೆಲಿ ಭಾರೀ ತನ್ನಿ ಉಂಡ್. ನಾನ್ ಅವುಡೆ ಕೊಲ್ಲಿಗ್ ಪೋಯಿಟ್ ಕಡತ್ತ್ ಬಂದೆ. ತನ್ನಿ ಇವುಡೆ ಬಂತು" ಎಂದು ಅಹ್ಮದ್ ಬ್ಯಾರಿ ತನ್ನ ಎದೆಯನ್ನು ತೋರಿಸಿದ.

"ನೀವು ಹೀಗೆ ದಾಟಿದರೆ ಒಂದು ದಿನ ನೆರೆಯಲ್ಲಿ ಹೋದರೆ ಏನು ಗತಿ'

"ಅಯ್ಯ, ಇದ್ ಒಂದ್ ಕರ್ಮ ಉಂಟಲ್ಲೇ" ಎಂದು ಬ್ಯಾರಿ ತನ್ನ ಹೊಟ್ಟೆ ತಟ್ಟಿಕೊಂಡ.

"ಪ್ರಾಣ ಮೊದಲು. ಪ್ರಾಣ ಇದ್ದರೆ ಹೊಟ್ಟೆ. ಆಗಲಿ, ಕತ್ತಿ ತಗೊಳ್ಳಿ" ಎಂದುಸುರಿ ಗೋವಿಂದರಾಯರು ತಮ್ಮ ಕೆಲಸದಲ್ಲಿ ಮಗ್ನರಾದರು.

ಸೀತಮ್ಮನವರು ಬಾಗೀರಥಿಯನ್ನು ಎಳೆದುಕೊಂಡು ಬಂದು ಕಾಡು ಕಡಿದಲ್ಲಿ ಮೇಯಲು ಬಿಟ್ಟರು. ತಾವೂ ಕತ್ತಿಯಿಂದ ಹುಲ್ಲನ್ನು ಹೆರೆದು ಬೆತ್ತದ ಬುಟ್ಟಿಗೆ ತುಂಬಿಸಿದರು.ಅದನ್ನು ಕಂಡ ಗೋವಿಂದರಾಯರು, ಅಂತೂ ಇಲ್ಲಿಯೂ ನೀನು ಹುಲ್ಲು ಕೊಯ್ಯುವದನ್ನು ಬಿಡಲಿಲ್ಲ. ಇದೇನು ಕರಾವಳಿ ರಾಜ್ಯವಾ? ಒಂದು ಗಳಿಗೆ ಬಿಟ್ಟರೆ ದನದ ಹೊಟ್ಟೆ ತುಂಬೀತು. ನಿನಗೆ ಮರುಳು" ಎಂದು ಹೆಂಡತಿಯನ್ನು ಹಂಗಿಸಿದರು.

"ಮುಳಿ ಹುಲ್ಲು ಅದರ ಮೂಗಿಗೆ ಇರಿಯುತ್ತದೆ. ಕೊಯ್ದು ಹಾಕಿದರೆ ರಾತ್ರಿ ತಿನ್ನಲು ಬೈಪಣೆಯಲ್ಲಿ ಎಸದ. ಬೈ ಹುಲ್ಲು ಉಳಿಯುತ್ತದೆ." ಎಂದು ಉಪದೇಶವಾಯಿತು ಸೀತಮ್ಮನವರದ್ದು.

ಸೀತಮ್ಮನವರೆಂದಂತೆ ಬಾಗೀರಥಿ ಬೆನ್ನು ಬಗ್ಗಿಸಿ ಸರಿ ಮೇಯಲಿಲ್ಲ. ಅಲ್ಲಲ್ಲಿ ಎಳೆ ಹುಲ್ಲನ್ನು ಹೆಕ್ಕಿ ಹೆಕ್ಕಿ ತಿನ್ನುತ್ತಿತ್ತು. ಹಟ್ಟಿಯಲ್ಲಿ ಅದರ ಒಂಟಿ ಕರು ಬೇಸರದಿಂದ "ಬೇ ಬೇ" ಎಂದು ಕೂಗಿ ಕರೆಯುತ್ತಿದ್ದುದರಿಂದ ದನ ಅತ್ತ ಮೋರೆ ಎತ್ತಿ ಕಿವಿ ನಿಗುರಿಸಿ ಒಮ್ಮೊಮ್ಮೆ ಆಲಿಸಿತು. ಮೋಹನ ಮೆಲ್ಲಗೆ ಹಟ್ಟಿಗೆ ತೆರಳಿ ಕರುವಿನ ಹಗ್ಗ ಬಿಚ್ಚಿ ಬಿಟ್ಟ. ನಾಲ್ಕೂ ಕಾಲುಗಳನ್ನು

ನೆಗೆಯುತ್ತ ಹರಿಣದಂತೆ ಜಿಗಿಯುತ್ತ ಬಂದಿತು. ಗಾಳಿ ಅದರ ಕಿವಿಯೊಳಗೆ ಪ್ರವೇಶಿಸಿದುದರಿಂದ ನೆಲದ ಮೇಲೆ ಅದರ ಕಾಲುಗಳೇ ನಿಲ್ಲವು. ಬಾಗೀರಥಿ ಹಾಲು ಕೊಡಲು ಹಿಂಗಾಲುಗಳನ್ನು ಅಗಲಿಸಿತು. "ಅಯ್ಯೋ, ನಿನ್ನ ಉಪದ್ರವೇ ಸಾಕಾಯ್ತು. ನಿನ್ನ ಬೆನ್ನು ಒಡಿಯುತ್ತೇನೆ ನೋಡು" ಎಂದು ಸೀತಮ್ಮ ಮಗನನ್ನು ಬೆದರಿಸಿ, ಹಾಲು ಕರು ಕುಡಿದರೆ ರಾತ್ರಿ ನಿನಗೆ ಮಜ್ಜಿಗೆ ಅನ್ನಕ್ಕೆ ಗಂಗೋದಕವೇ ಗತಿನೋಡು" ಎಂದು ಪಟಗುಟ್ಟಿದರು. ಕರುವನ್ನು ಹಿಡಿಯಲು ಹೋದಾಗ ಅದು ನಾಲ್ಕೂ ಕಡೆ ಓಡಾಡತೊಡಗಿತು ಸೀತೆಯ ಪರ್ಣಕುಟಿ ಮುಂದೆ ಸುಳಿವ ಮಾಯಾ ಮೃಗದಂತೆ. ಮಾರೀಚ, ನೀನು ಹಾಲು ಕುಡಿ. ಸಾಯಂಕಾಲ ನಿನಗೆ ಉಪವಾಸ ಹಾಕುತ್ತೇನೆ" ಎಂದು ಒದರುತ್ತ ಹಿಡಿಯಲೆತ್ನಿಸಿದರು ಸೀತಮ್ಮ. ಕಾಲು ಸೋತ ಮೇಲೆಯೇ ಅದು ಅವರ ಕೈಗೆ ಸಿಕ್ಕಿತು. ಸೆರಗಿನ ತುದಿಯನ್ನೇ ಅದರ ಕೊರಳಿಗೆ ಸುತ್ತಿ, "ಇನ್ನು ಓಡು ನೋಡೋಣ. ಮೊಲೆ ಹಾಲು ತಿಂದು ಈಗಲೇ ನಿನಗೆ ಸೊಕ್ಕು ಬಂತಲ್ಲ" ಎಂದು ಹೇಳುತ್ತ ಅದನ್ನು ಹಟ್ಟಿಗೆ ಎಳೆದುಕೊಂಡು ಹೋದರು. ಬಾಗೀರಥಿಯೂ ಕರುವಿನ ಹಿಂದೆ ಬಂದಿತು. "ನಿನಗೆ ಹುಲ್ಲು ಮೇಯಲು ಮೈ ಬಗ್ಗುವುದಿಲ್ಲ. ನಾನಿದ್ದೇನಲ್ಲ ಹುಲ್ಲು ಕೊಯ್ದು ಹಾಕಲಿಕ್ಕೆ. ಅಬ್ಬಾ" ಎಂದು ಹೇಳಿ ಬಾಗೀರಥಿಯನ್ನು ಗೂಟಕ್ಕೆ ಬಿಗಿದು ಹಿಂಬಾಗಿಲಿನ ಬಿದಿರಿನ ತಡಿಯನ್ನು ಮುಚ್ಚಿ ಅಂಗಳಕ್ಕೆ ಬಂದಾಗ, ಮುಖ ಮಂಟಪವೇರುತ್ತಿದ್ದ ಶಿವರಾಮು, "ಅಮ್ಮ?" ಎಂದು ಕೇಳಿದ.

ಅರೆ, ನೀನೆಲ್ಲಿಂದ ಉದಯವಾದೆ?" ಎಂದು ಆಶ್ಚರ್ಯದಿಂದ ಕೇಳಿದರು ತಾಯಿ. ಅವನು ಉತ್ತರ ಕೊಡುವ ಮೊದಲೇ, "ಸುಗುಣ ಹಡೆದಳೇನು? ಏನು ಮಗು? ನೀನು ಒಂದು ಪತ್ರವನ್ನೂ ಹಾಕಲಿಲ್ಲ" ಎಂದೂ ತಕರಾರು ಮುಂದಿಟ್ಟರು

"ಹೇಳಲಿಕ್ಕೆಂದೇ ಬಂದೆ. ಪತ್ರ ಹಾಕಿದರೆ ಇಲ್ಲಿ ಮುಟ್ಟಿತಾ?"

"ಅದು ನಿಜ, ಅದಿರಲಿ. ಏನು ಸುದ್ದಿ?"

"ಗಂಡು ಮಗು ಹಡೆದಳು. ತಿಂಗಳಾಯ್ತು. ಬಾಣಂತಿ ಮಗು ಚೆನ್ನಾಗಿದ್ದಾರೆ."

"ಆಗಲಿ, ದೇವರು ದಯೆದೋರಿದ" ಎಂದು ಹೇಳುತ್ತ ಸೀತಮ್ಮನವರು ಪಡಸಾಲೆಗೆ ತೆರಳಿ ಕಿಟಕಿಗೆ ಮೊಗ ಆನಿಸಿ, "ಮೋಹನಾ, ಶಿವಣ್ಣ ಬಂದಿದ್ದಾನೆ. ನಿನ್ನ ಅಪ್ಪಯ್ಯಗೆ ಹೇಳು'' ಎಂದು ಕೂಗಿ ಹೇಳಿದರು.

ಮೋಹನ ಕೆಸರು ಕಾಲು ಕೈಗಳಲ್ಲೇ ಓಡಿ ಬಂದ. ಗೋಪಿಂದರಾಯರು ಸ್ನಾನದ ಕೊಟ್ಟಿಗೆಗೆ ತೆರಳಿ ಕೈ ಕಾಲುಗಳಿಗೆ ನೀರೆರೆದು ಬಂದರು. ಮಗನ ಮೋರೆ ಕಂಡೊಡನೆಯೇ, "ದಾರಿ ಸಿಕ್ಕಿತಾ ನಿನಗೆ? ಯಾವ ದಾರಿಯಿಂದ ಬಂದಿ? ಹೊಳೆಗಳ ದಾಟಿದೆಯಾ?' ಎಂದು ಒಮ್ಮೆಗೇ ಮೂರು ನಾಲ್ಕು ಪ್ರಶ್ನೆಗಳನ್ನು ಕೇಳಿದರು.

"ಮುಂಡಾಜೆಯಿಂದಲೇ ನಡೆದು ಬಂದೆ. ದಾರಿಯಲ್ಲಿ ಒಬ್ಬಿಬ್ಬರು ಭೆಟ್ಟಿಯಾದರು. ಕೇಳುತ್ತ ಬಂದೆ. ಮೂಲ್ಕಿಯಿಂದ ನಾನು ಮುಂಜಾನೆ ಬಸ್ಸು ಹತ್ತಿದುದೇ ಒಳ್ಳೆಯದಾಯ್ತು. ಸಾಯಂಕಾಲದ ಮೋಟಾರ್ ಕಾದಿದ್ದರೆ ಇಲ್ಲಿ ಅಡವಿ ಪಾಲಾಗುತಿದ್ದೆನೋ ಏನೋ?" ಎಂದು ಹೇಳಿದ ಶಿವರಾಯ ಗಂಡು ಮಗುವಿನ ಜನನದ ಸುದ್ದಿ ತಿಳಿಸಿದ.

"ಬಂಗಾಡಿಗೆ ಹೊರಡುತ್ತೇವೆಂದು ನೀವು ಪತ್ರ ಬರೆದ ಮೇಲೆ ನಾನು ಉಡುಪಿಗೆ ಹೋಗಿದ್ದೆ. ನೀವು ಅಷ್ಟರಲ್ಲೇ ಹೊರಟು ಬಿಟ್ಟಿದ್ದಿರಿ. ಸುಮ್ಮಗೆ ಎರಡು ಮೂರು ರೂಪಾಯಿ ಹಾಳಾಯ್ತು. ತಿಂದದಲ್ಲ. ಉಂಡದ್ದಲ್ಲ. ಆ ಬಸ್ಸಿನ ಬ್ರಹ್ಮಾಂಡ ಹೊಟ್ಟೆಗೆ ಸುರಿದ ಹಾಗಾಯ್ತು. ನೀವು ಬಹಳ ಅವಸರ ಅವಸರದಿಂದ ಬಂದು ಬಿಟ್ಟಿರಿ''.

"ಅವಸರವೇನು? ಹೊರಡುವುದೆಂದು ನಿರ್ಧರಿಸಿದ ಮೇಲೆ ಕಾಲವಿಳಂಬವೇಕೆಂದು ಬೇಗನೇ ಗಂಟು ಕಟ್ಟಿದೆವು. ಕಾಲ ಹರಣ ಮಾಡುತ್ತಿದ್ದರೆ ಮಳೆ ಬರುತಿತ್ತು. ಮಳೆಗಾಲವಲ್ಲಿ ಇಲ್ಲಿಗೆ ಬರಲು ಸಾಧ್ಯವಾಗುತಿದ್ದಿಲ್ಲ".

"ಅಯ್ಯೋ, ಇದು ಘೋರಾರಣ್ಯ. ಮುಂಡಾಜೆಯಿಂದ ಇಷ್ಟು ದೂರ ಬರುವಾಗಲೇ ನನ್ನ ಕಾಲುಗಳು ಗಡಗಡ ನಡುಗಿದುವು. ಈ ಗೊಂಡಾರಣ್ಯಕ್ಕೆ ಹೇಗೆ ಬಂದಿರೋ? ಹೇಗೆ ಈ ಮಳೆಗಾಲ ಕಳೆದಿರೋ ದೇವರೇ ಬಲ್ಲ." ಎಂದು ಉದ್ಗರಿಸಿದ.

"ಹೋಯ್ತು. ಇನ್ನೇನೂ ಹೆದರಿಕೆಯಿಲ್ಲ. ಬಿಸಿಲು ಬಿದ್ದಿದೆ" ಎಂದಷ್ಟೇ ನುಡಿದರು ತಂದೆ.

"ನೀವು ಗಟ್ಟಿ ಅಪ್ಪಯ್ಯ. ನಾನಾಗುತ್ತಿದ್ದರೆ ಇಲ್ಲಿ, ಈ ಕಾಡಿನಲ್ಲಿ, ಈ ಮಹಾಜ್ವರದ ಕೊಂಪೆಯಲ್ಲಿ ಒಂದು ದಿವಸ ಉಳಿವೇನಾ? ಛೀ, ಜೀವ ಉಳಿದರೆ ಬೇಡಿ ಬದುಕಬಹುದು"

ಉತ್ತರ ಕೊಡಲು ಗೋವಿಂದರಾಯರು ಬಾಯಿ ತೆರೆವಾಗ ಬೋರ ತುಕ್ರ ಅಹ್ಮದರ ಬಾಯಿ ಕೇಳಿಸಿತು. "ಅಕೋ ಅಲ್ಲಿದೆ. ದೊಡ್ಡ ಕಲ್ಲು ತಾ. ಆ ಬಡಿಗೆ ಸಾಲದು. ಹೊಡಿ. ಹೊಡಿ. ತಲೆಗೇ ಹೊಡಿ" ಎಂದು ಅವರು ಕೂಗುತ್ತ ಗುಲ್ಲೆಬ್ಬಿಸಿದರು. ಗದ್ದಲ ಕೇಳಿ ಮುಖ ಮಂಟಪದಿಂದ ಎಲ್ಲರೂ ಅತ್ತ ಧಾವಿಸಿದರು. ಆಳುಗಳು ಒಬ್ಬರೂ ಕಾಣಿಸಲಿಲ್ಲ ಅವರಿಗೆ. "ಏನೋ? ಏನದು? ಏ ತುಕ್ರ, ಬೋರ. ಏನದು?" ಎಂದು ಕರೆಯುತ್ತ ಕೇಳುತ್ತ ಬಂದರು. "ಅಯ್ಯಾ, ದೊಡ್ಡ ಹಾವು" ಎಂದು ಅವರು ಅಲ್ಲಿಂದಲೇ ಉತ್ತರವಿತ್ತರು. "ಎಲ್ಲಿ? ಎಲ್ಲಿ?" ಎಂದು ಕೇಳುತ್ತ ಕುರಿಚಲು ಗಿಡಗಳ ಮಧ್ಯೆ ನುಸುಳಿದರು. "ಏ ಮೋಹನಾ, ನೀನು ಬರಬೇಡ, ಹಾವಿದೆಯಂತೆ" ಎಂದು ಅವನನ್ನು ಬೆದರಿಸಿ ಕಳಿಸಿ ತಾವು ಹಾವಿದ್ದಲ್ಲಿ ಬಂದರು. ಹಾವು ಇದಿರಿಗೇ ಸುರುಳಿ ಸುರುಳಿಯಾಗಿ ಬಿದ್ದಿತ್ತು. ಅದರ ತಲೆ ಜಜ್ಜಿ ಹೋಗಿದೆ. ಮೈ ಮೇಲೂ ಕಲ್ಲಿನ ಗಾಯಗಳಾಗಿವೆ. ನಾಗರ ಹಾವಲ್ಲ. ಚಿಟ್ಟೆ ಹುಲಿಯಂತೆ ಅದರ ಮೈ ಮೇಲೆ ಪಟ್ಟೆ ಮುದ್ರೆ. ಗೋವಿಂದರಾಯರ ಬಲತೋಳಿನಷ್ಟು ಗಾತ್ರ.

"ಅಯ್ಯಾ, ಇದು ಪಿಲಿ ಕಂದೊಡಿ" ಎಂದ ಬೋರ.

"ಅಬ್ಬಾ, ಇದನ್ನು ನೋಡುವಾಗಲೇ ಮೈ ಜುಂ ಎನ್ನುತ್ತದೆ. ಗ್ರಹಚಾರಕ್ಕೆ ಎಲ್ಲಾದರೂ ಯಾರಿಗಾದರೂ ಕಚ್ಚಿದರೆ ಅವರು ಮೂರು ಮುಕ್ಕಾಲು ಗಳಿಗೆ ಬದುಕಲಿಕ್ಕುಂಟಾ?" ಎಂದು ಶಿವರಾಯ ಬಾಯಿಗೆ ಕೈಯಿಟ್ಟುಕೊಂಡ.

"ಅಯ್ಯಾ, ಇದು ಕಚ್ಚಬೇಕೆಂದಿಲ್ಲ. ಇದರ ವಿಷದ ನೊರೆ ಎಲ್ಲಾದರೂ ಕಾಲಿನ ಗಾಯಕ್ಕೆ ತಾಗಿದರೆ ಕಾಲು ಬಾತು ಕೊಳೆತು ಬಿಡುವುದು. ನಾಗರ ಹಾವಿಗೆ ಕೋರೆ ಹಲ್ಲಿನಲ್ಲಿ ಮಾತ್ರ ವಿಷ. ಇದರ ಸರ್ವಾಂಗ ವಿಷ. ಕೆಟ್ಟ ಹಾವು" ಎಂದು ಕೂಡಿಸಿದ ಬೋರ.

"ರಾಮ, ರಾಮ" ಎಂದು ಶಿವರಾಯನ ಬಾಯಿಂದ ಉದ್ಗಾರಗಳು ಹೊರಟುವು.

"ಏನು ತಿಂದು ಇಷ್ಟು ಬೆಳೆದಿದೆ! ಏನು ಅದರ ನೈ ಬಣ್ಣ! ಅಬ್ಬಾ ದೈವ ಸೃಷ್ಟಿಯೇ!' ಎಂದು ಗೋವಿಂದರಾಯರು ಅಂಗೈ ತಿರುಗಿಸಿದರು.

"ಕಾಡಿನಲ್ಲಿ ಅದಕ್ಕೆ ಏನು ಕಡಿಮೆ ಯಾಗಿದೆ ಅಯ್ಯ? ಇಲಿ, ಮೊಲ, ಹಕ್ಕಿಗಳನ್ನು ತಿನ್ನುತ್ತದೆ. ದೊಡ್ಡದು ಸಣ್ಣ ಹಾವನ್ನು ನುಂಗುತ್ತದೆ. ಏನೂ ಸಿಗದಿದ್ದರೆ ಮಣ್ಣು ನೆಕ್ಕುತ್ತದೆ. ಇದನ್ನು ಕಂಡೇ ನೀವು ಇಷ್ಟು ಬೆರಗಾದಿರಿ. ಮಲೆಯಲ್ಲಿನನ್ನ ತೊಡೆಯಷ್ಟು ದಪ್ಪದ ಕಂದೊಡಿಗಳುಂಟು. ಒಮ್ಮೆ ನಾನೂ ಕೆಲವರೂ ಒಳ್ಳೆ ಮೆಣಸು, ಸೀಗೆ, ಬೆತ್ತ ತರಲು ಕುವರೆ ಮುಖದ ಬುಡಕ್ಕೇ ಹೋಗಿದ್ದೆವು. ಇಂಥಾ ಕಂದೊಡಿ ನೋಡಿ ಓಡಿ ಬಂದೆವು" ಎಂದು ತುಕ್ರ ನುಡಿದು ತನ್ನ ತೊಡೆಯನ್ನು ತೋರಿಸಿದ.

"ಅಮಮಾ" ಎಂದ ಶಿವರಾಯ, "ಅಕೋ, ಅಕೋ, ಅದರ ಜೀವ ಹೋಗಿಲ್ಲ. ಬಾಲ ಹಂದಾಡುತ್ತದೆ. ಕೊಲ್ಲು. ಕೊಲ್ಲು. ಮತ್ತೆ ಹರಿದು ಯಾರನ್ನಾದರೂ ಕಡಿದೀತು ವೈರದಿಂದ" ಎಂದು ಬೋರನನ್ನುದ್ದೇಶಿಸಿ ಹೇಳಿದ.

"ಇನ್ನೇನು ಜೀವವಾಗುತ್ತದೆ ಸ್ವಾಮಿ. ಅವನ್ನು ಹೀಗೆಯೇ ಬಿಡುವುದಿಲ್ಲ. ಬೆಂಕಿ ಹಾಕಿ ಸುಡಬೇಕು." ಎಂದ.

ತುಕ್ರ ಮನೆಗೆ ತೆರಳಿ ಹಟ್ಟಿಯಲ್ಲಿ ಒಟ್ಟಿದ್ದ ಒಂದೆರಡು ಸೂಡಿ ಬೈಹುಲ್ಲು ತಂದ. ಅಹ್ಮದ್ ಬ್ಯಾರಿ ಟೊಪ್ಪಿಗೆ ತೆಗೆದು ಅದರೊಳಗಿದ್ದ ಬೆಂಕಿ ಪೆಟ್ಟಿಗೆಯಿಂದ ಕಡ್ಡಿ ಗೀರಿದ. ಸತ್ತಿದ್ದರೂ ಉರಿ ಪ್ರಜ್ವಲಿಸಿದಾಗ ಹಾವು ದಡ ದಡ ಹೊರಳಾಡಿಸಿತು ಬಾಲವನ್ನು. ಅದು ನಿಂತ ಮೇಲೆ ಉದ್ದ ಕೋಲಿನಿಂದ ಅದನ್ನು ಎತ್ತಿ ಕೊಂಡು ಹೊಳೆಗೆಸೆಯಲು ತುಕ್ರ ಹೊರಟಾಗ, "ಹೊಳೆಗೆಸೆಯ ಬೇಡ. ನೀರು ಹೊಲಸಾಗುತ್ತದೆ. ಯಾರಾದರೂ ಕುಡಿದಾರು. ಹೂಗಿದು ಬಿಡು" ಎಂದರು ಗೋವಿಂದರಾಯರು. ಆಳುಗಳು ನಕ್ಕು ಗುಳಿ ತೋಡಿ ಹೂಗಿದರು.

ಮನೆಗೆ ಹಿಂತಿರುಗಿದಾಗ ಶಿವರಾಯ ಮಾತಾ ಪಿತೃಗಳ ವನವಾಸದ ಬಗ್ಗೆ ಬಹಳ ದುಃಖ ತೋಡಿಕೊಂಡ. "ಇಂಥ ಭೀಕರ ಅರಣ್ಯದಲ್ಲಿ ನೀವು ಹೇಗಿರುತ್ತೀರೋ? ನನಗೆ ನಿಜವಾಗಿಯೂ ಭಯವಾಗುತ್ತದೆ. ನೀವು ಬಹಳ ಅವಸರದಿಂದ ಬಂದಿರಿಯೆಂದು ಅದಕ್ಕೇ ಹೇಳಿದೆ" ಎಂದು ಮತ್ತೆ ಅದೆ ಮಾತನ್ನು ತೆಗೆದ.

"ಬಾರದೆ ಮತ್ತೇನು ಮಾಡುವ ಹಾಗಿತ್ತು? ನನಗೆ ನಿವೃತ್ತಿಯಾಯಿತಲ್ಲ" ಎಂದು ತಿಳಿಸಿದರು ತಂದೆ.

"ನನಗದು ಗೊತ್ತಿರಲಿಲ್ಲ. ಇಲ್ಲದಿದ್ದರೆ ನಾನು ಬಿಡುತಿದ್ದಿಲ್ಲ. ನನ್ನ ಅಂಗಡಿಯಲ್ಲಿ ನೀವು ಕುಳಿತುಕೊಳ್ಳುತಿದ್ದರೆ ನಾನು ಬೇಡವೆನ್ನುತಿದ್ದೆನಾ? ಅಮ್ಮ ಬಂದರೆ ಆಗುತಿತ್ತೆಂದು ಆಕೆಯೂ ಪದೇ ಪದೇ ಹೇಳುತಿದ್ದಳು. ನೀವು ಬರುತಿದ್ದರೆ ಪ್ರತ್ಯೇಕ ಮನೆ ನೋಡುವ ಅಗತ್ಯವೂ ಇದ್ದಿಲ್ಲ. ಹೇಗೂ ನಮ್ಮ ಮಾವ ಸಾಯುವ ಕಾಲಕ್ಕೆ ಒಳ್ಳೇ ಮನೆ ಕಟ್ಟಿಸಿ ಸತ್ತರು. ನೀವು ಬಂದರೆ ನಮ್ಮತ್ತೆ ಬೇಡವೆನ್ನುತಿದ್ದಿರಾ? ತಿಂದುಣ್ಣುವ ಬೇರೆ ಮಕ್ಕಳೂ ಇಲ್ಲ ಅವರಿಗೆ. ಎಲ್ಲ ನೀವು ಗಡಿಬಿಡಿ ಮಾಡಿದಿರಿ."

ಗೋವಿಂದರಾಯರಿಗೆ ಈ ಮಾತು ಅಷ್ಟು ರುಚಿಸಲಿಲ್ಲವೋ ಏನೋ · ಬಂದಾಯಿತಲ್ಲ. ಇನ್ನೇಕೆ ಆ ಮಾತು? " ಎಂದವರು ಮುಗಿಸಿದರು.

" ಛೇ, ಈಗ ನೀವು ಬನ್ನಿ ಎಂದು ನಾನು ಹೇಳಲು ಬಂದವನಲ್ಲ ಹೇಳಲು ಬರುವಂತೆಯೂ ಇಲ್ಲ. ಕೇಳಿದರೆ ಅಣ್ಣನ ಕಣ್ಣು ಕೆಂಪಾದೀತು. ಅದನ್ನು ಆಯಿತಲ್ಲ. ನಾನು ಹೀಗೆ ಸಹಜ ಅಂದೆ ಈ ಕಾಡು ನೋಡಿ. ಅಷ್ಟೆ"

ತಂದೆ ಉತ್ತರ ಕೊಡಲಿಲ್ಲ. ಅವರ ಮೋರೆ ಸ್ವಲ್ಪ ಗಂಭೀರವಾಯ್ತು. ಕಾಲಲ್ಲಿ ಕೆಸರಾಗಿದ್ದುದರಿಂದ ಮತ್ತೆ ಕೊಟ್ಟಿಗೆಗೆ ಬಂದು ತಪ್ಪಲೆಯಲ್ಲಿ ಹಂಡೆಯೊಳಗಿಂದ ಬಿಸಿನೀರು ತೆಗೆದು ಕಾಲುಗಳ ಮೇಲೆ ಎರೆದರು. ಎಡಪಾದದ ಮೇಲೆ ಬಲ ಅಂಗಾಲಿನಿಂದ ತಿಕ್ಕಿ ನೀರು ಚೆಲ್ಲಿಕೊಂಡರು ಮತ್ತೆ. ಕಾಲು ತೊಳೆದುಕೊಂಡು ಪುನಃ ಮುಖಮಂಟಪಕ್ಕೆ ಬಂದ ಶಿವರಾಯ ಮೆಲುಧನಿಯಲ್ಲಿ, " ಅಪ್ಪಯ್ಯ, ಅಣ್ಣನಿಗೆ ಆಸ್ತಿ ತೆಗೆದುಕೊಳ್ಳಲು ನೀವು ಹಣ ಕೊಟ್ಟಿರಂತೆ! ನಿಜವಾ?" ಎಂದು ಪ್ರಶ್ನಿಸಿದ.

ಈ ಆಕಸ್ಮಿಕ ಪ್ರಶ್ನೆಯಿಂದ ತಂದೆ ಸ್ವಲ್ಪ ತಬ್ಬಿಬ್ಬಾದರು. " ನಿನಗೆ ಯಾರು ಹೇಳಿದರು? " ಎಂಬ ನುಡಿ ಹೊರಬಿತ್ತು ಅವರ ಬಾಯಿಂದ.

" ಯಾರೋ ಹೇಳಿದರು. ಅಡಿಕೆ ಕದ್ದರೆ ಗೊತ್ತಾಗಲಿಕ್ಕಿಲ್ಲ. ಆನೆಯನ್ನು ಮುಚ್ಚಿಟ್ಟು ಕೊಳ್ಳಲಿಕ್ಕಾಗುತ್ತದೇನು? ಯಾರೋ ಹೇಳಿದರು. ಅದನ್ನು ತೆಗೆದುಕೊಂಡು ಮಾಡುವುದೇನಿದೆ? ಅದು ಸತ್ಯವಾ? "

" ಛೇ, ಇದು ಹಸಿ ಸುಳ್ಳು. ಯಾರೋ ಸುಮ್ಮನೆ ನಿನ್ನ ಕಿವಿಗೂದಿರ ಬೇಕು. "

"ನಾನು ನಂಬುವುದಿಲ್ಲ. ಇಲ್ಲದಿದ್ದರೆ ಇಷ್ಟು ಹಣ ಅವನಿಗೆಲ್ಲಿಂದ ಬಂತು? ಕೊಪ್ಪರಿಗೆ ಅಗೆದನೇನು? ಅಥವಾ ಗೋವೆ ಲಾಟ್ರಿ ಎದ್ದಿತಾ ? "

"ಈ ಪಾಳು ಭೂಮಿ ತೆಗೆದುಕೊಳ್ಳಲು ಕೊಪ್ಪರಿಗೆ ಸಿಗಬೇಕಾ? ಕಾಡು! ಅರಣ್ಯ! ಇದರಲ್ಲಿ ಕೀರ್ಪೆಯೂ ಹುಟ್ಟುವುದಿಲ್ಲ. ಯಾವ ಭೂತ ಬರುತ್ತಿತ್ತು ಇಲ್ಲಿಗೆ? ರಾಜಾ ಏನೋ ಹುಚ್ಚು ಕಟ್ಟಿ ಏಲಂನಲ್ಲಿ ನಿಂತು ಆರು ಕಾಸು ಮೂರು ಕಾಸಿಗೆ ತೆಗೆದುಕೊಂಡ. ಅಷ್ಟು ಹಣವೂ ಇರಲಿಲ್ಲವಾ ಅವನ ಹತ್ರ? ಇಷ್ಟು ವರುಷ ದುಡಿವದ್ದೆಲ್ಲ ನೀರಿನಲ್ಲಿಟ್ಟು ಹೋಗುವಾ ಹಾಗಾ ವರೆ? "

"ಹಾಗಾದರೆ ನಿಮ್ಮ ಘಂಡಿನ ಹಣ ಏನಾಯ್ತು? "

" ಇದೆ ನನ್ನ ಹತ್ತಿರ. ನಿನಗೇಕೆ ಅದರ ಮೇಲೆ ಕಣ್ಣು ಈಗಲೇ? "

"ಛೇ, ನಿಮ್ಮ ದುಡ್ಡು ನನಗೇಕೆ? ಮುಂದಿ ಏನೇನೋ ಅನ್ನುತ್ತಿದ್ದರು. ಅದು ಕಿವಿಗೆ ಬಿದ್ದುದರಿಂದ ಕೇಳಿದೆ. ಅಷ್ಟೆ. ನಾನೂ ನಿಮ್ಮ ಒಬ್ಬ ಮಗ ನಲ್ವಾ? ಅದಕ್ಕಾಗಿ ಕೇಳಿದೆ. ಎಲ್ಲಾದರೂ ನಮಗೆ ಸಂಕಟ ಬಂದಾಗ ಸಾಲವಾದರೂ ಸಿಗಬಹುದೆಂದು ಒಂದು ಆಶೆ. "

" ನಿನಗೇನು ಬಂತು ಅಂಥಾ ಸಂಕಟ! ಮಾವನ ಮನೆಯಿದೆ. ಅಂಗಡಿ ಕೊಟ್ಟಿದ್ದಾರೆ. ಹುಡುಗಿಗೆ ಮೈಮೇಲೆ ಒರ್‍ಳ್ಳಾರ ಆಭರಣ ಹಾಕಿದ್ದಾರೆ. ನೀವು ಇರುವುದು ಎರಡು ಮೂರು ಜನ. ಊಟಕ್ಕೆ ಬೇಕಾಗುವಷ್ಟು ಅಕ್ಕಿ ಬರು ತ್ತದೆ ಗದ್ದೆಯಿಂದ. ಅವರಿಗೆ ಬೇರೆ ಮಕ್ಕಳೂ ಇಲ್ಲ. ಎಲ್ಲ ನಿನಗೇ ಇನ್ನು. ನಿನಗೂ ತೊಂದರೆಯೆಂದರೆ ಆಶ್ಚರ್ಯ"

"ಅಪ್ಪಯ್ಯ, ನಿಮಗೆಲ್ಲ ಹಾಗೆ ತೋರುತ್ತದೆ. ದೂರದ ಬೆಟ್ಟ ನುಣ್ಣಗೆ. ಹತ್ತಿರ ಹೋದಾಗಲೇ ಕಲ್ಲು ಮುಳ್ಳು ಕಣಿ ಕಾಡು ಕಾಣಿಸುತ್ತದೆ. ಯಾರೂ ದಿಕ್ಕಿಲ್ಲವೆಂದು ನಾನು ಕೈ ಕೊಟ್ಟರೆ ಅತ್ತೆಯವರು ಏನೆಂದಾರು? ಅಂಗಡಿ ಮಾತ್ರ ನನ್ನ ತಾಬಾ. ಏನು ವ್ಯಾಪಾರವಾಗುತ್ತದೆ ಈ ಅಂಗಡಿಯಲ್ಲಿ? ಎಲ್ಲ ಮುಕ್ಕಾಲಿನ ಮೆಣಸು, ಜೀರಿಗೆ. ಉಪ್ಪಿನ ಗಿರಾಕಿಗಳೇ. ಬರುವುದು ಒಂದಾದರೆ ಖರ್ಚು ಎರಡು. ಹೀಗಾಗಿ ಸಾಲ."

"ಸಾಲ ವಿಲ್ಲದವರು ಯಾರು? ಜಾರ್ಜ ಅರಸನಿಗೂ ಅಮೇರಿಕದ ಸಾಲವಿದೆಯಂತೆ"

ಶಿವರಾಯ ಎತ್ತಲೋ ದೃಷ್ಟಿ ಹೊರಳಿಸಿ, "ಕೊಡುವುದಿಲ್ಲವಾದರೆ ಬಿಡಿ. ನಾನೇನು ನಿಮ್ಮೊಡನೆ ಜಗಳ ಮಾಡಲು ಬಂದಿದ್ದೇನಾ?"

"ಎಲ್ಲಿಂದ ಕೊಡುವುದು?" ಎಂದು ಸ್ವಲ್ಪ ಗಟ್ಟಿಯಾಗಿ ನುಡಿದ ಗೋವಿಂದರಾಯರು ಕುಳಿತಲ್ಲಿಂದ ಎದ್ದು ಮತ್ತೆ ಒಂದೆರಡು ವಾಕ್ಯ ಸೇರಿಸಿದರು. "ನಾನು ಗಂಟು ಹುಗಿದಿಟ್ಟಿದ್ದೇನೆಂತ ನಿನ್ನ ಕಲ್ಪನೆ. ಫಂಡಿನ ಹಣ ಬಂದ ಕೂಡಲೇ ನಿನ್ನ ತಾಯಿಯೇ "ಒಳೆ ಬಳೆ" ಎಂದು ಕುಣಿದು ಅನ್ನ ನೀರು ಬಿಟ್ಟಳು. ಬಾವಿ ಹಾರುತ್ತೇನೆಂದು ಕಣ್ಣೀರು ಹರಿಸಿದಳು. "ಆಗಲಿ. ಅದು ಇರುವುದರಿಂದ ಇಷ್ಟೆಲ್ಲ ಜಗಳಕ್ಕೆ ಕಾರಣ. ಕಿಸೆಯೊಳಗೆ ಆರು ಕಾಸಿದ್ದರೆ ತುರಿಸುತ್ತದೆ ಕೈ ಖರ್ಚು ಮಾಡಲು. ಹೋಗಲಿ. ನಿನ್ನ ಇಷ್ಟ ಪೂರ್ತಿಯಾಗಲಿ" ಎಂದು ಹೇಳಿ ಒಳೆ ಮಾಡಿಸಲು ಹಾಕಿದೆ. ಇನ್ನೆಲ್ಲಿಂದ ನಾನು ತರುವುದು?"

ಶಿವರಾಯ ಮಾತು ನಿಲ್ಲಿಸಿದ. ಮೋರೆಯೂ ಸ್ವಲ್ಪ ಸಿಟ್ಟಿನಿಂದ ಗಂಟಿಕ್ಕಿತು. ಮತ್ತೆ ವಿಶೇಷ ಮಾತನಾಡಲಿಲ್ಲ. ಪ್ರಶ್ನೆಗೆ ತಕ್ಕ ಉತ್ತರ. ಹೆಚ್ಚಿನವಕ್ಕೆಲ್ಲ "ಹುಂ, ಹಾಂ, ಹುಂ" ಒಂದೇ ಉತ್ತರ. ಊಟಕ್ಕೆ ಕೂತಾಗಲೂ ಅಷ್ಟೆ. ಊಟವಾದ ಮೇಲೆ ಒಂದೆರಡು ಗಳಿಗೆ ವಿಶ್ರಾಂತಿಯನ್ನೂ ಸರಿಯಾಗಿ ತೆಗೆದುಕೊಳ್ಳಲಿಲ್ಲ. ಅಂಗಿ, ಕೋಟು ಹಾಕಿಕೊಂಡು ಸಿದ್ಧನಾದ. ದುಸ್ತು ಧರಿಸಿದುದನ್ನು ಕಂಡ ಗೋವಿಂದರಾಯರು, "ಎಲ್ಲಿಗೆ ಹೊರಟೆ?" ಎಂದು ಕೇಳಿದರು.

"ಹೊರಟೆ. ಹಾಗೆ ನಿಮ್ಮನ್ನು ನೋಡಲು ಬಂದೆ. ನನ್ನ ಕೆಲಸವಾಯ್ತು ಇನ್ನೇನಿದೆ ಇಲ್ಲಿ ನನಗೆ?"

ರಾತ್ರಿ ಉಳಿದು ಮುಂಜಾನೆ ಹೋಗೆಂದು ಅವರು ಹೇಳಿದರೂ ಕೇಳಲಿಲ್ಲ. ತಾಯಿಯ ಮಾತನ್ನು ಅವನು ಲಕ್ಷಿಸಲಿಲ್ಲ. "ಮುಂಡಾಜೆಗೆ ಮುಟ್ಟಿದಾಗ ಸಾಯಂಕಾಲ ವಾಗುತ್ತದೆ. ಮತ್ತೆ ಮೂಲ್ಕಿಗೆ ತೆರಳುವ ಬಸ್ಸಿಲ್ಲ." ಎಂದು ಗೋವಿಂದರಾಯರು ತಿಳಿಸಿದರು. "ರಾತ್ರಿ ಎಲ್ಲಿ ಮಲಗಿಕೊಳುತ್ತಿ ?" ಎಂದು ಸೀತಮ್ಮನವರು ಮತ್ತೆ ಮತ್ತೆ ಕೇಳಿದರು. ಎಲ್ಲಾ

ಪರೂ ಮಲಗಿಕೊಂಡ. ಎಲ್ಲಿಯೂ ಸ್ಥಳ ಸಿಗದಿದ್ದರೆ ಅಂಗಡಿ ಬಾಗಿಲಲ್ಲಿ. ನನಗೇನಾಗಬೇಕು? ಕೈಯಲ್ಲಿ ಸಾವಿರಾರು ರೂಪಾಯಿಗಳಿವೆಯೇನು? ಫಕೀರ್‌ಕು ಫಿಕೀರ್ ನೈ” ಎಂದುಸುರುತ್ತ, “ಬರುತ್ತೇನೆ” ಎಂದು ಮುಖ ಮಂಟಪದಿಂದ ಇಳಿದು ಕೊಡೆ ಬಿಡಿಸಿ ಮುಂಡಾಜೆ ರಸ್ತೆಯ ದಾರಿ ಹಿಡಿದ.

ಅವನು ಕಣ್ಣಿಗೆ ಕಾಣಿಸುವ ವರೆಗೂ ಮುಖ ಮಂಟಪದಲ್ಲೇ ನಿಂತು ನೋಡಿದರು ಗೋವಿಂದರಾಯರು. ಶಿವರಾಯ ಸಿಟ್ಟಿನಿಂದಲೇ ಹೋದನೆಂದು ಅವರ ಮನಸ್ಸಿಗೆ ಖಾತ್ರಿಯಾಯ್ತು. ಅದರಿಂದ ಅವರ ಮನಸ್ಸು ಬಹಳ ನೊಂದಿತು. ಮಗನ ಸ್ವಭಾವವೇ ಅವರಿಗೆ ಅರ್ಥವಾಗಲಿಲ್ಲ. ಅವನ್ನು ನೆನಸಿದಂತೆ ಮಕ್ಕಳ ಗುಣಗಳೆಲ್ಲ ಅವರ ಕಲ್ಪನೆಗೆ ನಿಲುಕಿದುವು. ಎಲ್ಲ ಮಕ್ಕಳೂ ಒಂದೇ ವಿಧ. ಸಾಲಾಗಿ ನಿಲ್ಲಿಸಿದರೆ ಇವನು ಅಣ್ಣ, ಇವನು ತಮ್ಮನೆಂದು ಕುರುಡರೂ ಗುರುತಿಸ ಬಹುದು. ಆದರೆ ಅಣ್ಣನಂತೆ ತಮ್ಮನಿಲ್ಲ. ಒಬ್ಬನಲ್ಲಿ ಕಾಸಿಲ್ಲ ತಿಂಗಳಾಂತ್ಯಕ್ಕೆ. ಆದರೂ ಆಕಾಶಕ್ಕೆ ಗೋಳ ಹಾಕುತ್ತಾನೆ. ಮತ್ತೊಬ್ಬ ಕಾಸು ಬಿಚ್ಚುವುದಿಲ್ಲ. ಪರರದ್ದಕ್ಕೂ ಕೈ ಚಾಚುತ್ತಾನೆ. ಇಬ್ಬರೂ ತನ್ನ ಮಕ್ಕಳೇ. ಆದರೆ ಒಬ್ಬರಿಗೊಬ್ಬರು ಅಜಗಜಾಂತರ. ಇನ್ನು ಹರಿ ಬಂದ ಮೇಲೆ ಅವನು ಹೇಗೆಯೋ? ಏನೇನು ಅನುಭವಿಸಲಿದೆಯೋ ಎಂದು ಚಿಂತಿಸುತ್ತ ಮೋರೆ ಹೊರಳಿಸಿದರು. ಅಲ್ಲೇ ನಿಂತಿದ್ದ ಹೆಂಡತಿಯನ್ನು ನೋಡಿ, “ಹಾಂ, ಈ ಫಂಡಿನ ಹಣ ಒಂದು ಕಿಲ್ಬಿಷವಾಯ್ತು” ಎಂದು ನಿಟ್ಟುಸಿರು ಬಿಟ್ಟರು.

“ನಾನು ಆಗಲೇ ಹೇಳಿದೆ ಒಳಿ ಮಾಡಿಸಿ ಬಿಡಿ ಎಂದು. ನೀವು ನನ್ನ ಮಾತನ್ನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ” ಎಂದರು ಸೀತಮ್ಮ.

ಅದನ್ನು ಕೇಳಿ ಗೋವಿಂದರಾಯರಿಗೆ ಗಾಯದಲ್ಲಿ ಸಾಸಿವೆಯನ್ನು ಬಳಿದಂತಾಯ್ತು. ಸ್ವಲ್ಪ ಸಿಟ್ಟಿನಿಂದಲೇ ಅವರು ಹೆಂಡತಿಯನ್ನು ಗದರಿಸಿದರು. “ಅವನದು ಆಯ್ತು. ಈಗ ನೀನು ಬಂದಿಯೇನು ಜಗಳಕ್ಕೆ? ಏನು ನಾನು ಮನೆಯಲ್ಲಿರಬೇಕೆಂದು ಮಾಡಿದೆಯೋ ಅಥವಾ ಕಾಡಿಗೆ ಹೋಗಿ ಬಿಡಲೋ?”

ರಾಯರಿಗೆ ಸಿಟ್ಟು ಬಂದಿದೆಯೆಂದರಿತು ಸೀತಮ್ಮನವರು ಒಳಗೆ ನಡೆದರು. ಗೋವಿಂದರಾಯರು ನಸ್ಯ ಏರಿಸಿ ಮತ್ತೆ ಅಂಗಳಕ್ಕೆ ಇಳಿದು ಕಾಡು ಕಡಿವಲ್ಲಿ ತೆರಳಿದರು. “ಏ ಬೋರ, ತುಕ್ರ ಎಲ್ಲಿದ್ದೀರಿ? ಕಡಿವ

ಶಬ್ದವೇ ಕೇಳಿಸುವುದಿಲ್ಲ ” ಎಂದು ಗಟ್ಟಿಯಾಗಿ ನುಡಿಯುತ್ತ ಬಂದರು. ಅವರೆಲ್ಲ ಒತ್ತಟ್ಟಿಗೆ ಕುಳಿತು ಎಲೆ ಅಡಿಕೆ ಜಗಿಯುತ್ತಿದ್ದರು. “ ಹುಂ, ಏಳ್ರಿ. ಏಳ್ರಿ. ನಾನತ್ತ ಹೋದ ಕೂಡಲೇ ಇತ್ತ ನೀವು ಕುಳಿತಿರಾ ಏನು? ಕಾಡು ಕಡಿವ ಶಬ್ದವೇ ಕೇಳಿಸಲಿಲ್ಲ. ಹದಿನೈದು ದಿವಸಗಳೊಳಗೆ ಮುಗಿಯಬೇಕೆಂದು ಅಯ್ಯ ಹೇಳಿ ಹೋಗಿದ್ದಾರೆ. ಹೀಗಾದರೆ ನಿಮ್ಮ ಸಂಬಳ ಕಡಿಯಬೇಕಾದೀತು. ಏಳ್ರಿ ” ಎಂದು ಒತ್ತಾಯದಿಂದ ಅವರನ್ನೆಬ್ಬಿಸಿದರು. ಮತ್ತೆ ಪಟ್ ಪಟ್ ಮರ ಕಡಿವ ಶಬ್ದ ಆರಂಭವಾಯಿತು. ದಿನಂಪ್ರತಿ ಈ ಪಟ್ ಪಟ್ ಶಬ್ದ ಕಾಡಿನಲ್ಲೆಲ್ಲ ಪ್ರತಿಧ್ವನಿತವಾಯಿತು.

ಆದರೆ ಹದಿನೈದು ದಿನಗಳು ಉರುಳಿದರೂ ರಾಜಾ ಬರಲಿಲ್ಲ. “ಪ್ರಾಯಶಃ ಸಂಬಳ ದೊರೆತ ಮೇಲೆಯೇ ಬಂದಾನು. ಬರಿಗೈಯಲ್ಲಿ ಬಂದರೆ ಏನು ಪ್ರಯೋಜನ? ಆಳುಗಳು ಅವನ ಜೀವವನ್ನೇ ತಿಂದಾರು” ಎಂದು ಗೋವಿಂದರಾಯರು ಊಹಿಸಿದರು. ಅವರಂತೆ ಸಂಬಳ ಕೈಗೆ ಸಿಕ್ಕ ಮೇಲೆಯೇ ರಾಜಾ ಮೂಡಿದ. ನಡೆದ ಕೆಲಸವನ್ನು ಕಂಡು ಅವನಿಗೆ ಪರಮಾನಂದವಾಯಿತು. ಮನೆಯ ತೆಂಕು ಹಾಗೂ ಹಟ್ಟಿಯ ಬಡಗು ದಿಕ್ಕಿನಿಂದ ಪಶ್ಚಿಮಕ್ಕೆ ಹೊಳೆಯ ದಂಡೆಯವರೆಗೂ ಬಟ್ಟ ಬಯಲಾಗಿದೆ. ಹೊಳೆಯ ದಂಡೆಯ ಮರಗಳನ್ನು ಮಾತ್ರ ಮುಟ್ಟಿರಲಿಲ್ಲ. ಸಾಲಾಗಿ ಸೈನಿಕರು ನಿಂತಂತೆ ಅವು ಕಂಗೊಳಿಸಿದುವು. ಕಾಡು ಕಡಿದ ಸ್ಥಳದಲ್ಲೂ ಅಲ್ಲೊಂದು ಇಲ್ಲೊಂದು ಜಾತಿ ಗಿಡ ಮರಗಳನ್ನು ಬಿಟ್ಟಿರುವರು. ಆಲ, ಪಾಲ, ಅಶ್ವತ್ಥ, ಮಾವು, ಹಲಸು, [illegible] ಗೋವಿಂದರಾಯರ ಪಟ್ಟಿಯಲ್ಲಿ ಜಾತಿ ಮರಗಳೇ. ಅಂಗಳದ ಬದಿಯಲ್ಲೊಂದು ಕಾಟು ಮಾವಿನ ಮರವಿದ್ದರೆ ಹೊಳೆಯ ಬದಿಯಲ್ಲೊಂದು ಅಶ್ವತ್ಥವಿದೆ. ಅಂಗಳದಿಂದ ಹೊಳೆಯವರೆಗೆ ಭೂಮಿ ಇಳಿಜಾರಾಗಿದೆ. “ಅಲ್ಲಲ್ಲಿ ನೆಲವನ್ನು ಸಮತಟ್ಟಾಗಿ ಮಾಡಬೇಕು. ಭೂಮಿ ಲೆವೆಲ್ ಇಲ್ಲ. ಹೊಳೆಯ ಕಡೆ ತಗ್ಗಾಗಿದೆ. ಅಲ್ಲಲ್ಲಿ ಹುಣಿಗಳನ್ನು ಹಾಕಬೇಕು. ಇಲ್ಲದಿದ್ದರೆ ಮೇಲಿಂದ ನೀರು ಹರಿದು ಹೊಳೆಗೆ ಇಳಿಯುವುದೇ ಸರಿ” ಎಂದ ರಾಜಾ ನೋಡಿ.

“ಲೆವೆಲ್ ಮಾಡಿ ಹುಣಿ ಹಾಕುವ ಮೊದಲು ಕರ್ಮ್ಮಾರ್ ಸರೋಳಿಗೆ ಕುಂಟಾಲ್, ಕಾಸರಕಗಳ ಗುತ್ತಿಗಳನ್ನು ಅಗೆದೊಗೆಯಬೇಕು. ಬಿದಿರು

ಹಿಂಡಲುಗಳ ಬೇರನ್ನೂ ಮುರಿಯದೆ ಗತ್ಯಂತರವಿಲ್ಲ. ಇಲ್ಲದಿದ್ದರೆ ಮುಂದಿನ ಮಳೆಗಾಲದೊಳಗೆ ಮತ್ತೆ ತಿರಿ ಚಿಗುರಿ, ಪೊದೆ ಪೊದರು ಬೆಳೆಯುವುದು. ಮತ್ತೆ ಅದನ್ನು ಕೊಯ್ಯ ಕೆಲಸ ಬೇಡ. ಈಗಲೇ ಮುಗಿಸಿ ಗದ್ದೆ ರೂಪ ತರುವುದು ಒಳ್ಳೆಯದು.'' ಎಂದು ಗೋಪಿಂದರಾಯರು ಸೂಚಿಸಿದರು.

"ಅದು ಹೌದು" ಎಂದುತ್ತರವಿತ್ತ ರಾಜಾ ಅಂಗಳದಿಂದ ಮತ್ತೆ ಕೆಂಕು ಬದಿಗೆ ಬಂದು ಅಲ್ಲಿಂದ ಹೊಳೆಯ ವರೆಗೂ ಮತ್ತೊಮ್ಮೆ ದಿಟ್ಟಿಸಿದ. ಆ ಮೇಲೆ ತಂದೆಯ ಕಡೆ ಹೊರಳಿ, "ಅಪ್ಪಯ್ಯ, ಇದು ಬಹಳ ಎತ್ತರ ಸ್ಥಳ. ಮಣ್ಣು ಪಡ್ಲೋಣಿ. ಕಲ್ಲುಗಳು ತುಂಬಿವೆ. ಗದ್ದೆಯಾಗಲಿಕ್ಕಿಲ್ಲ. ಗದ್ದೆ ಮಾಡಿದರೆ ನೀರೂ ನಿಲ್ಲಲಿಕ್ಕಿಲ್ಲ. ಹೊಳೆಯ ಕಡೆ ಹರಿಯುವುದೂ ನಿಶ್ಚಿತ. ಇಲ್ಲಿ ಗಿಡ ಮರಗಳನ್ನು ಕಡಿದುದು ವ್ಯರ್ಥ.'' ಎಂದು ಅಭಿಪ್ರಾಯ ಪಟ್ಟ.

"ಯಾವುದೂ ವ್ಯರ್ಥವಲ್ಲ. ಮನೆಯ ಸಮೀಪ ಕಾಡಿರಬಾರದೆಂದು ಬೇಕೆಂದೇ ಕಡಿಸಿದೆ. ಇಲ್ಲೆಲ್ಲ ಗುಳಿ ತೋಡಿ ಕೆಲವು ಕಸಿ ಗಿಡಗಳನ್ನು ನೆಡುವ'' ಎಂದು ಅವರು ಸೂಚಿಸಿದರು.

"ಹಾ, ಅದು ಒಳ್ಳೆಯದು. ನನ್ನಗೆ ತೋಚಲಿಲ್ಲ. ಈ ಸಲ ಬಂದಾಗಲೇ ಮಂಗಳೂರಿನ ಸೋನ್ಸ್ ಫಾರ್ಮಿನಿಂದ ತಂದು ಬಿಡುತಿದ್ದೆ ಗಿಡ."

"ನಾನೂ ಹೇಳಲು ಮರೆತೆ, ಬಹಳ ಬೇಡ. ಸ್ವಲ್ಪ ಸ್ಥಳ ಹರಿವೆ, ಹಾಗಲ ತರಕಾರಿ ಬೆಳೆಸಲೂ ಬೇಕು. ನೋಡು, ಸಾಧಾರಣ ಅಂಗಳದ ಅಂಚಿನಲ್ಲಿರುವ ಸ್ನಾನದ ಕೊಟ್ಟಿಗೆಯಿಂದ ಹಿಡಿದು ದಕ್ಷಿಣಕ್ಕೆ ಆ ಕಾಡಿನ ಕರೆ ಮುಟ್ಟುವ ಲೈನಿನಿಂದ ಈಚೆ, ಈ ದರೆಯ ವರೆಗೆ ಸ್ಥಳ ಬಿಟ್ಟು ಬಿಡೋಣ. ಗದ್ದೆಯ ವಿಚಾರ ಬೇಡ. ಮನೆಯ ಸುತ್ತಲೂ ಗದ್ದೆಯಿದ್ದರೆ ಅದರ ನೀರಿನ ಪಸೆ ಮನೆಗೂ ಇಂಗುತ್ತದೆ. ಗೋಡೆಗೂ ಹಾನಿಯುಂಟು. ಮನೆಯ ಸಮೀಪವೇ ಹೀರೆ, ಸೋರೆಗಳ ದರ ಹಾಕಬಹುದು. ಬಾವಿಯೂ ಹತ್ತಿರದಲ್ಲಿದೆ. ಆದರೆ, ಬೇಸಿಗೆಯಲ್ಲಿ ಮಾತ್ರ ನೀರು ಹೊತ್ತು ಹೊತ್ತು ಅವಳ ಬೆನ್ನು ಬಗ್ಗಿ ಹೋದೀತು" ಎಂದು ಸೀತಮ್ಮನವರನ್ನು ನೆನೆಸಿಕೊಂಡು ನುಡಿದರು.

"ಹಾಂ, ಅವಳನ್ನು ನೀರು ಹೊರಲು ಯಾಕೆ ಹಚ್ಚಬೇಕು? ಬೇಸಿಗೆಗೆ ನೇತ್ರಾವತಿಗೆ ಕಟ್ಟ ಕಟ್ಟಿ ನೀರು ತಂದ ಇಲ್ಲಿಯ ವರೆಗೆ. ತರಕಾರಿಗೂ ಆಗುತ್ತದೆ. ಕಸಿ ಗಿಡಗಳಿಗೂ ಆಗುತ್ತದೆ".

"ನೀರು ಇಷ್ಟು ಎತ್ತರದ ವರೆಗೆ ಹರಿಯುವುದುಂಟಾ?"

ನೋಡಬೇಕು" ಎಂದ ರಾಜಾ ತಂದೆಯೊಡನೆ ಎಲ್ಲೆಲ್ಲಿ ಕಸಿ ಗಿಡಗಳ ಹೊಂಡ ತೆಗೆಯಬೇಕು; ೨೦ ಅಡಿಗೊಂದು ನೆಟ್ಟರಾದೀತೇ ಹೇಗೆ? ಎಂದು ಚರ್ಚಿಸುತ್ತ ಹೆಜ್ಜೆಯಿಕ್ಕಿದ. ಆ ಮೇಲೆ ನೀರಿನ ಕಾಲಿವೆಯ ಸ್ಥಳ ಪರೀಕ್ಷೆಗೂ ಅವರು ಆರಂಭಿಸಿದರು. ಹಿಂದಿದ್ದ ಪಾಳು ತೋಡಿನ ಗುರುತು ಹಿಡಿಯಲೂ ಯತ್ನಿಸಿದರು. ಸಾಧಾರಣ, ಅಂಗಳದ ಅಂಚಿನಲ್ಲೇ ಈ ನೀರಿನ ತೋಡು ಕಡಿಯಬೇಕೆಂದು ಅವರು ನಿರ್ಧರಿಸಿದರು. ಅಂಗಳದಿಂದ ಹೊಳೆಯ ಕಡೆ ಇಳಿಜಾರಾಗಿರುವದರಿಂದ ಮನೆಯ ಈಚೆ ಮತ್ತು ಹೊಳೆಯ ದಿಕ್ಕಿಗಿರುವ ಭೂಮಿಯೆಲ್ಲಕ್ಕೂ ನೀರುಣಿಸಲು ಅನುಕೂಲವೇ. ತಂದೆ ಮಗನ ಈ ನಿರ್ಣಯ ಕೇಳಿದ ಸೀತಮ್ಮನವರ ಸಂತೋಷಕ್ಕೆ ಪಾರವಿಲ್ಲ. "ಮುಸುರ ತಿಕ್ಕಲು ನೀರಾಯ್ತು. ಬಿಸಿ ನೀರಿನ ಹಂಡೆಗೂ ಅಲ್ಲಿಂದಲೇ ತುಂಬಿಸ ಬಹುದು. ಒಂದು ದೊಡ್ಡ ಕಲ್ಲನ್ನು ಹಾಕಿದರೆ ಬಟ್ಟೆ ಕೂಡಾ ಒಗಿಯ ಬಹುದು. ನೀರೆಳೆದು ಎಳೆದು ನನ್ನ ಬೆನ್ನು ಈಗಲೇ ಬಗ್ಗಿದೆ. ತೋಡು ಬಂದ ಮೇಲಾದರೂ ನನ್ನ ಕಷ್ಟ ತಪ್ಪುವುದಲ್ಲ" ಎಂದವರು ಈಗಲೇ ಹಿಗ್ಗಿದರು.

ಸುಗ್ಗಿಯ ಬೇಸಾಯ ಆರಂಭವಾದಾಗ ಮತ್ತೆ ಆಳುಗಳೊಬ್ಬರೂ ಬರಲಿಲ್ಲ ಕೆಲಸಕ್ಕೆ. ಆವರು ಬರದಿದ್ದರೂ ಕೆಲಸ ನಿಲ್ಲಲಿಲ್ಲ. ಗೋವಿಂದ ರಾಯರು ಏಳುವಾಗಲೇ ಕಾಫಿ ತಯಾರಾಗುವುದು. "ಇದು ಮಲೆನಾಡು ಕಾಲಡಿ ಹಾವುಗಳ ರಾಜ್ಯ. ಬಿಸಿಲು ಬೀಳಲಿ ಚಾಪೆಯಿಂದೇಳಲು" ಎಂದು ಅವರು ಎಷ್ಟು ಹೇಳಿದರೂ ಸೀತಮ್ಮ ಕೇಳಲಾರರು. "ನನಗೇನಾಗಬೇಕು ಇನ್ನು" ಎಂದು ಅವರು ಉತ್ತರ ಕೊಡುವರು. "ಗಿಡವಾಗಿ ಬಗ್ಗದದು ಮರವಾಗಿ ಬಗ್ಗದು" ಎಂದು ಹಂಗಿಸಿ ಮಾತು ನಿಲ್ಲಿಸಿ ಕಾಫಿ ಕುಡಿಯುವರು. ಅದನ್ನು ಮುಗಿಸುವುದರೊಳಗೆ ಕಟ್ಟಿಟ್ಟ ತರಕಾರೀ ಬೀಜಗಳ ಒಂದೊಂದೇ ಬಟ್ಟೆಯ ಗಂಟುಗಳನ್ನು ಸೀತಮ್ಮ ತಂದು ಬಿಚ್ಚುವರು. "ಈ ಋತುವಿಗೆ ಬಿತ್ತುವ ಬೀಜ ಯಾವುದು? ಬೇಸಿಗೆಗಾವುದು?" ಎಂಬುದನ್ನು ಪರಿಕಿಸಿ ಬೇಕಾವ

ದನ್ನು ಅವರು ಪ್ರತ್ಯೇಕಿಸುವರು. ಅವರು ಹಾರೆ ಪಿಕ್ಕಾಸ್ ಹಿಡಿದು ಹೊರ ಟಾಗ ಬೀಜಗಳ ಗಂಟನ್ನಿಟ್ಟ ಬುಟ್ಟಿಯನ್ನು ಮೋಹನ ಹೊತ್ತುತರುವ. ಗೋವಿಂದರಾಯರು ಉದ್ದಕ್ಕೆ ಮಣ್ಣನಗೆದು ಕೊಚ್ಚಿ ಅಗತೆ ಮಾಡಿದರೆ ಕೂಡಿಸಿಟ್ಟ ಬೂದಿಯನ್ನು ಸೀತಮ್ಮ ತಂದು ಸುರಿಯುವರು. ಕೆಲವಕ್ಕೆ ದನದ ಗೊಬ್ಬರ. ಹಟ್ಟಿಗೊಬ್ಬರ ಹಾಕಿದರೆ ಬಳ್ಳಿಯೇ ಸೊಕ್ಕಿ ಕೋಡು ಕಾಯಿಗಳು ಬಿಡದವೂ ಉಂಟು. ಅಳಸಂಡೆ ಕುಂಬಳಗಳ ದರ ಒತ್ತೊತ್ತಿಗೆ ಇರುವಂತೆಯೂ ಇಲ್ಲ. ಎಲ್ಲ ಗಾವುದ ಪಸರಿಸುವ ಲತೆಗಳು ಇವು. ಇವುಗಳ ಬಳ್ಳಿ ಹಬ್ಬಲು ಆಡರ್ ಹಾಸುವರು. ಅದರಿನ ಮೇಲೆ ಬಳ್ಳಿ ಪಸರಿಸಿದಾಗ ಕುಂಬಳಕಾಯಿ ಇಳಿದು ಕೆಳಗಿನ ನೆಲಕ್ಕೆ ಮುಟ್ಟುತ್ತದೆ. ಆದರೆ ಪಡುವಲ, ಹಾಗಲ, ಹೀರೆ ಗಳಿಗೆ ಚಪ್ಪರದ ಮರ್ಯಾದೆಯುಂಟು. ಈ ಬೀಜಗಳು ಮೊಳಕೆ ಒಡೆದು ಎರ ಡೆಲೆ ನಾಲ್ಕೆಲೆಯಾಗಿ ಕಲೆ ಅತ್ತಿತ್ತ ಹೊರಳಿಸುವಾಗಲೇ ಕುಡಿಯ ಸಮೀಪ ದರೆಯ ಮೇಲೆ ಆಡರ್ ನೀಟ ಚುಚ್ಚಿ ಬಳ್ಳಿಯನ್ನು ಅದರ ಮೇಲೆ ಏರಿಸಿ ಬಿಡುವರು. ಅದು ಏರಿ ಇಡೀ ಒಣಗಿದ ಟೊಂಗೆಯನ್ನು ಆಕ್ರಮಿಸಿ ದಾಗ ಮೇಲೆ ಚಪ್ಪರ ಸಿದ್ಧವಾಗುತ್ತದೆ. ಈ ಚಪ್ಪರಕ್ಕೆ ಅಂಥಾ ಸಡಗರವಿಲ್ಲ ಬಳ್ಳಿಯ ದರದ ನಾಲ್ಕೂ ಬದಿಗಳಲ್ಲಿ ನಾಲ್ಕು ಕೋಲು ಹುಗಿದು ಮೇಲೆ ಅಡ್ಡನೀಟ ಕೋಲುಗಳನ್ನು ಕಟ್ಟಿ ಅದರ ಮೇಲೆ ಆಡರ್ ಎಸೆಯುವುದು ಕ್ರಮ. ಬಳ್ಳಿ ಆ ಚಪ್ಪರವನ್ನೆಲ್ಲ ವ್ಯಾಪಿಸಿಬಿಡುತ್ತದೆ. ಹಾಗಲ, ಹೀರೆ, ಸೋರೆ ಪಡುವಲ ಕಾಯಿಗಳೆಲ್ಲ ಗಾಳಿಗೆ ಅತ್ತಿಂದಿತ್ತ ತೂಗುವುವು. ಅದನ್ನು ಕಂಡರೆ ಮುಂದಿಗೇಕೆ, ಬೇಂಡೆ ಬದನೆಗಳಿಗೂ ಹೊಟ್ಟೆಯುರಿ. "ಬಳ್ಳಿಯಲ್ಲದಿದ್ದರೆ ಏನಾಯ್ತು? ಸುಂದರ ನಾರಿಯ ಕೈಬೆರಳುಗಳಂತಿರುವ ಈ ಕಾಯಿಗಳನ್ನು ನೋಡಿ" ಎಂದು ಅಣಕಿಸಿ ತೋರಿಸುವಂತೆ ನೀಟವಾಗಿ ಕಾಯಿಗಳನ್ನು ಪ್ರದರ್ಶಿಸುವುವು. ಯಾವ ಷೋಡಶೋಪಚಾರವಿಲ್ಲದ ಒಡವ ಹರಿವೆ, ಮಣ್ಣನ್ನು ಕೊಚ್ಚಿ ಮೇಲೆ ಒಂದಿಷ್ಟು ಬೂದಿ ಚೆಲ್ಲಿ ಬೀಜಗಳನ್ನು ಹರವಿ ನೀರು ಚಿಮುಕಿಸಿದರೆ ಸಾಕು, ಅಲ್ಪತೃಪ್ತಿಯಿಂದಲೇ ಗುಪ್ಪೆ ಗುಪ್ಪೆಯಾಗಿ ಸಸಿಗಳು ಮೂಡುವುವು.

ಹರಿವೆ ಇರಲಿ, ಕುಂಬಳ ವಿರಲಿ, ಬೀಜ ನೋಡಿ ಫಲದ ಗುಣ ನುಡಿ ಯುವುದು ಕಠಿಣ. ಸಾಸಿವೆಗಿಂತಲೂ ಕಿರಿದಾಗಿರುವ ಅತಿಸಯವುಳ್ಳ ಹರಿ

ನೆಯ ಕರಿಬೀಜಗಳನ್ನು ಕೈಯ ಹಿಡಿಯಲ್ಲಿ ಹಿಡಿದರೆ ಎಡೆಯಲ್ಲಿ ಜಾರಿ ಬಿಡಲೆತ್ನಿಸುತ್ತದೆ. ಬಿತ್ತಿದಾಗಲೇ ಈ ಅಣುವಿನ ಗುಣ ಗೊತ್ತು. ಬೀಜಗಳಿಗೊಂದೇ ಸ್ವರೂಪವಿದ್ದರೂ ಗಿಡಸೊಪ್ಪುಗಳ ಸ್ವರೂಪ ಒಂದೊಂದು ವಿಧ. ಕೆಲವು ಅಚ್ಚ ಹಸುರಾದರೆ ಹಲವಕ್ಕೆ ರಕುತದ ಬಣ್ಣ. ಅಳಸಂಡೆಯ ಕೋಡುಗಳಾದರೂ ಅಷ್ಟೆ. ಬದನೆಯಲ್ಲಿ ಉದ್ದ, ಗಿಡ್ಡ, ಅಚ್ಚಬಿಳಿ, ಪಚ್ಚೆ, ಕೆಂಪು ಗುಂಪು. ಅದರಲ್ಲೂ ಮಟ್ಟಿಗುಳ್ಳದ ಶೋಭೆಯೇ ಬೇರೆ. ಅವರ ಕೊರಳಿಗೆ ಹಸುರು ಹಾರ. ಕುಂಬಳದಲ್ಲೂ ಅನೇಕ ವೈವಿಧ್ಯ. ತಂಬಿಗೆಯಷ್ಟು ಗಾತ್ರದ ರಾಮಕುಂಬಳ. ಕಾಶಿಕುಂಬಳ ಒಂದು ದಂಡಗಿದ್ದರೆ ಮತ್ತೊಂದು ಉದ್ದ. ಅವರ ಎಳೆ ಕಾಯಿಯಂತೂ ಹುಳಿ, ಪಲ್ಯ, ಪಾಯಸಕ್ಕೆ ಉಪಯೋಗಿಸಲ್ಪಡುತ್ತದೆ. ಸೊಕ್ಕಿದ ಬಳ್ಳಿಯ ಎಳೆಕುಡಿಗಳನ್ನೂ ಗೋವಿಂದರಾಯರು ಬಿಡುವಂತಿಲ್ಲ. ಅವನ್ನು ಚಿವುಟಿ ತಂದು, "ಬೇಳೆ ಹಾಕಿ ಹುಳಿ ಮಾಡು. ಬಹಳ ರುಚಿಯಾಗುತ್ತದೆ.'' ಎಂದು ಹೆಂಡತಿ ಮುಂದೆ ನುಡಿವರು. ಹೂಗಳು ಅರಳಿದಾಗ ಭೃಂಗಗಳು ಎರಗುವಂತೆ, ಕುಂಬಳದ ಹುಸಿಹೂಗಳು ಅರಳಿದೊಡನೆಯೇ ಅವುಗಳನ್ನೂ ಕಿತ್ತು ತಂದು "ಹುಂ, ಉದ್ದಿನ ಬೇಳೆ ಹಾಕಿ ಗೊಜ್ಜು ಮಾಡು. ಗೊಜ್ಜು ಪಸಂದವಾಗುತ್ತದೆ. '' ಎಂದು ನುಡಿಯುವರು. ಮೋಹನ ಈ ಕುಂಬಳದ ಹೂಗಳ ಮಧ್ಯೆ ಇರುವ ಪರಾಗ ನಳಿಕೆಗಳನ್ನು ಒಂದೊಂದಾಗಿ ಕಿತ್ತು ಸವುಟಿನಲ್ಲಿ ತುಂಬಿಸಿ ಅದಕ್ಕೆ ಒಂದು ಚಮುಚೆ ಎಣ್ಣೆ ಹೊಯ್ದು ಬೆಂಕಿಯಲ್ಲಿ ಬೇಯಿಸಿ ಮುಖ ಮಂಟಪಕ್ಕೆ ತಂದು ಒಂದೊಂದೇ ಬಾಯಿಗೆ ಹಾಕಿ ನಾಲಿಗೆ ಚಪ್ಪರಿಸುತ್ತಾನೆ. ಹೆಚ್ಚು ಹುಸಿ ಹೂಗಳು ಜಗಲಿಯಲ್ಲಿ ಬಂದು ಬಿದ್ದ ದಿನ ಸೀತಮ್ಮನವರು ಪಾವು ಅಕ್ಕಿ ನೆನೆಹಾಕಿ ಕಡಿದು ಈ ಹೂವಿನ ಪತ್ರೊಡೆ ಮಾಡುವುದೂ ಇದೆ. ಬೇಳೆ, ಅಳಸಂಡೆ, ಹೀರೆ, ಹಾಗಲಗಳು ಬಳ್ಳಿ ತುಂಬಿದ್ದರೂ ಈ ಕುಡಿ ಮತ್ತು ಹೂಗಳನ್ನು ತಂದುದಕ್ಕೆ ಸೀತಮ್ಮನವರು ಆಕ್ಷೇಪಿಸುವುದುಂಟು "ಏನು ಅವಸರ ನಿನಗೆ ? ಬರಲಿ ರಾಜಾ, ಕೈಗೆ ಬಂದುದು ಬಾಯಿಗೆ ಬರಲು ಎಷ್ಟು ಹೊತ್ತು ? '' ಎಂದು ಹೆಂಡತಿಯು ಮುಂದೆ ಗೋವಿಂದರಾಯರು ನುಡಿವ ದಿನದೂಡುತ್ತ ಬಂದರು.

ರಾಜಾ ಬಂದಾಗ ಈ ವಿಧ ವಿಧದ ವಿಪುಲ ಬದನೆ, ಕುಂಬಳಗಳನ್ನು ಕಂಡು ಬೆರಗಾದ. ಎಲೆಗಳನ್ನು ಹೊದಿಸಿ ಮುಚ್ಚಿಟ್ಟಿದ್ದ ಒಂದು ಕುಂಬಳ

ವನ್ನು ಗೋವಿಂದರಾಯರು ತೋರಿಸಿ, "ಇಕೋ ಇನು ಮುಂದಿನ ವರುಷಕ್ಕೆ ಬೀಜದ ಕಾಯಿ'' ಎಂದರು. ಮಿಡಿತೆ, ಬಂಬೂಚುಗಳು ಎರಗಿ ಕೊರೆದು ಕೆಡಿಸದಂತೆ ಬಟ್ಟೆ ಸುತ್ತಿದ್ದ ಬೇಂಡೆಯನ್ನೂ ಮಗನ ಲಕ್ಷಕ್ಕೆ ತಂದು ಕೊಟ್ಟರು. "ಅಪ್ಪಯ್ಯ, ಎಷ್ಟು ದೊಡ್ಡದಾಗಿವೆ! ಇವನ್ನು ಪ್ರದರ್ಶನದ ಕಾಲಕ್ಕೆ ಮಂಗಳೂರಿಗೆ ಕಳಿಸಿದರೆ ಪ್ರೈಜ್ ದೊರೆತೀತು! ಏನು ತಿಂದು ಇಷ್ಟು ಸೊಕ್ಕಿದೆ?" ಎಂದು ರಾಜಾ ಕಣ್ಣುಗಳನ್ನು ಅರಳಿಸಿದ.

"ಏನು ಹಾಕಿದ್ದೇನೆ ನಾನು? ಒಂದೊಂದು ಹಿಡಿ ಬೂದಿ. ಎಲ್ಲ ಈ ಮಣ್ಣಿನ ಗುಣ. ಬಹಳ ಈರ್ಟ್ ಉಂಟು ಈ ಮಣ್ಣಿನಲ್ಲಿ. ಬರೇ ಮಣ್ಣು ಕೆದರಿ ಬೀಜ ಬಿತ್ತಿದುದಕ್ಕೆ ಇಷ್ಟಾಗಿದೆ. ಇನ್ನು ಸರಿಯಾಗಿ ಗೊಬ್ಬರ, ಸುಡು ಮಣ್ಣು ಹಾಕಿದರೆ ಅವರ ಕಥೆಯೋ ಬೇರೆಯುಂಟು. ಅಕ್ಕಿ ಮುಡಿಯಷ್ಟು ದೊಡ್ಡ ಕುಂಬಳ ಕಾಯಿ ಆಗುವುದು ನಿಸ್ಸಂಶಯ."

"ಮುಂದಿನ ವರುಷಕ್ಕೆ ಸುಡು ಮಣ್ಣು ಮಾಡೋಣ. ಹೇಗೂ ಕಾಡು ಕಡಿದ ಅಡರ್ ಬಿದ್ದಿದೆ ರಾಶಿ. ಈ ಬೇಸಿಗೆಯಲ್ಲಿ ಸುಡು ಮಣ್ಣು ತಯಾರಿಸಿದರೆ ಸರಿ" ಎಂದು ರಾಜಾ ಭವಿಷ್ಯತ್ತಿನ ಕಲ್ಪನೆಯಲ್ಲಿ ತಲ್ಲೀನನಾದ. ಗೋವಿಂದರಾಯರು ಒಂದೊಂದನ್ನೇ ಮುಟ್ಟಿ, ಒತ್ತಿ, ಕಿಣಕಿ ಬೇಂಡೆ ಹಾಗಲ, ಹೀರೆ ಬದನೆಗಳನ್ನು ಕೊಯ್ಯ ತೊಡಗಿದರು. ಅವನಿದ್ದಷ್ಟು ಹೊತ್ತು ಮಧ್ಯಾಹ್ನ ಒಂದೊಂದರ ಬೇರೆ ಬೇರೆ ಹುಳಿ ಪಲ್ಯ ಗೊಜ್ಜುಗಳಾದರೆ, ರಾತ್ರಿ ಊಟಕ್ಕೆ ಇನ್ನೊಂದೊಂದರ ಅಡಿಗೆಯಾಯ್ತು. "ಒಂದು ಕ್ಷಣದೊಳಗೆ ಬೆಂದಿತು" ಎಂದು ಸೀತಮ್ಮನವರು ಗುಣ ಗಾನ ಮಾಡಿದರೆ, "ಇಷ್ಟು ದೊಡ್ಡದಿದ್ದರೂ ಬದನೆಯಲ್ಲಿ ಇನ್ನೂ ಬೀಜಗಳೇ ಇಲ್ಲ" ಎಂದು ರಾಜಾ ವರ್ಣಿಸಿದ. "ಕರಾವಳಿಯಲ್ಲಾಗುತ್ತಿದ್ದರೆ ಒಂದೊಂದು ಹೀರೆ ಕಾಯಿಗೆ ಒಂದೊಂದಾಣೆ ಬರುತ್ತಿತ್ತು. ಇಲ್ಲಿ ಪೇಟೆಯೂ ಹತ್ತಿರವಿಲ್ಲ" ಎಂದು ಗೋವಿಂದರಾಯರು ನುಡಿದರು. ರಾಜಾ ನಕ್ಕು, "ನಸ್ಯದಂಗಡಿ ಮಾಡಿ ನೀವು ಹಣ ಗಳಿಸಿದ್ದಾಯಿತು ಅಪ್ಪಯ್ಯ. ಇನ್ನು ತರಕಾರಿ ಮಾರಿ ಹಣ ಸಂಪಾದಿಸುವುದು ಅಷ್ಟರಲ್ಲೇ ಇದೆ" ಎಂದ. ನಸ್ಯದಂಗಡಿಯ ಈ ರಹಸ್ಯ ಅವನಿಗೆ ತಿಳಿದುದನ್ನು ಕೇಳಿ ಗೋವಿಂದರಾಯರು ಚಕಿತರಾದರು. ರಾಜಾ ಉಡುಪಿಗೆ ಬಂದಾಗ ಎಲ್ಲೋ ಇವಳೇ

ಹೇಳಿರಬೇಕು ಎಂದು ಭಾವಿಸಿ ಅರ್ಥ ಗರ್ಭಿತ ದೃಷ್ಟಿಯಿಂದ ಹೆಂಡತಿ ಯನ್ನು ನೋಡಿದರು. ಸೀತಮ್ಮ ಕಂಡೂ ಕಾಣದವರಂತೆ ಮನೆಗೆ ನೆಗೆದರು.

ಮರುದಿನ ರಾಜಾ ಮಂಗಳೂರಿಗೆ ಹೊರಟಾಗ ಗೋವಿಂದರಾಯರು ತುಂಬಾ ತರಕಾರಿ ಕೊಯ್ದಿಟ್ಟರು. ಜೋರ ಅದನ್ನು ಮುಂಡಾಜೆಯ ವರೆಗೆ ಹೊತ್ತು ಹಿಂಬಾಲಿಸಬೇಕೆಂದೂ ಆಜ್ಞೆಯಾಯಿತು. ಮನೆಯಿಂದ ರಸ್ತೆಯ ವರೆಗೆ ತೆರಳಿದ್ದ ರಾಜಾ ಮತ್ತೆ ಹೊರಳಿ ಬಂದು ಅಗಳಿನ ಬಳಿ ಯಲ್ಲೇ ನಿಂತು ಕೂಗಿ ಹೇಳಿದ ತಂದೆಗೆ,

"ಅಪ್ಪಯ್ಯ, ಮಂಗಳೂರಿಂದ ಬಂದಾಗ ಕಸಿ ಗಿಡಗಳನ್ನು ತಂದಿದ್ದೆ. ಹೊತ್ತು ಕೊಂಡು ಬರಲು ಆಗಲಿಲ್ಲ. ಮುಂಡಾಜೆಯಲ್ಲುಂಟು. ಜೋರ ನೊಡನೆ ಕಳಿಸುತ್ತೇನೆ. ಎಲ್ಲಿ ಬೇಕಾದಲ್ಲಿ ನೆಟ್ಟು ಬಿಡಿ. ನನ್ನನ್ನು ಕಾಯುವುದು ಬೇಡ."

# ೭ನೆಯ ಅಧ್ಯಾಯ

ಮಳೆಗಾಲ ಮುಗಿದು ಬಿಸಿಲು ನಿಸರ್ಗದ ಹಸುರು ಮಣೆಯ ಮೇಲೆ
ಓಲಾಡಿತು. ಹುಲ್ಲಿನ ಎಸಳುಗಳು ಬಸವಳಿದುವು. ಹಣ್ಣೆಲೆಗಳು ಉದುರಿ
ಒಣಗಿದವು. ಮೊಳ ಉದ್ದದ ಅಳಸಂಡೆಯ ಕೋಡುಗಳು ಗೇಣುದ್ದವಾ
ದುವು. ಬದನೆ, ಕೆಸುವಿನ ಮಿಳ್ಳಿಯಷ್ಟಾಯಿತು. ಹೀರೆಯ ಬಳ್ಳಿ ಸುಟ್ಟ
ಚಪ್ಪರದ ಅಡರುಗಳು ಕಾಣಿಸಿದುವು. ಕುಂಬಳದ ಕುಡಿ ಮುರುಟುಗಟ್ಟಿತು
ಕಸಿಮಾವಿನ ಗಿಡವೂ ಬಾಡಿ ಎಲೆಗಳು ನೆಲಕ್ಕೆ ಬಾಗಿದುವು. ನೆಲ ಒಣ
ಗಿದೆ. ಗೋವಿಂದರಾಯರ ನಾಲಿಗೆಯೂ ಒಣಗತೊಡಗಿದೆ. ಒಳ್ಳೇ ಮೆಣಸಿನ
ಬಿಸಿನೀರಿಗೆ ಜೀರಿಗೆ ಪುಡಿ ಬೆರಸಿ ಕಷಾಯ ಮಾಡಿ ಕುಡಿದರೂ ತೃಪ್ತಿಯಿಲ್ಲ
ಕುಡಿದ ಮರುಕ್ಷಣದಲ್ಲೇ ಬೆವರಾಗಿ ಒಡೆದು ಇಳಿದುಬಿಡುತ್ತದೆ. ಮೈ
ಮೋರೆ, ಕಂಕುಳನ್ನು ಬೈರಾಸಿನಿಂದ ಎಷ್ಟು ಒರಸಿಕೊಂಡರೂ ಸಾಲದು
ಬಾಯಾರಿಕೆ ಕುಡಿದು ಕುಡಿದು ಬಾವಿ ಬತ್ತಿತೋ ಎಂಬಂತೆ ನೀರು
ಒಂದೊಂದೇ ಮೊಳ ಇಳಿಯಿತು. “ತಳ ಸೇರಲು ಇನ್ನು ಬಹಳಕಾಲವಿಲ್ಲ
ಮತ್ತೆ ನೇತ್ರಾವತಿಯೇ ಗತಿ. ನದಿಯಿಂದ ತಲೆಯ ಮೇಲೆ ನೀರು ಹೊತ್ತು
ತರುವ ವರೆಗೆ ನೀವು ಕಟ್ಟ ಕಟ್ಟಿಸುವುದಿಲ್ಲ!'' ಎಂದು ಸೀತಮ್ಮ ಎಚ್ಚರಿಸಿ
ದುದರಿಂದ ಗೋವಿಂದರಾಯರು ಕಾಲಿವೆ, ಕಟ್ಟಗಳ ಕೆಲಸಗಳಿಗೆ ಕೈಯಿ
ಕ್ಕಿದರು.

ಕಾಲಿವೆ ಮನೆಯ ತೆಂಕು ಕಾಡಿನ ಬದಿಯಿಂದ ಕೊಟ್ಟಿಗೆ, ಅಂಗಳಗಳ
ಅಂಚಿನಲ್ಲೇ ಬಡಗು ಮುಖವಾಗಿ ಕಡಿಯಲ್ಪಟ್ಟಿತು. ತೋಡು ತಮ್ಮ
ತೋಳಿನಷ್ಟು ಅಗಲ, ಮೊಣಗಂಟಿನ ವರೆಗೆ ಆಳವಾದರೆ ಸಾಕೆಂದು ಆಳು
ಗಳಿಗೆ ತಿಳಿಸಿದರೆ “ಅಯ್ಯ, ಒಂದು ಕೋಲಿನಲ್ಲಿ ಅಗಲ, ಆಳದ ಚಡಿಮಾಡಿ
ಕೊಡಿ. ನಮಗೆ ಗೊತ್ತಾಗಲಿಕ್ಕಿಲ್ಲ'' ವೆಂದು ಆಳುಗಳು ಜಾಗ್ರತೆ ವಹಿಸಿ
ದರು. “ತೋಡು ಅಂಕುಡೊಂಕು ಸಂಕಪಾಲ ಆಗಬಾರದು'' ಎಂದು ಅವರು

ಮೊದಲೇ ಹೇಳಿದುದರಿಂದ ಬೋರ ಕಾಡಿಗೆ ತೆರಳಿ, ಬೀಳುಗಳನ್ನು ಹರಿದು ಎಲೆಗಳನ್ನು ಹರಿದು ಸವರಿ ಸುರುಳಿಯಾಗಿ ಬುಜದ ಮೇಲೆ ಹಾಕಿಕೊಂಡು ಬಂದು ಬಿಡಿಸಿ, ಕೋಲಿನ ಅಳತೆಗೆ ಸರಿಯಾಗಿ ಎರಡು ಗೆರೆಗಳನ್ನು ಬರೆದಂತೆ ಗೂಟ ಬಡಿದು ಬೀಳು ಕಟ್ಟಿದ. ತೋಡು ಕಡಿವ ಸ್ಥಳ ಹಾಗೂ ಆ ಸಾಲಿನ ಇಕ್ಕೆಲಗಳಲ್ಲಿದ್ದ ಪೊದೆಪೊದರುಗಳನ್ನೂ ಹುಲ್ಲು ಗಿಡಗಳನ್ನೂ ಬೋರ ಕಡಿಯುತ್ತ ಸವರುತ್ತ ಹೋದಂತೆ, ತುಕ್ರ ಪಿಕ್ಕಾಸಿನಿಂದ ಮಣ್ಣನ್ನಗೆಯ ತೊಡಗಿದ. ಬೆನ್ನು ಸ್ವಲ್ಪ ಬಗ್ಗಿದ್ದ ಅಹ್ಮದ್ ಬ್ಯಾರಿ ಅಂಗೈಗೆ ನಾಲಿಗೆ ನೀರು ಉಗುಳಿ, ತಿಕ್ಕಿ, ಅಗೆದ ಮಣ್ಣನ್ನು ಹಾರೆಯಿಂದ ಗೋರಿ, ತೋಡಿನ ಇಕ್ಕೆಡೆಗಳಿಗೆ ಎಸೆದ. ಒಗೆದ ಮಣ್ಣು ಪುನಃ ತೋಡಿಗೆ ಜರಿದು ಬೀಳದಂತೆ ಗೋವಿಂದರಾಯರು ಮೋಹನನೊಂದಿಗೆ ತೋಡಿನ ದಂಡೆಯ ಮೇಲೆ ಚಕ ಚಕ ಮೆಟ್ಟ ತೊಡಗಿದರು. "ಹಾಗೆ ತಕ ತಕ ಕುಣಿಯ ಬೇಡವೋ. ಕಲ್ಲಿನ ಚೂರು ಅಂಗಾಲಿಗೆ ನೆಟ್ಟೀತು'' ಎಂದು ನಡು ನಡುವೆ ಮೋಹನನಿಗೂ ಆವರು ಗದರಿಸುತಿದ್ದರು.

ಆದರೆ, ಅಗೆವ ಎಲ್ಲ ಕಡೆಗಳಲ್ಲೂ ಕಲ್ಲುಗಳಿರಲಿಲ್ಲ. ಕೆಲವು ಕಡೆ ಬಾವೆ ಮಣ್ಣು. ಒಮ್ಮೊಮ್ಮೆ ಪಿಕ್ಕಾಸಿನ ಮೊನೆ ದೊಡ್ಡ ಕಲ್ಲುಗಳಿಗೆ ಟಣ್ ಎಂದು ಬಡೆಯುತ್ತಿತ್ತು. ತುಕ್ರ ಮಣ್ಣು ಕೆರೆಯಲು ಎತ್ತಿ ಹಾಕಿದಾಗ ಹಾರೆಯ ಬಾಯಿ ಮಡಿಸಿ ಹೋಯ್ತು. ದೊಡ್ಡ ಕಲ್ಲಿನ ಮೇಲೆ ಹಾರೆಯ ತಗಡನ್ನಿಟ್ಟು ಮತ್ತೊಂದು ಕಲ್ಲಿನಿಂದ ಗುದ್ದಿ ಅವನು ಸರಿ ಮಾಡಿದುದೂ ಉಂಟು. ಹಟ್ಟಿಯ ಹಿಂಬದಿ ಕಡಿದ ಕಾಡಿನ ಭಾಗದಲ್ಲಿ ತೋಡು ಕಡಿದಾಗ ದೊಡ್ಡ ಮರದ ಬುಡವೇ ಇದಿರಾಯಿತು. ಅದನ್ನು ಬೇರು ಸಹಿತ ಅಗೆವ ಗೋಜಿಗೆ ಹೋಗದೆ ಅದರ ಬಳಿಯಲ್ಲೇ ತಿರುಗಿಸಿದರು. ಅಡ್ಡ ಬಂದ ಸಣ್ಣ ದೊಡ್ಡ ಬೇರುಗಳನ್ನು ಮಾತ್ರ ಬೋರ ಕಡಿಯದೆ ಬಿಡಲಿಲ್ಲ. ಹಳೇ ತೋಡು ಅವರಿಗೆ ಸಿಕ್ಕಿದಾಗ ಪಿಕ್ಕಾಸಿನ ಆವಶ್ಯಕತೆಯೇ ಬೀಳಲಿಲ್ಲ. ಕೆಲವು ಮಡಿಕೆಯ ಚೂರುಗಳೂ ದೊರೆತುವು. ಮಡಿಕೆ ಚೂರು ಸಿಕ್ಕಿದಾಗ ಗೋವಿಂದರಾಯರ ಕಣ್ಣುಗಳು ಅರಳುತಿದ್ದುವು. "ಎಲ್ಲಿ? ಎಲ್ಲಿ'' ಎಂದವರು ಓಡಿ ಬಂದು ಸುತ್ತಲೂ ನೋಡುತಿದ್ದರು. "ಬರಿ ಚೂರು ಮಾತ್ರವಾ? ಮಡಿಕೆಯೇ ಇತ್ತಾ? ಅಲ್ಲೇ ಸುತ್ತು ಮುತ್ತು ಅಗೆ

ನೋಡೋಣ'' ಎಂದು ಹೇಳುವರು. ಮಡಿಕೆಗಳಲ್ಲಿ ಹುಗಿದಿಟ್ಟ ಹಣ ತುಂಬಿರಬೇಕೆಂದು ಅವರ ಅಂತರಂಗದ ಆಶೆ. ಆದರೆ ತೋಡನ್ನು ತಂದು ಕಟ್ಟೆ ಕಟ್ಟುವಲ್ಲಿ ಹೊಳೆಗೆ ಮುಟ್ಟಿಸುವ ವರೆಗೂ ಮಾರ್ವಾಯಿ ಮೀಸಿನ ಚಿಪ್ಪು, ಒಡೆದ ಗಾಜಿನ ಬಳೆಗಳು ಮತ್ತು ಜಂಗು ತಿಂದ ಕಬ್ಬಿಣದ ತುಂಡು ಗಳು ಹೊರತು ಮಿಕ್ಕುದುದೇನೂ ಅವರ ಕಣ್ಣಿಗೆ ಬೀಳಲಿಲ್ಲ. "ನಮ್ಮನ್ನು ಕಂಡಾಗ ಅದು ಮಾಯ. ಪಾಪಿ ಹೋದಲ್ಲಿ ಮೊಳ ಕಾಲು ನೀರು'' ಎಂದು ಅವರು ತಮ್ಮ ಮನಸ್ಸಿನ ಅತ್ಯಾಶೆಯನ್ನು ಮುರಿದಿಕ್ಕುವರು.

ಕಟ್ಟೆ ಕಟ್ಟುವ ಸ್ಥಳದಲ್ಲೂ ಮೊಳಕಾಲು ನೀರೇ. ಮಧ್ಯೆ ಕುದುರಿದ್ದು ಹೊಳೆ ಇಲ್ಲಿ ಇಬ್ಭಾಗವಾಗಿ ಹರಿಯುತಿದ್ದರೂ ಅಷ್ಟೇ ನೀರು. ಬೇಸಿಗೆ ಯಲ್ಲಿ ಇಷ್ಟು ನಿಜ. ಆದರೆ ಮಳೆಗಾಲದಲ್ಲಿ ನೆರೆ ಬಂದಾಗ ಹೊಳೆ ತುಂಬಿ, ಕುದುರಿನ ಮೇಲೂ ಹರಿದು ಹೊಳೆ ಏಕ ಪ್ರಕಾರವಾಗುತ್ತದೆ. ಆಗ ದ್ವೀಪದಲ್ಲಿ ಬೆಳೆದ ಮರಗಳು ನೀರ ಮೇಲೆ ನಿಂತ ಮಾಯಾ ಲೋಕದ ಮರಗಳಂತೆ ತೋರುತ್ತವೆ. ಈಗ ಮಾತ್ರ ಮರಗಳ ಬುಡದಲ್ಲಿ ನೆಲದ ಮೇಲೆ ಹರಿದ ದೊಡ್ಡ ದೊಡ್ಡ ಬೇರುಗಳೂ ಗೋಚರಿಸುತ್ತಿವೆ. ಬೇರು ಗಳೆಡೆಯಲ್ಲಿದ್ದ ಮಣ್ಣು ಕೊಚ್ಚಿ ಹೋಗಿದ್ದುದರಿಂದ ಪೊಟರೆಗಳೂ ಇವೆ. ಈ ಕುದುರನ್ನು ಕೊಚ್ಚಿಕೊಂಡು ಹೋಗಲು ನೆರೆ ನೀರಿಗೂ ಶಕ್ಯವಾಗಿಲ್ಲ. ಎದುರಾಗಿ ದೊಡ್ಡ ಬಂಡೆಗಲ್ಲುಗಳಿದ್ದುದರಿಂದ ನೀರಿನ ತೆರೆಗಳೆಲ್ಲ ಅವಕ್ಕೆ ಬಡಿದು ಕವಲೊಡೆದು ಹರಿದುವು. ಆದುದರಿಂದ ನದಿ ಇಬ್ಭಾಗವಾಯಿತು ಸ್ವಲ್ಪ ದೂರದ ವರೆಗೆ. ಇಬ್ಭಾಗವಾಗಿ ಭರದಿಂದ ಹರಿದಾಗ ತಳದಲ್ಲಿದ್ದ ಉಸುಕು ಮಣ್ಣುಗಳೊಂದನ್ನೂ ಉಳಿಸಲಿಲ್ಲ. ಹೀಗಾಗಿ ತಳದಲ್ಲಿ ಬಂಡೆ ಗಲ್ಲುಗಳೂ ಕೋರೆ ಹಲ್ಲುಗಳಂತೆ ಮೂಡಿವೆ. ಬೇಸಿಗೆಗೆ ಇವು ಹೊರಗೆ ತಲೆ ಎತ್ತಿ ಬಿಸಿಲು ಕಾಯಿಸುತ್ತಿವೆ. ಮಡಿವಾಳ ಹಕ್ಕಿ ಈ ಕಲ್ಲುಗಳ ಮೇಲೆ ಕುಳಿತು ಕುಣಿದು ಹಾತೆ ಮಿಡಿತೆಗಳನ್ನು ಹಿಡಿದು ತಿಂದು ಪುಚ್ಛ ವನ್ನು ಯಾವಾಗಲೂ ಕುಣಿಸುತ್ತದೆ. ಮೀನ್ಮುಳ್ಳಿಯೂ ಕಲ್ಲಿನ ಮೇಲೆ ಕುಳಿತೇ ಮೀನು ನುಂಗುವುದು. ಅದಕ್ಕೆ ಮೀನಿನ ಆಶೆ ಬಹಳ. ನೀರಿನ ಮೇಲೆ ರೆಕ್ಕೆ ಬಡಿಯುತ್ತ ಪಲ್ಟಿ ಹೊಡೆಯುತ್ತ ನೀರೊ ಳಗೆ ನುಸುಳಿ ಬರುವ ಮೀನನ್ನೇ ನೋಡುತ್ತಿರುತ್ತದೆ ಹರಿತ ದೃಷ್ಟಿ

ಯಿಂದ. ಆದರ ಡೇಗೆ ಕಣ್ಣಿಗೆ ಮೀನು ಕಾಣಸಿದೊಡನೆಯೇ ಬಾಣದಂತೆ
ನೀರೊಳಗೆ ನುಸುಳಿ ಕೊಕ್ಕಿನಲ್ಲಿ ಅದುಮಿ ಬಂಡೆಗಲ್ಲಿನ ಮೇಲೆ ಕೂತು
ನುಂಗುತ್ತದೆ. ಕಲ್ಲುಗಳ ಮೇಲೆ ಕಾಲುಗಳನ್ನಿಡುತ್ತ ಗೋವಿಂದರಾಯರು
ಬಂದಾಗ ಬಿಕ್ಕಳಿಸುವ ಮೀನ್ಮುಳ್ಳಿಗಳನ್ನು ನೋಡಿ, "ಏನು? ನಿಮ್ಮ ಗಂಟ
ಲಲ್ಲಿ ಮೀನಿನ ಮುಳ್ಳು ಸಿಕ್ಕಿಕೊಂಡಿತಾ?" ಎಂದು ಕೇಳಿದರು. ಬಣ್ಣಬಣ್ಣದ
ರೆಕ್ಕೆಗಳನ್ನು ಅಗಲಿಸಿ ಅವು ಬೇರೆ ಕಡೆ ಹಾರಿದುವು.

ಕಟ್ಟ ಕಟ್ಟಲು ಕಲ್ಲುಗಳನ್ನು ಕಡಿಸಿ ತರಿಸಬೇಕಾದ ಅವಶ್ಯಕತೆಯೂ
ಇರಲಿಲ್ಲ. ನದಿಯಲ್ಲೇ ಕಲ್ಲುಗಳು ಹೇರಳವಾಗಿ ಬಿದ್ದಿದ್ದುವು. ತಳಕ್ಕೆ ದೊಡ್ಡ
ದೊಡ್ಡ ಕಲ್ಲುಗಳು. ಕಬ್ಬಿಣದ ಸರಳುಗಳಿಂದ ಮೂವರೂ ಕೂಡಿ ಜಾರಿಸಿ,
ಉರುಳಿಸಿಕೊಂಡು ಬಂದು ಹೊಳೆಗಡ್ಡವಾಗಿ ಸಾಲಾಗಿ ಹಾಸಿದರು. ಆಮೇಲೆ
ಮನೆಯ ಗೋಡೆಯ ತಳಕಟ್ಟಿನಂತೆ ದೊಡ್ಡ ಕಲ್ಲುಗಳ ಮೇಲೆ ಕಲ್ಲು ಕಟ್ಟಿ
ಕೊಂಡು ಬಂದರು. ಒಂದು ಮಾರು ಅಗಲದ ಕಟ್ಟ. ಕಲ್ಲುಗಳ ಮೇಲೆ ಕಲ್ಲು.
ಆಚೀಚೆ ದೊಡ್ಡ ಕಲ್ಲುಗಳು. ಅವುಗಳ ಮಧ್ಯೆ ಸಣ್ಣ ಸಣ್ಣ ಕಲ್ಲುಗಳನ್ನು ಬುಟ್ಟಿ
ಗಳಲ್ಲಿ ತಂದು ಸುರಿದರು. ಆ ದಂಡೆಯಿಂದ ಕುದುರಿನ ವರೆಗೆ. ಕುದುರಿನಿಂದ
ಈಚೆಯ ದಂಡೆಯ ವರೆಗೆ. ಕಲ್ಲಿನ ಅಣೆಕಟ್ಟು ಮುಗಿದ ಮೇಲೆ ಆದರ ನೀರ
ಮಗ್ಗುಲಲ್ಲಿ ಬುಟ್ಟಿಬುಟ್ಟಿ ಸಾವಿರಾರು ಬುಟ್ಟಿ ಮಣ್ಣನ್ನು ಸುರಿಯುತ್ತ
ಬಂದರು. ಬೋರ ಮಣ್ಣನ್ನಗೆದು ಕೊಟ್ಟಂತೆ ತುಕ್ರ ಹೊತ್ತ. ಅಹ್ಮದ್
ಬ್ಯಾರಿ ನೀರಲ್ಲಿಳಿದು ಕಟ್ಟದ ಕಲ್ಲುಗಳನ್ನು ಎರಡೂ ಕೈಗಳಿಂದ ಹಿಡಿದು
ಕೊಂಡು ಸುರಿದ ಮಣ್ಣು ಗಟ್ಟಿಯಾಗುವಂತೆ ಕಾಲಿನಲ್ಲಿ ತುಳಿದ. ಕಲ್ಲು
ಕಟ್ಟದ ಮುಂದೆ ಮಣ್ಣಿನ ಗೋಡೆಯನ್ನೂ ನಿರ್ಮಿಸಿದಂತಾಯಿತು. ಆ
ಮಣ್ಣಿನ ಗೋಡೆ ಒಡೆದು ಕಲ್ಲಿನ ಕಟ್ಟವನ್ನು ನೂಕುವ ಶಕ್ತಿ ಬೇಸಿ
ಗೆಯ ನೀರಿನ ಪ್ರವಾಹಕ್ಕಿಲ್ಲ. ಆದರೂ ಗಾಳಿ, ನೀರು, ಬೆಂಕಿಗಳ ಪ್ರತಾಪ
ದೊಡ್ಡದು. ಹಾಗೆಯೇ ಅಥವಾ ಹೀಗೆಯೇ ಎಂದು ಹೇಳುವುದು ಕಠಿನ
ಆದುದರಿಂದ ಉಕ್ಕಿದ ನೀರು ಕಟ್ಟವನ್ನು ಮೀರಿ ಹರಿಯದಂತೆ, ಸೊಟರೆಗ
ಳಲ್ಲಿ ಹರಿದು ಕಟ್ಟ ಒಡೆಯದಂತೆ ಒಂದು ಮಗ್ಗುಲಲ್ಲಿ ದೊಡ್ಡ ಬಾಂದ್ ತೆರೆ
ದಿಡುವರು. ಕೆಲವು ಕಲ್ಲುಗಳನ್ನುರುಳಿಸಿ ಆ ಬಾಗಿಲನ್ನು ದೊಡ್ಡದನ್ನಾಗಿಯೂ
ಮಾಡಲು ಸಾಧ್ಯ. ಕಡು ಬೇಸಿಗೆಯಲ್ಲಿ ಚಿಕ್ಕದನ್ನಾಗಿಯು ಮಾಡುವರು.

ಮಳೆಗಾಲ ಆರಂಭವಾದಾಗ ಅಲ್ಲಲ್ಲಿ ಕಟ್ಟಿದ ಕಲ್ಲುಗಳನ್ನು ಹೊಳೆಗೆ ಉರು
ಳಿಸಿ ಬಿಡುವರು. ಉಳಿದ ಕಲ್ಲು ಮಣ್ಣುಗಳನ್ನು ಮಳೆಗಾಲದ ನೆರೆಯ
ನೀರು ಉಳಿಸುವುದಿಲ್ಲ. ಮತ್ತೆ ಬೇಸಿಗೆಗೆ ಮೊದಲಿನಂತೆ ಕಟ್ಟುವುದು ಮಲೆ
ನಾಡಿನ ಈ ಭಾಗದಲ್ಲಿ ನಡೆದು ಬಂದ ಪದ್ಧತಿ. ಗೋವಿಂದರಾಯರು ಇದನ್ನ
ರಿಯರು. ಆದರೆ ಜೋರ, ತುಕ್ರ, ಅಹ್ಮದರು ತಿಳಿಯದವರಲ್ಲ. ಕಟ್ಟ
ಮುಗಿದ ಮೇಲೆ ಸಂಜೆ ಹತ್ಯಾರುಗಳನ್ನು ಹೊತ್ತು ಮನೆಗೆ ಮರಳಿದಾಗ
“ಅಯ್ಯಾ, ಮುಂಜಾನೆಯೊಳಗೆ ನೀರು ಉಕ್ಕಿ ಮನೆಯ ಅಂಗಳದ ವರೆಗೆ
ಹರಿಯದೇ ಇರಲಿಕ್ಕಿಲ್ಲ” ಎಂದು ತಿಳಿಸಿದರು.

ಗೋವಿಂದರಾಯರು ರಾತ್ರಿ ಊಟವಾದ ಮೇಲೆ ಲಾಟಾನು ಹಿಡಿದು
ಕೊಂಡು ಅಂಗಳದ ಅಂಚಿಗೆ ಬಂದು ಇಣಿಕಿದರು. ಆ ಮೇಲೆ ತೋಡಿಗೆ
ಇಳಿದು ನೋಡಿದರು. ಸ್ವಲ್ಪ ತೋಡಿನಲ್ಲೇ ನಡೆದರು. ಇಲ್ಲ. ನೀರು ಬಂದಿ
ರಲಿಲ್ಲ. ಅವರ ಲವಲವಿಕೆ ಕಂಡು ಸೀತಮ್ಮನವರಿಗೆ ಸ್ವಲ್ಪ ಸಿಟ್ಟು ಬಂದಿತು
“ಕತ್ತಲೆಗೆ ಯಾಕೆ ಅಲ್ಲೆಲ್ಲ ಕಾಲಿಡುತ್ತೀರಿ? ತೋಡಿನಲ್ಲಿ ಹಾವು ಗೀವು ಇದ್ದೀತು
ಬನ್ನಿ. ಮುಂಜಾನೆ ನೋಡೋಣ. ನೀರು ಬಂದರೆ ಭೂಮಿಯೇ ಎಲ್ಲವನ್ನೂ
ಕುಡಿದು ಬಿಡಲಿಕ್ಕಿಲ್ಲ ”ಎಂದು ಜಬರಿಸಿದರು. ರಾತ್ರಿ ಮಲಗುವಾಗಲೂ
ಮುಖಮಂಟಪಕ್ಕೆ ಬಂದು ಮೆಲ್ಲಗೆ ಕಿವಿ ನಿಗುರಿಸಿದರು. ಸುಳು ಸುಳು ನೀರು
ಹರಿವ ಶಬ್ದ ಆಲಿಸಲು ಅವರ ಆತುರ. ಆದರೆ ಕಾಲಿವೆಯಲ್ಲಿ ನೀರು ಹರಿ
ದಾಗ ಅದರ ಸುಳುವೇ ಹತ್ತುವುದಿಲ್ಲ. ಸುಳುವಿಲ್ಲದೆ ಅದು ರಾತ್ರಿ ಹರಿದು
ಬಂತು. ಮುಂಜಾನೆ ಸೀತಮ್ಮನವರು ಎದ್ದು ಬಂದಾಗ ಕಾಲಿವೆಯಲ್ಲಿ ನೀರು
ತುಂಬಿ ಗದ್ದೆಗಳಿಗೆ ಹರಿಯುತಿತ್ತು. ಅನೇಕ ಗದ್ದೆಗಳಲ್ಲಿ ನೀರು ಪಾದ ಮುಳು
ಗುವ ವರೆಗೆ ಏರಿತ್ತು. ಮೇಲಿನ ಗದ್ದೆಗಳಿಂದ ಕೆಳಗಿನ ಗದ್ದೆಗಳಿಗೆ ಒರತೆಯು
ಪಸೆಯೂ ಬಂದಿತ್ತು. ಬಾವಿಯಲ್ಲೂ ಬಾಗೀರಥಿ ಬಂದಂತೆ ಬಿಳಿನೀರು. ತರ
ಕಾರಿ ದರಗಳೆಲ್ಲ ಅರ್ಧ ಮರ್ಧ ತೊಯ್ದಿದ್ದುವು. ಹೊಸದಾಗಿ ಹಾಕಿದ
ಸವುತೆಯ ದರಗಳಲ್ಲೂ ನೀರು. ಸೀತಮ್ಮನವರ ಆನಂದಕ್ಕೆ ಪಾರವಿತಲಿಲ್ಲ.
ಇನ್ನೂ ಮಲಗಿದ್ದ ಗಂಡನನ್ನು ಎಚ್ಚರಿಸಿ, “ಏಳಿ ಏಳಿ ಬಾಗಿಲಿಗೆ ಬಂದಿ
ದ್ದಾಳೆ ನೇತ್ರಾವತಿ. ನಿಮಗೆ ಇನ್ನೂ ಬೆಳಗಾಗಿಲ್ಲ. ಇನ್ನು ಸ್ನಾನಕ್ಕೆ ಬಾವಿ
ಯಿಂದ ನೀರು ಸೇದಿ ಸೇದಿ ಬಿಸಿಮಾಡುವ ಕಷ್ಟತಪ್ಪಿತು ನನಗೆ. ಕಾಶಿ, ಬಾಗೀ

ರಥಿ ಹರಿ ಎಂದು ಈ ತೋಡಿನ ನೇತ್ರಾವತಿ ನೀರನ್ನೇ ತಲೆಯ ಮೇಲೆ ಸುರಿದುಕೊಂಡರಾಯ್ತು ತಂಬಿಗೆಯಿಂದ" ಎಂದು ಎಬ್ಬಿಸಿದರು.

"ಹೌದೆನೇ, ಬಂತಾ? ಆಂ. ಬಂತಾ? ನಾನು ಬಿಸಿಲಿಗೆ ಮನೆಯಿಂದ ಕಟ್ಟಕ್ಕೆ, ಕಟ್ಟದಿಂದ ಮನೆಗೆ ಓಡಾಡಿದ್ದುದರಿಂದ ಒಳ್ಳೇ ನಿದ್ದೆ ಬಂದಿತ್ತು ನೋಡು. ಬೆಳಗಿನ ಜಾವಕ್ಕೆ ನೀರು ಹರಿದು ಬಂದುದು ಗೊತ್ತೇ ಆಗಲಿಲ್ಲ. ಬಂತಾ? ಕಾಲಿವೆ ತುಂಬ ಹರಿದು ಬಂತಾ? ಅಥವಾ ದಾರ್ನ್ನೀರಾ? '' ಎಂದು ನೂರೆಂಟು ಮಾತನಾಡುತ್ತ ಹೊದ್ದ ದುಪ್ಪಟಿಯನ್ನೇ ಮೈಮೇಲೆ ಹಾಕಿಕೊಂಡು ಅಂಗಳಕ್ಕೆ ಇಳಿದರು. ನೀರು ಗದ್ದೆಗಳಿಗೆ ಹರಿಯುತ್ತಿರುವುದನ್ನು ಕಂಡು, "ಓಹೋಹೋ, ವ್ಯರ್ಥವಾಯಿತಲ್ಲ" ಎಂದು ಹಂಬಲಿಸಿದರು.

ಅವರ ಈ ಹಂಬಲಿಕೆಯನ್ನು ಕೇಳಿ ಸೀತಮ್ಮನವರಿಗೆ ನಗು ಬಂದಿತು. "ವ್ಯರ್ಥ ವಾಯಿತು, ವ್ಯರ್ಥ ವಾಯಿತು ಎಂದನ್ನುತ್ತಿದ್ದೀರಲ್ಲ. ನೀರಿಗೂ ಕ್ರಯ ಕೊಟ್ಟದೆಯೇನು? ಒಂದು ಕಡೆಯಿಂದ ಬಂತು. ಒಂದು ಕಡೆಯಿಂದ ಹರಿಯಿತು. ಗದ್ದೆಗಳಿಂದ ಹರಿದು ಹರಿದು ಮತ್ತೆ ಇಲ್ಲಿ ನದಿ ನೀರು, ನದಿಗೆ ಸೇರುತ್ತದೆ." ಎಂದು ಅವರು ವ್ಯಂಗ್ಯ ಮಾತುಗಳನ್ನಾಡಿದರು.

"ಸಾಕು. ಸಾಕು. ನಿನ್ನ ಮಾತು." ಎಂದು ಅವರನ್ನು ತಡೆದ ಗೋವಿಂದರಾಯರು, "ಏ ಮಾಣಿ ಮೋಹನಾ, ನೀನು ಊಟ ಮಾಡುವ ಬಟ್ಟಲುಗಳನ್ನು ತಾ. ಬೇಗ ಬಾ ಬೇಗ." ಎಂದು ಕೂಗಿದರು. ಅವನು ಕಂಚಿನ ಬಟ್ಟಲುಗಳನ್ನು ಹಿಡಿದುಕೊಂಡು ಅಂಗಳಕ್ಕೆ ಹಾರಿ, "ಯಾಕಪ್ಪಯ್ಯ? ಯಾಕೆ? " ಎಂದು ಕೇಳುತ್ತ ಓಡಿ ಬಂದ. "ಹೇಳುತ್ತೇನೆ" ಎಂದುತ್ತರವಿತ್ತು ಗೋವಿಂದರಾಯರು ಒಂದು ಬಟ್ಟಲನ್ನು ಎಳೆದುಕೊಂಡರು. ತೋಡಿನಲ್ಲಿಳಿದು ಬಟ್ಟಲಿನಿಂದ ನೀರನ್ನು ಇಕ್ಕೆಲಗಳಲ್ಲಿ ನಟ್ಟ ತುಳಸಿ, ಮೆಣಸು, ಮಲ್ಲಿಗೆ ಗಿಡಗಳಿಗೂ ಸುವರ್ಣ ಗಡ್ಡೆ, ತುಪ್ಪ ಗೆಣಸುಗಳ ದರಗಳಿಗೂ ಎರೆದರು. " ತೋಡಿನಲ್ಲಿ ನೀರು ಹರಿದಾಗ ಆಚೆ ಈಚೆ ಬೆಳೆದ ಗಿಡಗಳಿಗೆ ಪಸೆ ಆಗುವುದಿಲ್ಲವೇನು? ಅವುಗಳ ಬೇರು ಪಾತಾಳಕ್ಕೂ ಇಳಿಯುತ್ತದೆ. ಮುಂಜಾನೆ ಎದ್ದ ಕೂಡಲೇ ಬೆನ್ನು ಬಗ್ಗಿಸಿಕೊಂಡು

ಯಾಕೆ ಅವುಗಳಿಗೆಲ್ಲ ಶೋಡಷೋಪಚಾರ? ಮತ್ತೆ ಬೆನ್ನು ನೋವು, ಅಲ್ಲಿ ನೋವು, ಇಲ್ಲಿ ನೋವು ಎಂದೆನ್ನುತ್ತೀರಿ.”ಎಂದು ಸೀತಮ್ಮ ಹೇಳಲು ಬಂದರು.

“ನೀನು ಬರೀ ಮಾತಿನಲ್ಲೇ ಮುಗಿಸಿದಿ. ಅಷ್ಟು ಬೋಗರದುಃಖ ವಿದ್ದವಳು ಬಟ್ಟಲು ಹಿಡಿ. ನೋಡೋಣ” ಎಂದರು ಗೋವಿಂದರಾಯರು

‘ಆ ತುಳಸಿ ಗಿಡಗಳಿಗೆಲ್ಲ ನಾನು ನೀರೆರೆಯುತ್ತೇನೆ ಈಗ! ನನಗೆ ಬೇರೆ ಕೆಲಸವಿಲ್ಲೇನು? ಆ ಕಸಿ ಗಿಡಗಳಿಗಾದರೂ ನೀರೆರೆಯುವುದರಲ್ಲಿ ಅರ್ಥ ವಿದೆ. ನೀರು ಆ ಎತ್ತರ ಸ್ಥಳಕ್ಕೆ ಹರಿಯುವುದಿಲ್ಲ. ಇವುಗಳಿಗೆಲ್ಲ ಯಾವ ಕಿಸು ಭಾಗ್ಯಕ್ಕೆ?”

“ಅದನ್ನಾದರೂ ಮಾಡು ನೋಡೋಣ” ಎಂದು ಹೇಳಬೇಕೆಂದು ಗೋವಿಂದರಾಯರು ಬಾಯಿ ತೆರೆಯುವವರಿದ್ದರು. ಆದರೆ ಅಷ್ಟರೊಳಗೆ ಸೀತಮ್ಮನವರು ಕೊಡವನ್ನು ತೋಡಿನ ನೀರಿನಲ್ಲಿ ಮುಳುಗಿಸಿ, ಕೂಸಿನಂತೆ ಸೊಂಟದ ಮೇಲಿಟ್ಟುಕೊಂಡು ಕಸಿಗಿ ಗಿಡಗಳ ಹೊಂಡಗಳಿಗೆರೆದರು. ನೀರಿನ ಕೋಲಾಹಲ ವಾದುದರಿಂದ ಬೋರ ಬಂದೊಡನೆಯೇ ಕಟ್ಟದ ಬಾಂದ್ ಬಿಟ್ಟಲ್ಲಿ ಇನ್ನೂ ಕೆಲವು ಕಲ್ಲುಗಳನ್ನುರುಳಿಸಲು ತಿಳಿಸಿದರು. “ಸ್ವಲ್ಪ ನೀರು ಬಂದರೆ ಸಾಕು. ಕೈಕಾಲು ತೊಳೆಯಲು ತೋಡಿನಲ್ಲಿ ನೀರಿದ್ದರೆ ತತ್ಕಾಲ ಸಾಕು” ಎಂದವರು ಅವನನ್ನು ಕಟ್ಟಕ್ಕಟ್ಟಿದ್ದರು. ನೀರು ಹೆಚ್ಚು ಬೇಕೆಂದಾಗಲೂ ಕಲ್ಲುಗಳನ್ನು ಪುನಃ ಇಟ್ಟು ಬರುವುದು ಅವನ ಕೆಲಸ. ಈ ಕೆಲಸಕ್ಕೆ ತಾಸು ಹಿಡಿಯ ಬಹುದಾದರೂ ಬೋರನ ಹಳ್ಳಿ ತಾಸಿನ ಅವಧಿ ದೊಡ್ಡದು ನೀರು ಬೀಳುವಲ್ಲಿ ಬೀಳಿನ ಬಲೆಯನ್ನಿಟ್ಟು ಮೀನು ಹಿಡಿಯುವುದರಲ್ಲೂ ಸ್ವಲ್ಪ ವೇಳೆಯನ್ನು ಕಳೆಯುತ್ತಾನೆ. ಪೊದೆ ಪೊದರುಗಳಲ್ಲಿ ಮೊಲವಾಗಲೀ ಬೆರಿಂಕವಾಗಲೀ ನೆಗೆದರೆ ಅದರ ಬೆನ್ನು ಹಿಡಿಯಲು ಯತ್ನಿಸುವುದೂ ಉಂಟು. ತೋಡಿನ ಇಬ್ಬದಿಗಳಲ್ಲಿ ಮಣ್ಣು ಕೊರೆದು ಅಡಗಿದ ದೆಂಜಿಗಳನ್ನು ಹಿಡಿಯುವುದೂ ಇದೆ. ಹೀಗಾಗಿ ಮುಂಜಾನೆ ಕಟ್ಟಕ್ಕೆ ಅವನನ್ನು ಕಳಿಸಿದರೆ ಅವನು ಹಿಂತಿರುಗುವುದು ಮಧ್ಯಾಹ್ನ. ಮಧ್ಯಾಹ್ನ ತೆರಳಿದರೆ ಸಾಯಂಕಾಲವೇ. “ಕಟ್ಟಕ್ಕೆ ಹೋಗಿಬರಲು ನಿನಗೆ ಇಷ್ಟು ಹೊತ್ತಾ? ನಾನು ಮುದುಕ ಘಟ್ಟ ಹತ್ತುತ್ತಿದ್ದೆ. ಹೇಗಾದರೂ ಮಾಡಿ ಮೂಡಿದ ಸೂರ್ಯ ಮುಳುಗುವ ವರೆಗೆ ಕಾಲಾಡಿಸಿ ಬಿಡು” ಎಂದು ಗೋವಿಂದರಾಯರು ಒಮ್ಮೊಮ್ಮೆ ಸಿಟು

ಮಾಡುತಿದ್ದುದೂ ಉಂಟು.

ಈ ರೀತಿ ದಿನೇ ದಿನೇ ಮೂಡಿದ ಸೂರ್ಯ ಕಂತಿದ. ದಿನಗಳ ಹಿಂದೆ ವಾರಗಳು ಮುಳುಗಿದುವು. ಮಾಸಗಳು ಉರುಳಿದುವು. ವಸಂತ ಮಾಸವೂ ತಲೆದೋರಿತು. ಕಾಡುಕೋಳಿಗಳು ಮುಂಜಾನೆ ರೆಕ್ಕೆಗಳನ್ನು ಪಟ ಪಟ ಬಡೆದು ಕೆಲೆದುವು. ಟಿಟ್ಟಿಭ "ಟೀಂ, ಟೀಂ," ಎಂದು ಮಾರು ದೂರ ಹಾರಿ ಮತ್ತೆ ನೆಲದಲ್ಲಿ ತನ್ನ ಕೊಕ್ಕರೆಯುದ್ದದ ಹಳದಿ ಕಾಲುಗಳನ್ನು ಎತ್ತಿ ಹಾಕುತ್ತ ಗಾಂಭೀರ್ಯದಿಂದ ನಡೆಯಿತು. ಪೊದೆ ಪೊದರು ಮರ ಗಿಡಗಳ ಕೆಳಗೆ ಬಿಜಕ್ರ ಪಕ್ಷಿಗಳು ಬೆರೆ ಬೆರೆ ಅರಚುತ್ತ ತರಗೆಲೆಗಳನ್ನು ಕಾಲು ಗಳಿಂದ ಕೆದರಿದುವು. ಮರಗಳ ರೆಂಬೆಗಳಲ್ಲಿ ನಾನಾ ವರ್ಣದ ಹೊಂಬಣ್ಣದ ಹೆಸರಿಲ್ಲದ ಹೆಸರೇ ಅರಿಯದ ಹೊಸ ಹೊಸ ಹಕ್ಕಿಗಳು ಹೆಸರು ಹೇಳಿ ಕರೆ ದುವು ಒಂದನ್ನು ಇನ್ನೊಂದು. ಹುಲ್ಲು ಮಲ್ಲಿಗೆ, ಮಾವು ಮೊದಲಾದವುಗಳೂ ಹೂತುವು. ಹಸುರು ಎಲೆಗಳ ಮಧ್ಯೆ ಬಿಳಿ, ಕೆಂಪು, ಹಳದಿ, ನೀಲ ಹಕ್ಕಿಗಳು ಕೂಳಿತಂತೆ ಹೂಗಳೂ ಅರಳಿದುವು. ಶೇವಂತಿ, ಬಯುಮಲ್ಲಿಗೆ, ಗೊಂಡೆಮಲ್ಲಿಗೆ ಗೋರಟೆ, ರತ್ನಗಂಧಿಗಳಿಗೆಲ್ಲ ಬಿಳಿ, ಹಳದಿ, ಕಿತ್ತಳೆ ವರ್ಣಗಳ ಬೆಡಗು. ಜಾಜಿ ಗುಂಡುಮಲ್ಲಿಗೆ, ಗುಲಾಬಿ, ಪಾರಿಜಾತಗಳಿಗೆ ಪರಿಮಳ ಬಹಳ. ಹಾತೆ ಗಳು ಬಣ್ಣಕ್ಕೆ ಮೈಸೋತು ಎರಗಿ ಮಧು ಹೀರಿದರೆ,ಸುವಾಸಿನಿಯ ಸುತ್ತಲೂ ತುಂಬಿ ನಾದಲೋಲನಾಗಿ ನಲಿಯುತ್ತದೆ. ಮರಗಳ ಎಲೆಗಳ ಎಡೆಯಲ್ಲಿ ಅವಿತ ಕೋಗಿಲೆಗಳು 'ಕೂಹು ಕೂಹು" ಎಂದು ಉಲಿದು ಧ್ವನಿ ಗೂಡಿಸುತ್ತವೆ.

ಈ ಹಿಮ್ಮೇಳಕ್ಕೆ ಸರಿಯಾಗಿ ಕಾಲಹೆಜ್ಜೆಗಳನ್ನಿಕ್ಕುತ್ತ ಅಂಗಳಕ್ಕೆ ಬಂದ ಸೀತಮ್ಮನವರು "ಕೂಹು, ಕೂಹು'' ಎಂದು ಕರೆವ ಸ್ವರಗಳ ಕಡೆ ತಿರುಗಿ, " ಅದು ಯಾವ ಪಕ್ಕಿ? ಮಲೆನಾಡಿಗೆ ಬಂದ ಮೇಲೆ ಕಾಗೆ ಕಂಡು ದುದೇ ಅಪರೂಪ. ಇದು ಕಾಗೆಯ ಮರಿಯೇನು? ಅಥವಾ ಘಟ್ಟ ಕಾಗೆ ಯಂತೆ ಮಲೆ ನಾಡಿನ ಈ ಕಾಗೆ ಇಷ್ಟೇ ಚಿಕ್ಕದಾ.?" ಎಂದು ಕೇಳಿದರು.

ತೋಟದ ಬದಿಯಲ್ಲಿ ತುಳಸಿ ಮತ್ತು ಹೂಗಳನ್ನು ಕೊಯ್ದು ಹರಿ ವಾಣಕ್ಕೆ ಹಾಕುತಿದ್ದ ಗೋವಿಂದರಾಯರು ಗಹಗಹಿಸಿ ನಕ್ಕರು. "ನೀನು ಮೂಢಳೆಂದರೆ ಮೂಢಳು. ಹೆಂಗಸರ ಬುದ್ಧಿ ಮೊಣಕಾಲು ಕೆಳಗೆ ಎಂದುದ್ದು

ಸುಳ್ಳಲ್ಲ. ಅದು ಕೋಗಿಲೆ. ಕೋಗಿಲೆ ಕಾಗೆಯಾಗಿಯಲ್ಲ. ಮರಿ ಸಾಕುವುದು ಮಾತ್ರ ಕಾಗೆಯೇ. ಆದರೆ ಕಾಗೆ ಕಾಗೆಯೇ. ಕೋಗಿಲೆ ಕೋಗಿಲೆಯೇ" ಎಂದು ಅವರು ತಿಳಿಸಿದರು.

"ಕೋಗಿಲೆಯೆಂದರೆ ಆಯಿತು. ಅದಕ್ಕೆ ಇಷ್ಟೆಲ್ಲ ರಾಮಾಯಣ ಯಾಕೆ ಬೇಕು? 'ನೀನು ಮೂರ್ಖಳು! ಹೆಂಗಸರಿಗೆ ಬುದ್ಧಿಯಿಲ್ಲ" ಎಂದು ಮೂದಲಿಸ ಬೇಕೇಕೆ? ನಾನು ಇಷ್ಟರ ವರೆಗೆ ನೋಡಿರಲಿಲ್ಲ. ಹೌದು. ನಾನು ಮೂಢಳು! ನಿಮ್ಮ ಹಾಗೆ ಶಾಲೆಗೆ ಹೋಗಿಲ್ಲ." ಎಂದು ಸೀತಮ್ಮನವರು ಸಿಡಿನುಡಿದರು.

ಗೋವಿಂದರಾಯರು ವಿನೋದ ಲಹರಿಯಿಂದಲೇ ಹೇಳಿದರು. "ಮೋಸ ವಾಯ್ತು. ನಿಮ್ಮಪ್ಪ ಶಾಲೆಗೆ ಕಳಿಸಬೇಕಿತ್ತು! ಮೋಸ ಮಾಡಿದ! "

ತಮ್ಮ ತಂದೆಯನ್ನು ನಿಂದಿಸಿದುದರಿಂದ ಸೀತಮ್ಮನವರಿಗೆ ಇನ್ನಷ್ಟು ರೇಗಿತು. " ಹೌದು. ನಮ್ಮಪ್ಪ ಮೋಸ ಮಾಡಿದ. ಶಾಲೆಗೆ ಕಳಿಸಲಿಲ್ಲ. ಆದರೆ, ನೀವು ಕಳಿಸಬಹುದಿತ್ತಲ್ಲ! ನನಗೆ ಲಗ್ನವಾದಾಗ ಮೂವತ್ತು ವರುಷದ ದಿಗ್ಗಜ ದಿಮ್ಮಿಯಾಗಿರಲಿಲ್ಲ. ಇನ್ನೂ ಪ್ರೌಢೆ ನೆರೆದಿರಲಿಲ್ಲ ನಾನು. ಕಳಿಸ ಬೇಕಿತ್ತು ಶಾಲೆಗೆ. ಯಾಕೆ ಕಳಿಸಲಿಲ್ಲ ಈಗ ಇಷ್ಟು ಮಾತನಾಡುವವರು?" ಎಂದು ಅವರು ಪ್ರಶ್ನಿಸಿದರು.

" ನನಗೂ ಗೊತ್ತಾಗಲಿಲ್ಲ. ಆಗ ಅಷ್ಟು ಹೊಳೆಯಲಿಲ್ಲ. ಥರ್ಡ್ ಫಾರ್ಮ್ ವರೆಗಾದರೂ ಓದಿಸಿ ಬಿಟ್ಟಿದ್ದರೆ ಒಳ್ಳೆಯದಾಗುತಿತ್ತು. ಮಿಸ್ಟ್ರೆಸ್ ಕೆಲಸವನ್ನೂ ನೀನು ಮಾಡುತ್ತಿದ್ದಿ. "ಕ್ಯಾಟ್ ಮ್ಯಾಟ್ ಕೈಟ್ ಕಾರ್ಡ್" ಎಂದು ಕಲಿಸಲು ಮಿಸ್ಟ್ರೆಸ್‌ನವರು ಟ್ರೈನ್ಡ್ ಆಗಬೇಕೆಂತಲೂ ಇಲ್ಲ. ನೀನು ಸಂಪಾದನೆ ಮಾಡಬಹುದಿತ್ತು " ಎಂದು ಮೀಸೆಯೊಳಗೆ ಅವರು ನಕ್ಕರು.

"ಮಿಸ್ಟ್ರೆಸ್ ಆಗುತಿದ್ದೆ ಅಥವಾ ಕಲೆಕ್ಟರ್ ಆಗುತ್ತಿದ್ದೆ. ಆದರೆ, ನೀವು ಕಳಿಸಲಿಲ್ಲವಲ್ಲ. ಶಾಲೆಗೆ ಕಳಿಸುವುದಿರಲಿ, ಒಂದು ದಿನ ಉಡುಪಿ ಪೇಟೆಗೆ ಅತ್ತೆಯವರೊಡನೆ ಹೊರಟರೆ ಮೆಲ್ಲಗೆ ಸೆರಗು ಹಿಡಿದೆಳೆದು ಕಣ್ಣು ಚಿವುಟು ತಿದ್ದಿರಿ. "ಅತ್ತೆ ಹೋಗಲಿ. ನೀನು ಇರೆ. ಇರೆ " ಎಂದು ಗುಟ್ಟಾಗಿ ಹೇಳು ತಿದ್ದುದು ಯಾರು? ಒಂದು ಕ್ಷಣ ತಪ್ಪಿದರೆ ಸರಿ, ಏನೆಲ್ಲ ರುಂಭಾಟ ನಿಮ್ಮದು? " ನಿನ್ನ ಕೆನ್ನೆ ಗುಲಾಬಿ ಎಸಳೇ ಸೀತಾ? ನಿನ್ನ ನಗೆ ಮಲ್ಲಿಗೆ ನೋಡೆ. ನೀನು

ಹೀಗೆ ಸೀತಾ. ನೀನು ಹೀಗೆ ಸೀತಾ" ಎಂದು ದಿನಕ್ಕೆ ಸಾವಿರ ಸಲ "ಸೀತಾ ಸೀತಾ" ಎಂದು ಕರೆದು ಒಳಹೊರಗೆ ಕುಣಿಯುತ್ತಿದ್ದುದು ಯಾರು? ಒಂದು ದಿನ ಬಿಟ್ಟಿರುತ್ತಿದ್ದಿಲ್ಲ. ಆಗ ಮಾಡಿದ್ದೆಲ್ಲ ಮರೆತು ಹೋಯ್ತಂತೆ [illegible] ರಾಯರಿಗೆ. ಲಗ್ನವಾದ ಮೇಲೆ ಶಾಲೆಗೆ ಕಳಿಸುತ್ತಿದ್ದರಂತೆ ಶಾಲೆಗೆ? ಮಿಸ್ಟ್ರೆಸ್ ಆಗುತಿದ್ದೆನು! ಮಿಸ್‌ಟ್ರೆಸ್ ಆಗುತ್ತಿದ್ದರೆ ಯಾವ ಮಾಸ್ತ್ರ ಮೇಲಾದರೂ ಸಂಶಯಪಡದೆ ಇರುತ್ತಿದ್ದಿರಾ? "ನೀ ಅವನನ್ನು ನೋಡಿದೆ ಯಾಕೆ? ಇವನೊಡನೆ ಏನು ಕೆಲಸವಿತ್ತು? ಗುಸುಗುಸು ಏನು ಮಾತ ನಾಡಿದಿ?" ಎಂದು ದಿನಂಪ್ರತಿ ನೂರೆಂಟು ಜಗಳ ತೆಗೆಯುತ್ತಿದ್ದಿರಿ. ಅದೊಂದು ಬಾಕಿ" ಎಂದು ಹುಸಿ ಮುನಿಸು ತೋರಿಸಿದರು ಸೀತಮ್ಮ.

ಈ ಹಳೇ ಕತೆ ಕೇಳಿದ ಗೋವಿಂದರಾಯರಿಗೆ ಹೃದಯದೊಳಗೆ ನೀರಿನ ಕಾಲಿವೆಯಂತೆ ಒಲವು ಹರಿದು ಬಂತು. ಅದನ್ನು ಬಹಿರಂಗ ಗೊಳಿಸದೆ "ಹೌದೆನೇ ನಾನು ಕುಣಿಯುತಿದ್ದೆ! ನೀನು ದೊಡ್ಡ ರಂಭೆ!" ಎಂದು ಒಂದು ವಸಂತದ ವಾಗ್ಬಾಣವನ್ನೆಸೆದರು.

"ಆಗ ನಿಮ್ಮ ಕಣ್ಣಿಗೆ ರಂಭೆಯಾಗಿಯೇ ತೋರುತಿದ್ದೆ. ಆದುದರಿಂ ದಲೇ ನಾಲ್ಕಾರು ಮಕ್ಕಳುಗಳಾದುವು. ಆದುದೆಲ್ಲ ಆಯಿತು. ಇನ್ನೇ ನಾಗಬೇಕು? ನಿಮ್ಮ ಕಣ್ಣಿಗೆ ಈಗ ಮುದಿ ಗೂಬೆ"

"ನನಗಿಂತ ಚಿಕ್ಕವಳು ಮುದುಕಿಯಂತೆ! ಮುದುಕನೆಂದು ನನ್ನನ್ನು ಕರೆದರೆ ಒಪ್ಪುವ ಮಾತು. ನೋಡು ಗಡ್ಡ ಮೀಸೆ ತಲೆಗಳೆಲ್ಲ ಹಣ್ಣಾ ಗಿವೆ. ಇದು ೧೯೩೬. ನನಗೀಗ ೫೫ ವರುಷ. ನಮ್ಮಪ್ಪಯ್ಯ ೬೦ಕ್ಕೇ ಕಣ್ಮುಚ್ಚಿದ್ದರು" ಎಂದರು.

" ಯಾಕೆ ಹಾಗೆಲ್ಲ ಮಾತನಾಡುತ್ತೀರಿ? ಉಡುಪಿಗೆ ರಾಜಾ ಬಂದಾಗ ಹಾಗೆಯೇ ಅಂದಿದ್ದಿರಿ. ಬಾಯಲ್ಲಿ ಶಕುನ ನುಡಿಯುತ್ತೀರೇನು? ಒಂದು ಗಳಿಗೆ ಕೆಟ್ಟದಿರುತ್ತದೆ. ಒಂದು ಗಳಿಗೆ ಒಳ್ಳೆಯದಿರುತ್ತದೆ. ನಿಮ್ಮೊಡನೆ ಅಧಿಕ ಪ್ರಸಂಗ ತೆಗೆದುದು ನನ್ನದೇ ತಪ್ಪು'' ಎಂದು ನುಡಿದು ಸೀತಮ್ಮ ಮನೆ ಯೊಳಗೆ ನುಸುಳಿದರು.

"ಒಳ್ಳೆ ಗಳಿಗೆ! ಕೆಟ್ಟಗಳಿಗೆ! ಬಟ್ಟಲು ತುಂಬಿದಾಗ ಸದ್ದಿಲ್ಲದೆ ಅದು ಮುಳುಗುವುದು" ಎಂದು ಮೆಲ್ಲನೆ ಅವರು ಪ್ರತಿನುಡಿದುದು ಸೀತಮ್ಮನವರಿಗೆ ಕೇಳಿಸಲಿಲ್ಲ.

ಆದರೆ, ಒಂದೆರಡು ದಿನಗಳ ಮೇಲೆ ಮುಂಜಾನೆ ಮೈ ಬಿಟ್ಟು ಕೊಂಡೇ ತುಳಸಿ ಹೂಗಳನ್ನು ಕೀಳುತಿದ್ದ ಗೋವಿಂದರಾಯರು, "ಛಳಿಯಾಗುತ್ತಿದೆ. ಛಳಿ" ಎಂದು ಅರ್ಧದಲ್ಲೇ ಮನೆಯೊಳಗೆ ಓಡಿ ಬಂದಾಗ ಸೀತಮ್ಮನವರ ಮೈ ಜುಂ ಎಂದಿತು. "ನನಗೆ ೫೯ ವರುಷ. ನಮ್ಮಪ್ಪಯ್ಯ ೬೦ಕ್ಕೆ ಕಣ್ಮುಚ್ಚಿದ್ದರು" ಎಂದು ಎರಡು ದಿನಗಳ ಹಿಂದೆ ಆಡಿದ್ದ ಮಾತು ಸೀತಮ್ಮನವರ ಕಿವಿಯಲ್ಲಿ ಪ್ರತಿಧ್ವನಿಸಿತು. "ಮೈ ಬಿಟ್ಟುಕೊಂಡೇ ಯಾಕೆ ಮುಂಜಾನೆ ಅದನ್ನು ಕೊಯ್ಯಲು ತೆರಳಿದಿರಿ? ದುಪ್ಪಟಿಯನ್ನಾದರೂ ಮೈ ಮೇಲೆ ಹೊದ್ದು ಕೊಳ್ಳಬಾರದಿತ್ತಾ?" ಎಂದು ಸೀತಮ್ಮನವರು ನುಡಿದು ಚಾಪೆ ಬಿಡಿಸಿ ಅದರೊಳಗಿದ್ದ ದುಪ್ಪಟಿಯನ್ನು ಹೊರಗೆ ತೆಗೆದು ಹೊದೆಸಿದರು. ಛಳಿ ತಡೆಯಲಾರದೆ ಗೋವಿಂದರಾಯರು ಒಲೆಯ ಮುಂದೆ ಬಂದು ಕುಳಿತರು. ಆದರೆ ತಡೆದು ಕೊಳ್ಳಲು ಸಾಧ್ಯವಾಗಲಿಲ್ಲ. ಬೇಸಿಗೆಯಲ್ಲಿ ಛಳಿ ಛಳಿ ಎಂದು ಅವರು ಮೈ ಮುದ್ದೆ ಮಾಡುತಿದ್ದುದನ್ನು ಕಂಡು ಪ್ರಾಯಶಃ ಜ್ವರದ ಲಕ್ಷಣವೆಂದರಿತರು. ಮಲಗಿ ಕೊಳ್ಳಲು ಚಾಪೆಯನ್ನು ಬಿಡಿಸಿದರು. ದುಪ್ಪಟಿ ಹೊದೆಸಿದರೂ ಮೈ ಕೈ ನಡುಗುವುದು ನಿಲ್ಲಲಿಲ್ಲ. "ಕಂಬಳಿ ತರಲು ರಾಜನೊಡನೆ ಹೇಳಬೇಕೆಂದಿದ್ದೆ. ಮಾಣಿ ಆಳುಗಳಿಗೆ ದುಡ್ಡು ಪೂರಾ ಕೊಟ್ಟಿಲ್ಲ. ಅವನ ಒದ್ದಾಟ ನೋಡಲಾರದೆ ಕಂಬಳಿ ತರ ಹೇಳಲು ಬಾಯೇ ಬರಲಿಲ್ಲ" ಎಂದು ಮಲಗಿದಲ್ಲೇ ನುಡಿದರು. ಸೀತಮ್ಮನವರು ದುಪ್ಪಟಿಯ ಮೇಲೆ ತಮ್ಮ ಸೀರೆಗಳನ್ನು ಹೊದೆಸಿದರು. "ಇದೆಲ್ಲ ಎಷ್ಟು ಸಾಕು.? ನನ್ನನ್ನೊಮ್ಮೆ ಗಟ್ಟಿಯಾಗಿ ಹಿಡಿದುಕೋ ನೋಡೋಣ." ಎಂದು ಅವರು ಹೇಳಿದುದರಿಂದ ಸೀತಮ್ಮನವರು ಚಾಪೆಯ ಬಳಿಯಲ್ಲೇ ಮೊಣಕಾಲೂರಿ ಕುಳಿತು ಎರಡೂ ಕೈಗಳನ್ನು ಸುತ್ತಿ ಹಿಡಿದರು. ಸೀತಮ್ಮನವರ ಕೈ ಕಾಲುಗಳೂ ನಡುಗಿದುವು.

ಸ್ವಲ್ಪ ಹೊತ್ತಿನ ತರುವಾಯ ಮೈ ನಡುಕ ನಿಂತು ತಲೆ ನೋವು ಆರಂಭವಾಯಿತು. ಬೈರಾಸನ್ನು ತಲೆಗೆ ಬಿಗಿಯಾಗಿ ಕಟ್ಟಿ, "ಹಣೆಗೆ

ಕಳ್ಳಿಯ ಲೇಪ ಹಚ್ಚುತ್ತೇನೆ. ತಡಿಯಿರಿ" ಎಂದು ಸೀತಮ್ಮ ಹೇಳಿ, "ಮೋಹನ ಅಗಳಿನ ಮೇಲೆ ನೆಟ್ಟ ಒಂದು ಕಳ್ಳಿ ತುಂಡು ಕಡಿದು ತಾ. ಬೇಗ" ಎಂದವ ನನ್ನು ಅಟ್ಟಿದರು. ಕಳ್ಳಿಯ ಮುಳ್ಳು ಸವರಿ ಅದನ್ನು ಸುಡಲು ಒಲೆಯ ಕೆಂಡದಲ್ಲಿ ಕೆಡೆದರು. ಅದರ ಸಿಪ್ಪೆ ಬಾಡಿದ ಮೇಲೆ ಹೊರಗೆ ತೆಗೆದು ಅಡ್ಡಗಲ್ಲಿನ ಮೇಲಿಟ್ಟು ಗುದ್ದಿ ರಸ ಹಿಂಡಿದರು. ಸ್ವಲ್ಪ ಸಾಸಿವೆಯನ್ನು ಹಾಕಿ ಆ ರಸದಲ್ಲಿ ಅರೆದು ಸವುಟಿಗೆ ತುಂಬಿಸಿ ಮತ್ತೆ ಕುದಿಸಿ ತಂದರು. ಈ ಕಿವಿಯಿಂದ ಆ ಕಿವಿಯ ವರೆಗೆ ಬಿಸಿ ಬಿಸಿ ಲೇಪ ಬಳಿದಾಗ "ಅಮ್ಮಾ, ಅಮ್ಮಾ" ಎಂದು ಧ್ವನಿ ತೆಗೆದರು ಗೋವಿಂದರಾಯರು. ಹಣೆ ಮುಟ್ಟಿದ ಸೀತಮ್ಮನವರಿಗೆ ಒಲೆಗೆ ಕೈ ಯಿಟ್ಟಂತಾಯಿತು. ದುಪ್ಪಟಿಯೊಳಗೆ ಕೈ ತಳ್ಳಿ ಎದೆಯನ್ನು ಸ್ಪರ್ಶಿಸಿದರು. ಎದೆಯೂ ಬಿಸಿ ಸುಡುತ್ತಿತ್ತು. "ಅಯ್ಯೋ, ನಿನ್ನ ಕೈ ಮಹಾ ಸಿಮ. ನೀರಿನ ಪಸೆ ಒರಸಿ ಕೊಂಡಿಲ್ಲ. ಐಸ್ ಐಸಿನ ಹಾಗಿದೆ. ತೆಗಿ! ತೆಗಿ!" ಎಂದು ಅವರು ಹೇಳಿದುದರಿಂದ ಸೀತಮ್ಮನವರು ಕೈ ಕೊಸರಿಕೊಂಡರು.

"ಒಂದು ಕಪ್ ಸ್ಟ್ರಾಂಗ್ ಕಾಫಿ ಮಾಡಿ ಕೊಡಲೆ?"

"ಹೇ, ಒಂದು ಕಪ್ ಯಾಕೆ? ಒಂದು ಗುಡಾಣ ಕೊಟ್ಟರೂ ಗಟ ಗಟ ಕುಡಿಯುತ್ತೇನೆ ನೋಡು"

ಕಾಫಿ ಕುಡಿದಾಗ ಗೋವಿಂದರಾಯರ ಕಣ್ಣುಗಳೆಲ್ಲ ಕೆಂಡದಂತಾಗಿದ್ದುವು. ಜ್ವರದ ತಾಪದಿಂದ ಅವರು ಏನೇನೋ ಮಾತನಾಡಲಾರಂಭಿಸಿದರು.

"ಹೌದೇನೇ, ನೀನು ಸಣ್ಣವಳಿದ್ದಾಗ ನನ್ನ ಹತ್ತಿರ ಬರಲು ಎಷ್ಟು ನಾಚುತಿದ್ದಿ. ಮುಟ್ಟಿದರೆ ಜಿಂಕೆಯಂತೆ ಜಿಗಿಯುತಿದ್ದಿ. ನನ್ನನ್ನು ಮುಟ್ಟಲೂ ಹೆದರುತ್ತಿದ್ದಿ. ಈಗ ನಿನಗೆ ಬಹಳ ಧೈರ್ಯ ಬಂದಿದೆ. ಹಣೆ, ಎದೆಗಳ ಮೇಲೆಲ್ಲ ಕೈ ಯ್ಯಾಡಿಸುತ್ತೀಯಲ್ಲ"

"ನೀವು ಸುಮ್ಮನೆ ಮಲಗಿ"

"ನಾನು ಮಲಗುತ್ತೇನೆ. ಮಲಗಿಯೇ ಇದ್ದೇನಲ್ಲ. ಅಲ್ಲ, ನಿನ್ನನ್ನು ಸೀತಾ ಎಂದು ಕರೆದರೆ ಸಿಟ್ಟಾದೀತಾ ಹೇಳು. ನೀನು ಸಣ್ಣವಳಿದ್ದಾಗ ಹಾಗೇ ಕರೆಯುತ್ತಿದ್ದೆ. ಮಕ್ಕಳು ಮರಿ ದೊಡ್ಡವರಾದ ಮೇಲೆ ಅವರ ಇದಿರು ಕರೆಯಲು ನಾಚಿಕೆಯಾಯ್ತು. ಬಿಟ್ಟು ಬಿಟ್ಟೆ. ಈಗ ಹತ್ತಿರ ಮಕ್ಕಳು ಯಾರೂ

ಇಲ್ಲ. ಮೋಹನ ಒಬ್ಬ ಇದ್ದಾನೆ. ಅದು ಇನ್ನೂ ಕೂಸು. ಸೀತಾ ಎಂದೇ ಕರೆಯುತ್ತೇನೆ. ಏನೇ?"

"ನೀವು ವಿಶೇಷ ಮಾತನಾಡ ಬೇಡಿ. ಜ್ವರ ಜೋರಾದೀತು''

"ಹೌದು. ಅದು, ಹೌದು. ಇದು ಸಾಮಾನ್ಯ ಜ್ವರವಲ್ಲ, ಜೋರಿನ ಜ್ವರ. ಹೌದೇನೇ, ಮೈ ಹಣೆಯೆಲ್ಲ ಸುಡುತ್ತದೆ. ಒಂದು ಕೈಯಲ್ಲಿ ನೀನು ಹಿಡಿ. ಇನ್ನೊಂದು ಕೈಯನ್ನು ಮೋಹನನ ಹೆಗಲಿನ ಮೇಲೆ ಹಾಕುತ್ತೇನೆ. ಆ ತೋಡಿನ ವರೆಗೆ ಕರೆದು ಕೊಂಡು ಹೋಗಿ ಬಿಟ್ಟು ಬಿಡಿ. ಕುತ್ತಿಗೆಯ ವರೆಗೆ ನೀರಿನಲ್ಲಿ ಮುಳುಗಿ ಕುಳಿತು ಬಿಡುತ್ತೇನೆ. ಒಂದು ನಿಮಿಷದಲ್ಲಿ ದೇಹ ತಣ್ಣಗಾಗುತ್ತದೆ. ಜ್ವರ ಇಳಿದು ಬಿಡುತ್ತದೆ."

"ಹಾ, ಹಾಗೆ ಮಾಡಿದರೆ ಆದೀತು! ನೀವು ಹುಚ್ಚುಚ್ಚು ಮಾತನಾಡುವುದನ್ನು ನಿಲ್ಲಿಸುತ್ತೀರಾ ಇಲ್ಲ.' ?

"ನಾನು ಹುಚ್ಚು ಮಾತನಾಡುತಿದ್ದೇನಾ? ನಾನು ಹುಚ್ಚನಾ? ಆ ಕಾಲ ಕಳೆದು ಹೋಯ್ತಲ್ಲೇನೇ ಸೀತಾ. ನಿನ್ನನ್ನು ನೋಡಿ ಹುಚ್ಚಾದ ಕಾಲ ಕಳೆಯಿತು. ಆಗ ಉಡುಪಿ ಮನೆಯ ಮುಂದಿದ್ದ ತೋಟಕ್ಕೆ ನಾನು ನಿನ್ನನ್ನು ಕರೆದೊಯ್ದು ತಾಳೆಯ ಬುಡದಲ್ಲಿ ಇಬ್ಬರೇ ಕುಳಿತು ಮಾತನಾಡುತಿದ್ದಾಗ "ನಿಮಗೆ ಹುಚ್ಚು" ಎಂದು ಹೇಳಿದ್ದಿ. ನೀನು ಅರ್ಧ ತಿಂದ ಗೇರು ಹಣ್ಣನ್ನು ಕಿತ್ತು ಕೊಂಡು ನಾನು ಬಾಯೊಳಗೆ ತುರುಕಿಸಿ ಕೊಂಡಾಗ, 'ನನ್ನ ಎಂಜಲು ತಿನ್ನುತ್ತೀರಾ? ನಿಮಗೆ ಹುಚ್ಚೇನು?" ಎಂದು ಕೇಳಿದಿ. "ಹೌದು'' ಎಂದು ನಾನು ನುಡಿದುದುಂಟು. ಅದೊಂದು ಕಾಲ, ಇದೊಂದು ಕಾಲ. ಆದರೆ ಈಗಲೂ ಆ ಹುಚ್ಚು ಹಿಡಿದಿದೆಯೆಂದು ಹೇಳುತ್ತೀಯಾ?"

ಏನುತ್ತರ ಕೊಡಬೇಕೆಂದು ಸೀತಮ್ಮನವರಿಗೆ ಹೊಳೆಯಲಿಲ್ಲ. ಅವರ ಕಣ್ಣುಗಳಲ್ಲಿ ನೀರು ಬಂದುವು. ಅದನ್ನು ಕಂಡು ಗೋವಿಂದರಾಯರು, "ಹಾ, ನಿನಗೆ ನನ್ನ ಮಾತಿನಿಂದ ನೋವಾಯಿತಾ?" ಎಂದು ಮಗುವಿನಂತೆ ಕೇಳಿದರು.

"ಇಲ್ಲ, ನೀವು ಬಹಳ ಮಾತನ್ನಾಡಬೇಡಿರಿ.''

"ಇಲ್ಲ, ಇಕೋ ನಾಲಿಗೆ ಕಚ್ಚಿ ಕೊಂಡೆ." ಎಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನಾದರು.

"ಜ್ವರ ಬಂದಾಗ ಕ್ವಿನಿನ್ ಗುಳಿಗೆಯನ್ನು ದಿನಂಪ್ರತಿ ಎರಡು ಸಲ ನುಂಗಲಿ" ಎಂದು ಹೇಳಿ ರಾಜಾ ಕೊಟ್ಟು ಹೋಗಿದ್ದ ಕ್ವಿನಿನ್ ಮಾತ್ರೆಗಳ ನೆನಪಾಯಿತು ಈಗ ಸೀತಮ್ಮನವರಿಗೆ. ಕಾಗದದಲ್ಲಿ ಮುದ್ದೆ ಮಾಡಿ, ಯಾವುದೋ ಬಟ್ಟೆಯ ಚುಂಗಿನಲ್ಲಿ ಅದನ್ನು ಕಟ್ಟಿದ್ದರು. ಹುಡುಕಿ ಹುಡುಕಿ ಬೇಸತ್ತಾಗ ಅವರ ಕೊಪ್ಪು, ಬುಗುಡಿ, ತಿರುಪು ಆಭರಣಗಳನ್ನಿಟ್ಟಿದ್ದ ಸಣ್ಣ ಪೆಟ್ಟಿಗೆಯಲ್ಲಿತ್ತು. ಬಿಸಿ ಹಾಲನ್ನು ಲೋಟಕ್ಕೆ ಬಸಿದು ಮಾತ್ರೆಯೊಂದಿಗೆ ಕೊಡಲು ಬಂದರು. ಗೋವಿಂದರಾಯರು ಮಾತ್ರೆಯನ್ನು ನಾಲಿಗೆಯಲ್ಲಿ ಹಾಕಿಕೊಂಡೊಡನೆಯೇ, "ಅಮ್ಮಾ, ಕಹಿ ವಿಷ. ಕಾರ್ಕೋಟಕನ ವಿಷ." ಎಂದು ಮೋರೆ ಮುದುಡಿ ಕಣ್ಮುಚ್ಚಿ ನುಂಗಿ, ಹಾಲು ಸುರಿದರು ಗಂಟಲೊಳಗೆ.

"ಸ್ವಲ್ಪ ಬೆಲ್ಲವಾದರೂ ಕೊಟ್ಟೆಯಾ ಮಾರಾಯಳೇ! ಮೊದಲೇ ಬಾಯಿ ಕಹಿ. ಇನ್ನು ಹೇಳುವುದೇ ಬೇಡ." ಎಂದು ಹೆಂಡತಿಯನ್ನಷ್ಟು ಟೀಕಿಸಿದರು.

"ಮೋಹನನಿಗಾದರೆ ಬೆಲ್ಲ ಬೇಕು. ನಿಮಗೇಕೆಂದು ಬಿಟ್ಟು ಬಂದೆ. ತೋಚಲಿಲ್ಲ" ಎಂದರು ಸೀತಮ್ಮ.

"ಕ್ವಿನಿನ್ ಗುಳಿಗೆ ಕೊಡಲು ತೋಚಿತು? ನೀನು ದೊಡ್ಡ ಡಾಕ್ಟರಳೇ ಆಗಿ ಬಿಟ್ಟೆ! ಇದು ಯಾವ ಜ್ವರ ಏನೆಂದು ಏನಾದರೂ ತಲೆ ಬುಡ ನಿನಗೆ ಗೊತ್ತುಂಟೋ? ಒಮ್ಮೆಗೇ ಕ್ವಿನಿನ್‌ಗೆ ಕೈಕೊಟ್ಟೆ! ಅಂ, ಎಲ್ಲಾದರೂ ಟೈಫೈಡ್ ಜ್ವರವಾದರೆ ಏನು ಗತಿ? ನಿನ್ನ ಕ್ವಿನಿನ್ ಮಾತ್ರೆಗಳಿಂದ ಆ ಜ್ವರ ಬಿಟ್ಟೀತೋ? ಆಯುಷ್ಯ ಗಟ್ಟಿ ಇದ್ದರೆ ಬದುಕಬಹುದೆನ್ನು. ಬೇಗನೆ ರಾಜಾ ಕೂಡಾ ಬಂದಾನು. ಶಿವರಾಯ ಬಂದಿದ್ದ. ಹರಿಯ ಮೋರೆ ಕಾಣದೆ ಮಾತ್ರ ಒಂದು ವರುಷ ವಾಗುತ್ತ ಬಂತು. ಪರೀಕ್ಷೆ ಮುಗಿದ ಕೂಡಲೇ ಅವನೂ ನಿಲ್ಲಲಾರ ಅಲ್ಲಿ. ಈಹೊತ್ತು ಅಥವಾ ನಾಳೆ ಬರಬಹುದು." ಎಂದು ಮತ್ತೆ ಗೋವಿಂದರಾಯರು ಜ್ವರದ ಕಾವಿನಿಂದ ನಾಲಿಗೆ ಸಡಿಲಿಸಿದರು.

ಸೀತಮ್ಮನವರ ಮನಸ್ಸಿಗೆ ಮುಳ್ಳಿನಿಂದ ಚುಚ್ಚಿದಂತಾದರೂ ಆ ನೋವನ್ನು ಸಹಿಸಿಕೊಂಡೇ ಉತ್ತರ ಕೊಟ್ಟರು. "ಟೈಫೈಡಲ್ಲ. ಟೈಫೈಡ್ ಆ ಜ್ವರವಾದರೆ ಮೈ ನಡುಗುತ್ತದೆಯೋ? ಬಾಯಾರಿಕೆಯೂ ಬಹಳವಿರುತ್ತದೆ ಆ ಜ್ವರಕ್ಕೆ. ಪೇಟೆಯಲ್ಲಾದರೆ ಯಾವ ಜ್ವರವೆಂದು ಹೇಳಲಿಕ್ಕೆಬಾರದು.

ಡಾಕ್ಟರ್ ಬೇಕು. ಈ ಪುಲಿಸಾಡಿನಲ್ಲಿ ಟೈಫೈಡ್ ಎಲ್ಲಿಂದ ಬಂತು? ನಿಮ್ಮದು ಬರಿಭ್ರಮೆ. ಕಟ್ಟಕಟ್ಟಲು ಬಿಸಿಲೆಂದಿಲ್ಲ ಗಾಳಿಯೆಂದಿಲ್ಲ, ಮುಂಜಾನೆ ಸಂಜೆ ಮನೆಯಿಂದ ಕಟ್ಟಕ್ಕೆ, ಕಟ್ಟದಿಂದ ಮನೆಗೆ ಕುಣಿದಿರಿ. ಬಾಯಾರಿಕೆ ಯಾದಾಗ ಹೊಳೆಯ ನೀರನ್ನೂ ಕೈಬೊಗಸೆಗಳಿಂದೆತ್ತಿ ಕುಡಿದಿರಿ. ಕಟ್ಟದ ಕೆಲಸ ಮುಗಿದ ಮೇಲಾದರೂ ಒಂದು ಕ್ಷಣ ಮನೆಯೊಳಗೆ ತಣ್ಣಗೆ ಕುಳಿತಿರಾ? ಅದೂ ಇಲ್ಲ. ಆ ಬಟ್ಟಲು ಹಿಡಿದುಕೊಂಡು ತೋಡಿನಲ್ಲಿ ನಿಂತು ತೇಪಿದಿರಿ. ಬೇಡ ಬೇಡವೆಂದರೂ ಬೋರ ತಂದು ಕೊಟ್ಟ ಹಲಸಿನ ಹಣ್ಣು ತಿಂದಿರಿ. ''

"ನಾನು ಎಷ್ಟು ತಿಂದೆನೇ? ರುಚಿ ನೋಡೋಣವೆಂದು ಒಂದೆರಡು ಸೋಳೆ ಬಾಯಿಗೆ ಹಾಕಿಕೊಂಡೆ. ಅಷ್ಟೆ. ''

"ವಿಷ ಎಷ್ಟು ಬೇಕು ಈ ಜೀವಕ್ಕೆ? ನೋಡಲು ಇಷ್ಟು ದೊಡ್ಡದಾಗಿ ಕಂಡರೂ ಒಳಗೇನಿದೆ? ಜೊಳ್ಳುಮರವಿದ್ದ ಹಾಗೆ! ನಾನು ಆಗಲೇ ಬೇಡ ಬೇಡವೆಂದು ಹೇಳಿದ್ದೆ. ನೀವು ಕೇಳಲಿಲ್ಲ. ವರುಷ ಕಳೆದ ಹಾಗೆ ನೀವು ಮೋಹನನಿಗಿಂತಲೂ ಕಡೆಯಾಗುತ್ತೀರಿ. ನನಗೆ ಗೊತ್ತುಂಟು. ಮತ್ತೆ ಏನಾದರೂ ಆದರೆ ರಾಜಾ ಎಲ್ಲಿ? ಹರಿ ಯಾಕೆ ಬರಲಿಲ್ಲ? ಇದು ಟೈಫೈಡ್ ಎಂದು ಹೇಳಿ ನಮ್ಮನ್ನು ಹೆದರಿಸಿ. ನನಗೆ ಕೈ ಕಾಲುಗಳೇ ಬರುವು ದಿಲ್ಲ" ಎಂದು ತೆರೆದ ಎದೆಯ ಮೇಲಿನ ಸೆರಗನ್ನು ಎಳೆದು ಕೊಂಡರು.

ಗೋವಿಂದರಾಯರು ದುಪ್ಪಟಿಯನ್ನು ಮೋರೆಗೂ ಎಳೆದುಕೊಂಡು ಗಪ್ ಚಿಪ್ ಮಲಗಿದರು. ರಾತ್ರಿ ಕೂಡಾ ಮೈಗೆ ಕೈಯಿಡುವಂತಿದ್ದಿಲ್ಲ. ಸೀತ ಮ್ಮನವರ ಎದೆ ಬಡಿತ ಹೆಚ್ಚಾಯ್ತು. ಮೋಹನ ಗಾಢನಿದ್ದೆ ಹೋಗಿದ್ದ ಸುತ್ತಲೂ ಕಾಡು. ಅಂಧಕಾರ! ಒಂಟಿಮನೆಯಲ್ಲಿ ಒಬ್ಬರೇ ಕುಳಿತಿದ್ದಾರೆ "ನಾಲ್ಕು ಗಂಡು ಎರಡು ಹೆಣ್ಣು ಹಡೆದರೂ ಕಷ್ಟಕಾಲಕ್ಕೊಬ್ಬರಿಲ್ಲ" ಎಂದು ಅವರು ನೆನೆಸಿಕೊಂಡರು. ಕಣ್ಣುಗಳಿಂದ ಒಂದೆರಡು ಹನಿಗಳು ಉದುರಿದುವು. ಕಣ್ಣಿಗೆ ಜೋಂಪು ಹಿಡಿಯುವ ವರೆಗೂ ಅವರ ಎರಡೂ ಕೈಗಳು ಗಂಡನ ಕಾಲುಗಳನ್ನೊತ್ತಿದುವು. ಎರಡು ದಿನ ಹೀಗೆಯೇ ಸಾಗಿತು.

ಮೂರನೇ ದಿನ ಬೆಳಗಿನ ಜಾವಕ್ಕೆ ಗೋವಿಂದರಾಯರೇ ಕರೆದರು ಹೆಂಡತಿಯನ್ನು. 'ಏನು? ಏನು?" ಎಂದು ಕೇಳುತ್ತ ಅವರು ದೀಪ ದೊಡ್ಡದು ಮಾಡಿ ಎದ್ದರು.

"ಏನಿಲ್ಲ. ಗಾಬರಿಯಿಲ್ಲ. ಬೈರಾಸ್ ತಾ. ಬೆವರಿನಿಂದ ಮೈ ಕೈ ದುಪ್ಪ ಟಿಯೆಲ್ಲ ಒದ್ದೆ ಮುದ್ದೆಯಾಯ್ತು"

ಸೀತಮ್ಮನವರು ಬೈರಾಸಿನಿಂದ ಗಂಡನ ಹಣೆ, ಮೋರೆ, ಕಂಕುಳು ಎದೆಗಳೆಲ್ಲವನ್ನೂ ಒರಸಿದರು. ಅವರ ಮೈಗೆ ಕೈ ತಾಗಿದಾಗ ಬಿಸಿ ಇರಲಿಲ್ಲ "ಜ್ವರ ಬಿಟ್ಟಿತು" ಎಂದು ಅವರು ತಿಳಿದರು. ಆ ಮಾತು ಅವರ ಬಾಯಿ ಯಿಂದಲೂ ಹೊರಬಿತ್ತು.

"ಹೌದು. ಜ್ವರಬಿಟ್ಟಿತು. ಶನಿ ಸಂಧಿಯೂ ಬಿಟ್ಟಿತು. ಅಬ್ಬ, ಶನಿಮ ಹಾರಾಯನ ಮಹಾತ್ಮೆಯೇ! ಕೆಲಸ ಕಳೆದ. ಹುಟ್ಟು ಮನೆ ಬಿಡಿಸಿದ. ಕಾಡಿ ಗಟ್ಟಿದ. ಕೊನೆಗೆ ಪ್ರಾಣ ಹಿಡಿದೆಳೆಯಲೂ ನೋಡಿದ. ಆದರೆ ದೈವ ಬಲದ ಇದಿರು ಅವನ ಕೈಸಾಗಲಿಲ್ಲ. ಬಿಟ್ಟ. ಇಂದಿಗೆ ಅವನ ಅವತಾರ ಸಮಾಪ್ತಿ ಯಾಯ್ತು. ಇನ್ನು ಹತ್ತು ವರುಷ ನನಗೇನೂ ಆಗುವಂತಿಲ್ಲ. ಜ್ವರ ಬರಲಿ, ಗಿರ ಹಿಡಿಯಲಿ ಏನೇನೂ ಆಗುವುದಿಲ್ಲ. ನೀನು ಎಳ್ಳಷ್ಟು ಗಾಬರಿಯಾಗ ಬೇಡ, ನೋಡು" ಎಂದು ಹೆಂಡತಿಯನ್ನು ಸಂತೈಸಿದರು.

ಈಗ ಸೀತಮ್ಮನವರ ಕಣ್ಣುಗಳಿಂದ ಆನಂದ ಭಾಷ್ಪಗಳು ಉದರಿದವು. ರಾಜಾ ಹೆಂಡತಿ ಮಗುವಿನೊಂದಿಗೆ ಬಂದು ನಾಲ್ಕು ದಿನ ಇದ್ದಾಗ ಜ್ವರದ ಅಮಲಿನಲ್ಲಿ ಆಡಿದ ಮಾತುಗಳನ್ನು ಹೇಳಿ ನಕ್ಕು ನಗಿಸಿದರು. ರಜೆ ದೊರೆತು ಹರಿ ಮನೆಗೆ ಬಂದಾಗಲೂ ತಂದೆಯ ಅವತಾರದ ಮಾತುಗಳನ್ನು ಹೇಳಿ, "ನನ್ನನ್ನು ಹೆದರಿಸಿ ಬಿಟ್ಟರು ಮಾರಾಯರು" ಎಂದು ಮತ್ತೆ ನಕ್ಕರು.

# ೮ನೆಯ ಅಧ್ಯಾಯ

ಹರಿ ಮನೆಗೆ ಬಂದುದರಿಂದ ಗೋವಿಂದರಾಯರ ಮೋರೆಯಲ್ಲಿ ಸ್ವಲ್ಪ ಗೆಲುವಿನ ಚಿಹ್ನೆಗಳು ಕಂಡು ಬಂದುವು. ಸೀತಮ್ಮನವರ ಮನಸ್ಸಿನ ಬೇಸರವೂ ಬಹು ಮಟ್ಟಿಗೆ ಪರಿಹಾರವಾಯಿತು. ಅವನನ್ನು ಕಾಣದೆ ಅವರ ಜೀವ ತಳಮಳ ಹೊಂದಿದೆ. ದಸರೆ, ಕ್ರಿಸ್ಮಸ್ ರಜೆಗಳಲ್ಲೂ ಅವನು ಊರಿಗೆ ಬಂದಿರಲಿಲ್ಲ. ಆದುದರಿಂದ ಹನ್ನೆರಡು ತಿಂಗಳು ಹನ್ನೆರಡು ವರುಷಗಳಂತೆ ಅವರಿಗೆ ತೋರಿದುದೂ ಇದೆ. ಇಷ್ಟು ದೀರ್ಘ ಕಾಲದ ವರೆಗೆ ಇನ್ನಾವ ಮಕ್ಕಳನ್ನೂ ಪರರ ಮನೆಯಲ್ಲಿ ಅವರು ಬಿಟ್ಟು ಬಂದುದಿಲ್ಲ. ಅಕ್ಕ ಪರಕೀಯಳಲ್ಲ, ನಿಜ, ಆದರೆ ಅಕ್ಕನಂತೆ ಭಾವ ಇರಲಾರ. ಅತ್ತೆ ಮೈದುನರಿಗೆ ಅಕ್ಕನ ಕರುಳು ಕರುಣೆ ಹೇಗೆ ಬಂದೀತು. ಬಂಧುಗಳ ಮನೆಯಲ್ಲಿ ಒಂದೆರಡು ದಿನಗಳಿದ್ದರೆ ಚಂದ. ಅನ್ನ ನೀರಿಗೆ ಅವರ ಕೈ ಬಾಯಿ ಕಾಯಲು ತೊಡಗಿದ ಮೇಲೆ ತಾತ್ಸಾರವುಂಟಾಗುವುದು ಸಹಜವೇ. ಮಕ್ಕಳು ಅತ್ತಾಗ ಎತ್ತಿಕೊಳ್ಳದಿದ್ದರೆ ಕೆಲವರು ಗುಮ್ಮನ ಮುಸುಡು ಮಾಡುವರು. ನೀರೆಳೆಯಲು, ಅಂಗಡಿಯಿಂದ ಮನೆಗೆ ಓಡಾಡಲು ಒಲ್ಲೆನ್ನ ಬರುವುದಿಲ್ಲ. ಪೇಟೆ ಕೆಲಸ, ಕತ್ತೆ ಚಾಕರಿಗಳಿಗೆ ಹಚ್ಚುವವರೂ ಇದ್ದಾರೆ. ಇಲ್ಲದಿದ್ದರೆ ಇರುವುದೇ ಕಷ್ಟ. ಊಟಕ್ಕೆ ಬಟ್ಟಲಿನ ಮೇಲೆ ಕುಳಿತಾಗ ಸಹಸ್ರನಾಮಕ್ಕೆ ಆರಂಭವಾಗುವುದುಂಟು. "ಊಟಕ್ಕೆ ತಯ್ಯಾರ್, ಉಗುರು ಮುರಿದು ಒಂದು ಕೆಲಸ ಮಾಡುವಂತಿಲ್ಲ" ಎಂದು ವಟಗುಟ್ಟುವರು. ಲೋಕಾಚಾರ ಹೀಗೆ.

ಸೀತಮ್ಮನವರ ಲೋಕಾನುಭವ ಹಾಗೆ. ಹೊರತು, ಹರಿಗೆ ಅಕ್ಕನ ಮನೆಯಲ್ಲಿ ಅಂಥಿಂಥ ಕಷ್ಟವೆಂದವರ ಭಾವನೆಯಲ್ಲ. ಆದರೂ ತಮ್ಮ ಕಣ್ಣೆದಿರು ಇದ್ದಂತೆ ಮಂದಿ ಮನೆಯಲ್ಲಿ ಆಗಲಾರದೆಂದು ಅವರ ತಿಳುವಳಿಕೆ. ತಾವು ಮಕ್ಕಳಿಗೆ ಹೋಳಿಗೆ ತುಪ್ಪ ಇಕ್ಕಿದುದು ಅಷ್ಟರಲ್ಲೇ ಇದೆ.

ಆ ಜಂಭವ ಮಾತನ್ನು ಅವರು ಕೊಚ್ಚಿ ಕೊಳ್ಳುವುದೂ ಇಲ್ಲ. ಒಡತನದಿಂ ದಲೇ ಮಕ್ಕಳನ್ನು ಬೆಳಿಸಿದೆವೆಂದು ಅವರು ಒಪ್ಪಿಕೊಳ್ಳುವರು. ಹಾಲಿನ ಬದಲು ಗಂಜಿ ನೊರೆಯನ್ನೇ ತೆಗೆದು ಅನ್ನಕ್ಕೆ ಕಲಸಿ ಮಕ್ಕಳಿಗೆ ಉಣಿಸಿ ದುದೂ ಉಂಟು. ಮರದ ತೊಟ್ಟಿಲಿನ ಬದಲು ಸೀರೆಯನ್ನೇ ಜಂತಿಗೆ ಕಟ್ಟಿ ಮಗುವನ್ನು ತೂಗಿ ಜೋಗುಳ ಹಾಡಿ ಮಲಗಿಸಿದುದೂ ಇದೆ. ಮಹಾ ಯುದ್ಧ ಕಾಲದಲ್ಲಿ ಅಕ್ಕಿ ಮುಡಿಗೆ ಮೂವತ್ತು ರೂಪಾಯಿ ಆದಾಗ ಅವರು ಉಪವಾಸವಿದ್ದ ದಿನಗಳಿಗೆ ಲೆಕ್ಕವಿಲ್ಲ. ಉಡುಪಿಯ ಭೋಜನ ಶಾಲೆಗೆ ತೆರಳಲು ಒಮ್ಮೊಮ್ಮೆ ಮನಸ್ಸಾಗಿದ್ದರೂ ಮಠಗಳ ಕೊಟ್ಟಾರಿ ಭಂಡಾರಿಗಳಿಂದ ಹಿಡಿದು ಸ್ವಾಮಿಗಳವರೆಗಿನ ದೆವ್ವ ದೇವರುಗಳ ದೃಷ್ಟಿ ಬಿದ್ದೀತೆಂದು ಅಂಜಿ ಅವರು ಹೋಗಲಿಲ್ಲ. ಆದುದರಿಂದ ಹೊಟ್ಟೆಗೆ ಗೆಣಸಿನ ಸಮಾರಾಧನೆ ನಡೆದಿತ್ತು. ಒಂದೊಂದು ದಿನ ಸ್ಪಾಜಂಕ್ ಸೊಪ್ಪು, ಕುಂಬಳದ ಕುಡಿಗಳನ್ನು ಬೇಯಿಸಿ ತಿನ್ನುತ್ತಿದ್ದರು. ಒಂದೇ ಸೀರೆಯಲ್ಲಿ ಕಾಲ ನೂಕಿದುದನ್ನು ಅವರು ಮರೆತಿಲ್ಲ. ಉಟ್ಟ ಸೀರೆಯ ಒಂದು ಚುಂಗು ಒಣಗಿದ ಮೇಲೆ ಅದನ್ನು ಸುತ್ತಿಕೊಂಡು ಮತ್ತೊಂದು ಚುಂಗನ್ನು ಬಿಸಿಲಿಗೆ ಹಿಡಿದೂ ಬದುಕಿದರು. ಗೋವಿಂದರಾಯರು ಹಗಲುಟ್ಟ ಧೋತರವನ್ನೇ ರಾತ್ರಿ ಹೊದೆದು ಮಲಗಿ ದುದೂ ಸುಳ್ಳಲ್ಲ. ಚಿಮುಣಿ ಎಣ್ಣೆ ಲಭಿಸದೇ ಇದ್ದಾಗ ಹೊನ್ನೆಣ್ಣೆ, ಕುರ್ಡಾನ್ ಎಣ್ಣೆಗಳಲ್ಲಿ ಹಣತೆ ಹಚ್ಚಿ ರಾತ್ರಿ ಊಟ ಮಾಡಿದರು. ಅದರ ಬೆಲೆಯೂ ಕೈಗೆ ನಿಲುಕದಷ್ಟು ಏರಿದಾಗ ತೆಂಗಿನ ಮಡಲನ್ನು ಒಲೆಗಿಟ್ಟು ಅದರ ಬೆಳಕಿನಲ್ಲಿ ಮಕ್ಕಳು ಉಂಡರು. ಇಷ್ಟು ಕಷ್ಟ ಬಂದಿದ್ದರೂ ಮಕ್ಕಳ ಒಪ್ಪೊತ್ತಿನ ಒಂದು ಗೂಜಿಗೆ ಅವರು ತಾತ್ಸಾರ ಮಾಡಿಲ್ಲ. ತಮ್ಮ ಗಂಜಿ ಯನ್ನು ತಾವೇ ಸಂಪಾದಿಸಿಕೊಳ್ಳಲು ಸಾಧ್ಯವಿರುವ ವರೆಗೆ ನಾಲ್ಕು ಅಕ್ಷರ ಗಳನ್ನೂ ಕಲಿಸಿದರು.

ರಾಜನಿಗೆ ಮೊದಲು ಕಷ್ಟದಿಂದಲೇ ಕಲಿಸಿದರು. ಮೊದಲು ಮನೆ ಯಲ್ಲೇ ಸೀತಮ್ಮನವರು "ಅ ಆ" ಉರು ಹಾಕಿಸಿದರು. ವಾರೊಕ್ಕೊಮ್ಮೆ ಮನೆಗೆ ಬಂದಾಗ ಮಗ್ಗಿ ಗಿಗ್ಗಿ ಗೋವಿಂದರಾಯರು ಹೇಳಿಕೊಟ್ಟರು. ಓದಲು ಬರೆಯಲು ಚೆನ್ನಾಗಿ ಬಂದ ಮೇಲೆಯೇ ಅವನು ಹಾಯ್‌ಸ್ಕೂಲಿಗೆ ತೆರಳಿದ. ಶಾಲೆಯ ಸಂಬಳದಲ್ಲಿ ಅವನಿಗೆ ಸ್ವಲ್ಪ ಮಾಫಿಯೂ ದೊರೆ

ಯಿತು. ಬಲ್ಲಾಳರ ಮಕ್ಕಳು ತಾವು ಕಲಿತು ಬಿಟ್ಟ ಹಳೆ ಪುಸ್ತಕಗಳನ್ನು ಕೊಟ್ಟರು. ಹೇಗೋ ಕಲಿತ. ಹೇಗೋ ಪಾಸಾದ. ಅವನ ನಸೀಬ್ ಒಳ್ಳೇದಿತ್ತು. ಆಗಿನ ಕಾಲವೂ ಅಂತಹುದೇ. ಅವನ ಪುಣ್ಯಕ್ಕೆ ಬೇಗನೇ ಒಂದು ಗುಮಾಸ್ತ ಕೆಲಸವೂ ದೊರೆಯಿತು. ಆ ಮೇಲೆ ಅವನೂ ಸ್ವಲ್ಪ ನೆರವಾದ ಶಿವ ರಾಯನಿಗೂ ಮೆಟ್ರಿಕ್ ವರೆಗೆ ಓದಿಸಲು ಸಾಧ್ಯವಾಯ್ತು. ಗುಲಾಬಿ, ಕಮಲೆಯರೂ ಉರುಟಣೆ ಪದ ಓದುವಷ್ಟು ಕಲಿತರು. ಹರಿಗೂ ಹಿರಿಯ ಣ್ಣನೇ ಸ್ವಲ್ಪ ಸ್ವಲ್ಪ ಕೊಟ್ಟ. ಅದರಿಂದ ಅವನೂ ಒಂದು ಮೆಟ್ಟಲಿಗೆ ಬಂದ. ಇನ್ನು ಎಲ್ಲರಾದರೂ ತೆರಳಿ, ಕೋಳಿಯಂತೆ ತನ್ನ ಹೊಟ್ಟೆ ತಾನು ತುಂಬಿಸಿಕೊಳ್ಳಲು ಏನೂ ಅಡ್ಡಿಯಿಲ್ಲವೆಂದು ಗೋವಿಂದರಾಯರ ಮನಸ್ಸಿನ ಗೆಲುವು.

ಆದುದರಿಂದ ಹರಿ ಬಂದ ಕೂಡಲೇ "ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿ ದೆಯಾ? ಕೊಶ್ಚನ್ ಪೇಪರ್ಸ್ ಹೇಗಿದ್ದುವು? ಪಾಸಾಗಬಹುದಾ?" ಎಂದು ಅವರು ಪ್ರಶ್ನಿಸಿದರು.

"ಚೆನ್ನಾಗಿಯೇ ಮಾಡಿದ್ದೇನೆ. ಹಿಸ್ಟರಿ, ಜಾಗ್ರಫಿ ಸುಲಭವಿತ್ತು. ಸಂಸ್ಕೃತ ಪೇಪರ್ ಸ್ವಲ್ಪ ಕಠಿಣ. ಆದರೂ ಪಾಸಾಗಲು ಅಡ್ಡಿಯಿಲ್ಲ. ಪಾಸಾದರೆ ಕಾಲೇಜಿಗೆ ತೆರಳಬೇಕು"

"ಕಾಲೇಜಿಗೆ ತೆರಳಬೇಕು" ಎಂಬ ಮಗನ ಮಾತುಗಳನ್ನು ಕೇಳಿ ಗೋವಿಂದರಾಯರಿಗೆ ಸೋಜಿಗವಾಯಿತು. ಒಂದು ಕ್ಷಣ ಅವರು ಕಣ್ಣೆವೆ ಗಳನ್ನೂ ಮುಚ್ಚಲಿಲ್ಲ. ಬಾಯಿ ಅಗಲಿಸಿ ಅವನನ್ನು ಕಾಲಿನಿಂದ ತಲೆಯ ವರೆಗೂ ನೋಡಿದರು. ಹರಿ ಉಳಿದ ಅಣ್ಣಂದಿರಿಗಿಂತ ಭಿನ್ನವಾಗಿಯೇ ಅವ ರಿಗೆ ತೋರಿದ. ಉಳಿದಿಬ್ಬರೂ ಬೆಳೆದು ದೊಡ್ಡವರಾಗಿದ್ದಾರೆ. ರಾಜಾ ತಂದೆಯಷ್ಟೇ ಉದ್ದ. ಅವರಿಗಿಂತ ಸ್ವಲ್ಪ ದಪ್ಪ. ಅವರದೇ ಹೋಲಿಕೆ. ಶಿವರಾಯ ಒಂದು ಮುಷ್ಟಿ ಗಿಡ್ಡ. ತಂದೆಯ ಮೈಕಟ್ಟಿದ್ದರೆ ತಾಯಿಯ ಬಣ್ಣವೂ ಕೂಡಿದೆ. ಆದರೆ ಹರಿ ಬಡಕಲು ಜೀವ. ಕೈ ಕಾಲುಗಳೂ ಉದ್ದ. ಬಸಳೆಯಂತೆ ಮೃದು. ಮಾವಿನ ತಳಿರಿನಂತಹ ತುಟಿಗಳು, ಅಗಲವಾದ ಹಣೆ. ನಗುವ ಕಣ್ಣುಗಳು ಮೋರೆಯಲ್ಲಿ ಎದ್ದು ಕಾಣಿಸುತ್ತಿವೆ. ಹತ್ತು ಹದಿನಾರನೇ ವಯಸ್ಸಿನಲ್ಲಿ ಅವನ ತಾಯಿಯೂ ಹೀಗೆಯೇ ಇದ್ದ

ಳೆಂದು ಗೋವಿಂದರಾಯರಿಗೆ ಥಕ್ಕನೆ ಹೊಳೆಯಿತು. ಆ ಸವಿ ನೆನಪು ಒಂದು ವರಿಂದ ಮುಗುಳು ನಕ್ಕು, "ಕಾಲೇಜಿಗೆ ಹೋಗುತ್ತದೇನು ಹುಡುಗಾಟವಾ? ಎಷ್ಟು ಹಣ ಬೇಕು? ಏನು ಕಥೆ?" ಎಂದು ನುಡಿದರು.

"ನೀವು ಕಳಿಸದಿದ್ದರೆ ನೋಡೋಣ. ನಾನೆಲ್ಲಿ ಬಿಡುತ್ತೇನೆ" ಎಂದು ಹೇಳಿ ಅವನು ಒಳಗೆ ನಡೆದ.

ಗೋವಿಂದರಾಯರು ಮೌನ ಸಮಾಧಿಯಲ್ಲಿ ತಲ್ಲೀನರಾದರು. ಇದೊಂದು ಹೊಸ ಸಮಸ್ಯೆ ಉದ್ಭವಿಸಬಹುದೆಂದು ಅವರು ಕನಸು ಮನಸಿನಲ್ಲಿಯೂ ನೆನಸಿರಲಿಲ್ಲ. ಇದನ್ನು ಹೇಗೆ ನಿವಾರಣೆ ಗೊಳಿಸ ಬೇಕೆಂಬ ವಿಚಾರ ಅವರಿಗೆ. ಕಲಿಸುವ ಬಗೆ ಹೇಗೆ? ಸಾವಿರಾರು ರೂಪಾಯಿಗಳನ್ನು ಕೊಡುವವರು ಯಾರು? ರಾಜನ ಕೈ ಈಗಲೇ ಕಟ್ಟಿದೆ. ಕಾಲೇಜಿನ ಮಾತೆತ್ತಿದರೆ ಅವನು ರೇಗದೆ ಇರಲಾರ. ತನ್ನ ಕೈ ಕೂಡಾ ಗಿಡ್ಡವಾಗಿದೆ. ಇದ್ದ ಫಂಡಿನ ಹಣ ಆರು ತಿಂಗಳಿಗೂ ಸಾಲದು. ಮಾಸ್ತರ ಕೆಲಸ ವಿರುತ್ತಿದ್ದರೆ ಏನಾದರೂ ವೇಷ ಕಟ್ಟಬಹುದಿತ್ತು. ಅವನು ಕಲಿವಾಗ ಬೆಳಗಾಗಿ ಬಿಟ್ಟಿತು. ಮುಂದೆ ಕಲಿಸುವ ವಿಚಾರವೇ ಅವರ ಯಾರ ತಲೆಯಲ್ಲೂ ಇಲ್ಲ. ಕಲಿತು ಮಾಡುವುದಾದರೂ ಏನು? ಬಿ. ಎ. ಆದ ಜನರಿಗೆ ಈಗಿನ ಕಾಲಕ್ಕೆ ಕೆಲಸ ದೊರೆಯುವುದು ಕಠಿನವಾಗಿದೆ. ಹತ್ತು ಇಪ್ಪತ್ತು ರೂಪಾಯಿಗಳ ಸಂಬಳಗಳಿಗೆ ಸಾವಿರಾರು ಜನ ಅರ್ಜಿ ಹಾಕುತಿದ್ದಾರೆಂದು ರಾಜಾ ಕೂಡಾ ಒಮ್ಮೆ ಮಂಗಳೂರಿನಿಂದ ಬಂದಾಗ ಹೇಳಿದ್ದುಂಟು. ತಿಂಗಳಿಗೆ ಹತ್ತು ರೂಪಾಯಿ ಸಂಪಾದನೆ ಇಲ್ಲದ ಎಲ್ ಎಲ್ ಬಿ ವಕೀಲರು ಮಂಗಳೂರಲ್ಲಿ ಮನೆಗೊಬ್ಬರಂತೆ! ಹೀಗಿರುವಾಗ ಹರಿ ಕಲಿತು ಮಾಡುವುದಾದರೂ ಏನು? ಎಂದು ಗೋವಿಂದರಾಯರು ಅವನ ಮನಸ್ಸಿನೊಳಗೆ ಹೊಕ್ಕು ಒಂದೊಂದೇ ಪರಿ ಸರಿಸಿ ನೋಡಲಾರಂಭಿಸಿದರು.

ಒಂದು ಆದಿತ್ಯವಾರ ಬಂದ ರಾಜಾನ ಕಿವಿಗೂ ಈ ಸುದ್ದಿಯನ್ನು ಗೋವಿಂದರಾಯರು ಬೀರಿದರು. ಊಹಿಸಿದಂತೆ ಮೊದಲು ಅವನು "ಕಾಲೇಜಲ್ಲ. ಐ. ಸಿ. ಎಸ್ ಪರೀಕ್ಷೆಗೆ ಇವನು ಲಂಡನಿಗೆ ಹೋಗಲಿ" ಎಂದು ರೇಗಿದ. ಮತ್ತೆ ಊರಿಗೆ ಹೊರಟಾಗ ಮನೆಯ ಮೇಲಿನ ರಸ್ತೆಯ ವರೆಗೂ ಬೀಳ್ಕೊಳ್ಳಲು ಬಂದ ತಂದೆಯನ್ನು ನಿಲ್ಲಿಸಿ ಸಮಾಧಾನದಿಂದ ಹೇಳಿದ. "ಅಪ್ಪಯ್ಯ,

ನಮ್ಮಂತಹ ಬಡವರಿಗೆ ಕಾಲೇಜ್ ಶಿಕ್ಷಣ ಸಾಧ್ಯವಿದೆಯಾ? ಅದೆಲ್ಲ ದೊಡ್ಡ ದೊಡ್ಡ ಜಮೀನ್ದಾರರ ಮಕ್ಕಳಿಗೋ ವ್ಯಾಪಾರಿಗಳ ಮಕ್ಕಳಿಗೋ ಹೇಳಿದ್ದು. ದುಡ್ಡು ಹೇಗೆ ವೆಚ್ಚ ಮಾಡಬೇಕೆಂದು ಅವರಿಗೆ ತೋರುವುದಿಲ್ಲ. ಅದಕ್ಕೆ ಕಾಲೇಜೊಂದು ದಾರಿ ಅವರಿಗೆ. ಮಂಗಳೂರಲ್ಲಿ ನಾನು ದಿನಂಪ್ರತಿ ನೋಡು ತಿದ್ದೇನೆ. ಅವರ ಉಡುಗೆ ತೊಡುಗೆಗಳೇನು? ಶೋಕೇನು? ಅವರು ಚಾ, ಸಿನಿಮಾ ಸಿಗರೇಟುಗಳಿಗೆ ವೆಚ್ಚ ಮಾಡುವ ಹಣ ನಮ್ಮೆರಡು ಸಂಸಾರಗಳಿಗೆ ಸಾಕು. ಕಾಲೇಜಿನ ಪುಸ್ತಕಗಳಿಗೆಷ್ಟು ಹಣ ಬೇಕು? ಫೀ ಎಷ್ಟು ಏರಿಸಿ ದ್ದಾರೆ ಈಗ? ಬಡವರ ಮಕ್ಕಳಿಗಾಗಿ ಸರಕಾರ ಕಟ್ಟಿಲ್ಲ ಕಾಲೇಜನ್ನು! ಬಡವ ರೆಲ್ಲರೂ ಕಲಿಯಬೇಕೆಂದು ಸರಕಾರ ಬಯಸುವುದೂ ಇಲ್ಲ. ಏಕೆಂದರೆ ಕಲಿತ ಬಡವರು ನಾಳೆ ತಮಗೇ ತಿರುಗಿ ನಿಲ್ಲುವರೆಂದು ಬ್ರಿಟಿಶರಿಗೆ ಗೊತ್ತು. ಶ್ರೀಮಂತರ ಮಕ್ಕಳಿಗೆ ಯಾವುದೂ ಬೇಡ. ಗಾಂಧಿಯವರೂ ಬೇಡ, ಗಾಂಧಿ ರಾಜ್ಯವೂ ಬೇಡ. ಗಾಂಧೀ ರಾಜ್ಯ ಬಂದ ಮೇಲೆ ಈ ಜಮೀನ್ದಾರರು ವ್ಯಾಪಾರಿಗಳು ಅದನ್ನು ಸುಸೂತ್ರ ನಡೆಯಲು ಬಿಟ್ಟೇರೆಂದು ತಿಳಿದಿದ್ದೀರಾ? ಇದು ಬೇಕು ಅದು ಬೇಡ. ಮತ್ತೆ. ಒಬ್ಬನನ್ನು ಮತ್ತೊಬ್ಬ ಸುಲಿದು ತಿನ ಲುಂಟು. ಇವನು ಅಣ್ಣ ಇವನು ತಮ್ಮನೆಂದೂ ನೋಡಲಾರರು. ಹಾವು ಹಾವೇ. ಗಾಂಧೀ ರಾಜ್ಯ ಬಂದ ಮೇಲೆ ಅದರ ವಿಷವೇನೂ ಕಡಿಮೆಯಾಗು ವುದಿಲ್ಲ."

"ನೀನು ಹೇಳುವುದೆಲ್ಲ ಸರಿ. ಮತ್ತೆ ಹೇಗೆ ಮಾಡಲಿ ರಾಜಾ"?.

"ನಾನಾದರೂ ಏನು ಮಾಡಲಿ ಅಪ್ಪಯ್ಯ? ನನ್ನ ಕಾಲು ಕೆಸರಲ್ಲಿದೆ. ನಾನು ಮುಳುಗುವುದೊಂದೇ ಬಾಕಿ. ನಿಮಗೆ ಅದೆಲ್ಲ ಗೊತ್ತಿಲ್ಲ. ಇದೇನು ಆಗುವ ಹೋಗುವ ವ್ಯಾಪಾರವಾ? ಅವನಿಗೆ ಮನಸ್ಸಿದ್ದರೆ ಇಲ್ಲೇ ಎಲ್ಲಾದರೂ ಪಂಚ್ಯಾತ್ ಶಾಲೆಯಲ್ಲಿ ಮಾಸ್ತ್ರ ಕೆಲಸ ಮಾಡಲಿ. ಪಂಚ್ಯಾತ್ ಪ್ರೆಸಿಡೆಂಟರ ಗುರುತು ಪರಿಚಯ ನನಗಿದೆ. ನೀವೇ ಮಾತನಾಡಿ ನೋಡಿ''

"ಆಗಲಿ. ಮತ್ತೇನು ಮಾಡೋಣ." ಎಂದು ರಸ್ತೆಯಿಂದ ಗೋವಿಂದ ರಾಯರು ಹಿಂತಿರುಗಿದರು. ಅವರ ಪೆಚ್ಚು ಮೋರೆ ಕಂಡೇ ಹರಿಗೆ ಅರ್ಥ ವಾಯಿತು. ಎಲ್ಲವನ್ನೂ ಕೇಳಿ ತಿಳಿದುಕೊಂಡ ಮೇಲೆ ಮುಖಮಂಟಪದ ದಂಗ

ಬಳಿ ಕುಳಿತಿದ್ದ ಹರಿ ಎದ್ದು, "ಅಪ್ಪಯ್ಯ, ಹಾಗಾದರೆ ನಾನೆಲ್ಲಾದರೂ ಹೊರಟು ಹೋಗುತ್ತೇನೆ." ಎಂದು ದಡಕ್ಕನೆ ನುಡಿದ.

ಬಿದಿರಿನ ಕಣೆ ಮೈಗೆ ನೆಟ್ಟಂತಾಯಿತು ಗೋವಿಂದರಾಯರಿಗೆ.

"ಎಲ್ಲಿಗೆ ಹೋಗುತ್ತೀ? ನಿನ್ನಲ್ಲಿ ಕಾಸೇನಿದೆ? ಹೋಗಿ ಮಾಡುವುದಾ ವರೂ ಏನು?" ಎಂದು ಏಕಕಾಲಕ್ಕೆ ಅವರು ಅನೇಕ ಪ್ರಶ್ನೆಗಳನ್ನು ಕೇಳಿದರು.

"ಎಲ್ಲಾದರೂ ಹೋದ. ಕೈಕಾಲು ಗಟ್ಟಿವೆಯಲ್ಲ. ಬೇಡಿ ತಿಂದ. ಏನಿಲ್ಲ ದಿದ್ದರೆ ಕೊನೆಗೆ ಗಾಂಧೀ ಮಹಾರಾಜ-ಕೀ- ಜೈ ಎಂದ"

ಮಾಸ್ತ್ರ ಕೆಲಸ, ಆ ಕೆಲಸ, ಈ ಕೆಲಸಗಳ ಸವಿ ತೋರಿಸಿ ಬಗೆ ಬಗೆ ಯಿಂದ ಹೇಳಿಕೊಂಡರೂ ಹರಿ ಕೇಳದಾದ. ಹತ್ತು ಹದಿನೇಳು ವಯಸ್ಸಿನ ಈ ಎಳೆಹರೆಯದಲ್ಲೇ ಅವನ ನಿಶ್ಚಿತ ಮನೋಬಲವನ್ನು ಕಂಡು ಗೋವಿಂದ ರಾಯರೇ ತಬ್ಬಿಬ್ಬಾದರು. ಅದು ಹಠವೆಂದೂ ಅವರು ಭಾವಿಸಿದರು. ಮಗನ ಮನಸ್ಸನ್ನು ಪರಿವರ್ತಿಸಲಾಗದೆ ಕೊನೆಗೆ ಅವರು ಈ ಒಂದು ಮಾತು ನುಡಿದರು.

"ಆಯ್ತು. ನೀನು ಹೇಳಿದಂತೆಯೇ ಆಗಲಿ. ನೀನು ಬೇಕಾದ್ದಲ್ಲಿ ಹೋಗು ನನ್ನಡ್ಡಿಯಿಲ್ಲ. ಆದರೆ ನನ್ನ ಒಂದು ಮಾತು ಕೇಳು. ಇನ್ನು ಮಳೆಗಾಲ ಆರಂಭವಾಗಲು ಬಹಳ ದಿನಗಳಿಲ್ಲ. ಅದು ಮುಗಿದ ಮೇಲೆ ನಿನ್ನ ಮನಸ್ಸಿಗೆ ಇಷ್ಟದೋರಿದಂತೆ ಮಾಡು."

ತಂದೆಯ ಮಾತನ್ನು ಹರಿ ಮೀರಲಿಲ್ಲ. ತಂದೆಯ ಕೆಲಸದಲ್ಲೂ ಒಂದೊಂದುದಿನ ನೆರವಾದ. ಮಳೆಬೀಳುವುದರೊಳಗೆ ಗೆಣಸು ಅಗೆಯಲು ಗೋವಿಂದರಾಯರು ಮೋಹನನೊಂದಿಗೆ ಗದ್ದೆಗೆ ತೆರಳಿದಾಗ ಅವನೂ ಬಂದ. ಅವರ ಕೈಯಿಂದ ಹಾರೆ ತೆಗೆದುಕೊಂಡು ತಾನು ದರ ಅಗೆದ. ಆದರೆ ಬೀಳಿನ ಆಚೀಚೆಯ ಮಣ್ಣನ್ನು ಅಗೆವಾಗಲೇ ಅವನ ಮೈಯಲ್ಲಿ ಬೆವರು ಧಾರಾಕಾರ ವಾಗಿ ಇಳಿಯಿತು. ಒಂದು ಮಾರು ಅಗೆದ ಮೇಲೆ ಅಬ್ಬ" ಎಂದು ಬಗ್ಗಿದ ಬೆನ್ನನ್ನು ನೀಟ ಮಾಡಲೆತ್ನಿಸಿದ. ಸುವರ್ಣಗಡ್ಡೆ ಅಗೆದಾಗಲೂ ಅಷ್ಟೆ. "ಬಿಡು. ಬಿಡು. ನಿನ್ನಿಂದ ಆಗುವುದಿಲ್ಲ" ವೆಂದು ಹೇಳಿ ಗೋವಿಂದರಾಯರೆ ಹಾರೆಯನ್ನು ಕಿತ್ತುಕೊಂಡರು. ತಾಯಿ ಬೆನ್ನಿಗೆ ತೆಂಗಿನೆಣ್ಣೆ ತಿಕ್ಕಬೇಕಾಯ್ತು.

"ನಿನಗೆ ಯಾಕೆ ಬೇಕು ಈ ಕೆಲಸ? ಅದೆಲ್ಲ ನಿನ್ನಿಂದಾಗುವುದಿಲ್ಲ. ಮೋಹನ ನಷ್ಟಾ ನಿನಗೆ ದೈಹಿಕ ತ್ರಾಣವಿಲ್ಲ. ನೀನು ಯಾವ ಊರಿಗೆ ಹೋಗಿ ಏನು ಮಾಡುತ್ತಿಯೋ? ನಮಗೆ ಇದೊಂದು ದೊಡ್ಡ ಚಿಂತೆಯೇ ಸರಿ. ನೀನು ಕಾಗದ ಕಪ್ಪು ಮಾಡಿ ಬದುಕಬೇಕು. ಹೊರತು ಬೇರೇನೂ ಆಗಲಿಕ್ಕಿಲ್ಲ. ಗಳಶಂಕರ" ಎಂದು ಸೀತಮ್ಮ ಗೊಣಗುಟ್ಟಿದರು.

ಹುಟ್ಟಿದಂದಿನಿಂದ ಅಂತಹ ಕೆಲಸ ಮಾಡಿಯೂ ಗೊತ್ತಿಲ್ಲ ಅವನಿಗೆ. ಬುದ್ಧಿ ತಿಳಿಯುವ ಮೊದಲೇ ಅಕ್ಕನ ಕೈಹಿಡಿದುಕೊಂಡು ಶಾಲೆಗೆ ತೆರಳಿದ್ದ. ಶಾಲೆಗೆ ಸೇರಿದ ಮೇಲೆ ಆಟ ಪಾಠಗಳ ಮೇಲೆಯೇ ಪ್ರೀತಿ. ಅದು ದೊಡ್ಡವ ನಾಗುತ್ತ ಬಂದಾಗಲೂ ಕಡಿಯಲಿಲ್ಲ. ಈಗ ಶಾಲೆ ಬಿಟ್ಟು ಬಂದಾಗಲೂ ಪುಸ್ತಕಗಳ ಮೇಲಿನ ಪ್ರೇಮ ಬಿಟ್ಟಿಲ್ಲ. ಪುಸ್ತಕಗಳನ್ನು ಬಿಟ್ಟು ಬಂದಿಲ್ಲ. ಮುಂಡಾಜೆಯಿಂದ ಹಳೇ ಟ್ರಂಕ್ರನ್ನು ತನ್ನ ತಲೆಯ ಮೇಲೆಯೇ ಹೊತ್ತು ತಂದಿದ್ದ. ಒಂದೆರೆಡು ತಾಸಾದರೂ ಓದದ ದಿನವಿಲ್ಲ. ಮನೆಯಲ್ಲಿ ಬೇಸರ ವಾದಾಗ ಹೊಳೆಯ ಬದಿಗೆ ತೆರಳಿ ಮರದ ಬೇರಿನ ಮೇಲೆ ಕುಳಿತು ಓದು ತಿದ್ದ. ಕಾಲೇಜಿಗೆ ತೆರಳುವ ವಿಚಾರಕ್ಕೆ ಕಲ್ಲು ಬಿದ್ದ ಮೇಲೆ ಓದಲೂ ಬೇಸರ ಬಂದಿತು. ಒಂದು ದಿನ ಹೊಳೆ ದಾಟಿ ಬಂಗಾಡಿ ಪೇಟೆ ನೋಡಿ ಬಂದ. ಇನ್ನೊಂದು ದಿನ ಬಂಗಾಡಿ ಪೇಟೆಯ ಶಾಲೆಯಲ್ಲಿ ನಡೆದ ತಾಳಮದ್ದಲೆ ಕಂಡ. ನಾವೂರು ಮಾರ್ಗವಾಗಿ ಗಡಾಯಿಗೆ ತೆರಳಿ ಜುಮುಲ ಬೀಬಿ ಕೋಟೆ ಕಟ್ಟಿರುವ ಆ ಮಹಾ ಕಲ್ಲನ್ನೇರಿ ಮರಳಿದ. ಅವರಿವರ ಮಾತು ಕೇಳಿ ಮರು ಳಾಗಿ ಮತ್ತೆ ಎಳ್ನೀರ್ ಘಟ್ಟ ಹತ್ತಿದ. ಕಳಸದ ವರೆಗೂ ತೆರಳಿ, ಘಟ್ಟದ ಚಾ, ಕಾಫಿ ತೋಟಗಳನ್ನು ನೋಡಿದ. ಮರಳಿದ ಮೇಲೆ ತಾಯಿ ತಂದೆಯ ಮುಂದೆ ತನ್ನ ಅನುಭವವನ್ನೂ ವರ್ಣಿಸಿದ. ಅದನ್ನು ಕೇಳಿ ಗಡಾಯಿ ಕಲ್ಲ ನ್ನೇರ ಬೇಕೆಂದು ಅನಿಸುತ್ತಿತ್ತು ಗೋವಿಂದರಾಯರಿಗೆ. ಎಳ್ನೀರ್ ಘಟ್ಟ ಹತ್ತಿ ಅಲ್ಲಿರುವ ಜನರನ್ನು ಕಾಣಬೇಕೆಂದೂ ಆತುರವಾಗುತ್ತಿದ್ದು. ಆದರೆ ಅದು ಸಾಧ್ಯವಾದೀತೋ ಇಲ್ಲವೋ ಎಂಬ ಶಂಕೆ ಅವರಿಗೆ. ಅಲ್ಲದೆ ಈ ವರುಷ ಗದ್ದೆ ಕೂಡಾ ಬಿತ್ತಬೇಕೆಂದು ಅವರು ಸಂಕಲ್ಪಿಸಿದ್ದರು. ಅದರ ಪೂರ್ವ ತಯಾರಿಯಲ್ಲೇ ಅವರ ವೇಳೆ ಕಳೆಯಿತು.

ಬಂಗಾಡಿಯಲ್ಲಿ ಮಳೆ ಬರುವ ಮೊದಲೇ ಬೇಸಾಯದ ಕೆಲಸ ಆರಂಭ ವಾಗುತ್ತದೆ. ಹೆಚ್ಚಿನ ಬೆಟ್ಟುಗದ್ದೆಗಳನ್ನೂ ಮಜಲುಗಳನ್ನೂ ಮೊದಲೇ ಉತ್ತು ಹುಡಿ ಮಾಡಿ ಹಲಿಗೆ ಹಾಕಿ ಬಿತ್ತಿ ಬಿಡುವರು. ಅದನ್ನು ಮತ್ತೆ ಮುಟ್ಟುವುದಿಲ್ಲ. ಪೈರಾದಾಗಲೇ ಕೊಯ್ಯಲು ಬರುವರು. ಭತ್ತದ ಈ ಸಸಿ ಗಳು ಮೊಳ ಉದ್ದವಾದೊಡನೆಯೇ ಹರಿದು ಪುನಃ ಅದೇ ಗದ್ದೆಗಳನ್ನು ಮಳೆಗಾಲದಲ್ಲಿ ಉತ್ತು ಕೆಸರು ಗದ್ದೆಗಳನ್ನಾಗಿ ಪರಿವರ್ತಿಸಿ ನೇಜಿ ನೆಡುವ ಗೊಡವೆಗೆ ಹೋಗುವುದು ಕಡಿಮೆ. ಬೈಲು ಗದ್ದೆಗಳಲ್ಲಿ ಮಾತ್ರ ನೇಜಿ ನೆಡುವರು. ಅಂಥ ಗದ್ದೆಗಳನ್ನು ಯಾರೂ ಬಹಳ ಇಟ್ಟುಕೊಳ್ಳುವುದಿಲ್ಲ. ಏಕೆಂದರೆ, ಎತ್ತುಗಳ ಕೊರತೆ, ಆಳುಗಳ ಅಭಾವ, ನೆರೆಹಾವಳಿ ಮಲೆನಾಡಿನ ಈ ಭಾಗದಲ್ಲಿ ಎಂದೂ ತಪ್ಪಿಲ್ಲ. ಆದುದರಿಂದ ಗದ್ದೆ ಹುಡಿ ಮಾಡಿ ಮೊದಲೇ ಬಿತ್ತಿಗೆ ಕೆಲಸ ಮುಗಿಸುವವರೇ ಬಹಳ ಮಂದಿ. ಆಳುಗಳ ಮೂಲಕ ಅರಿತ ಗೋವಿಂದರಾಯರೂ ಅದೇ ನಿರ್ಧಾರಕ್ಕೆ ಬಂದಿದ್ದರು. "ಆದಷ್ಟು ಮಳೆ ಬರುವು ದರೊಳಗೆ ಉತ್ತು ಬೀಜ ಬಿತ್ತಿ ಬಿಡೋಣ. ಮಳೆ ಆರಂಭವಾದ ಮೇಲೆ ಜನ ಸಿಗಲಿಕ್ಕಿಲ್ಲ. ಹೊಳೆಯಾಚೆಯವರು ಬಂದರೆ ಕೆಲವು ಬೈಲು ಗದ್ದೆಗಳಲ್ಲಿ ನೇಜಿ ನೆಟ್ಟರೆ ಸರಿ. ಎಲ್ಲ ಗದ್ದೆಗಳಲ್ಲೂ ಈ ವರುಷ ಬೇಸಾಯ ಮಾಡಲು ನಮಗೆ ಅನುಕೂಲವಾಗಲಿಕ್ಕಿಲ್ಲ. ಅದಕ್ಕೆ ಬೇಕಾದ ಸಹಾಯ ಸಲಕರಣೆಗಳೂ ನಮ್ಮಲ್ಲಿಲ್ಲ. ಕ್ರಮೇಣ ಒಂದೊಂದನ್ನೇ ಮಾಡಿದ" ಎಂದು ಅವರು ರಾಜಾ ಬಂದಾಗಲೂ ಅವನಿಗೆ ವಿವರಿಸಿದ್ದರು. ಅವನು ಹೋದ ಮೇಲೆ ಅದನ್ನು ಮತ್ತೆ ಬೋರ ಮತ್ತು ಶುಕ್ರರ ಮುಂದೆಯೂ ಹೇಳಿದರು.

"ಈ ವರುಷ ಸೀವೇ ಒದಗಬೇಕು. ನಮ್ಮಲ್ಲಿ ಎತ್ತುಗಳೂ ಇಲ್ಲ. ನೇಗಿಲೂ ಇಲ್ಲ. ನೇಗಿಲು ಹಿಡಿದು ಗೊತ್ತೂ ಇಲ್ಲ. ಎಲ್ಲ ನಿಮ್ಮಿಂದಲೇ ಆಗ ಬೇಕು. ನೀವೇ ತಂದು ಮಾಡುವುದನ್ನೆಲ್ಲ ಸಕಾಲದಲ್ಲಿ ಮಾಡಬೇಕು. ಈ ಭೂಮಿಗೆ ನೇಗಿಲು ತಾಗದೆ ಬಹಳ ಕಾಲವಾಗಿದೆ. ನೆಲ ನಸೆ ಬರುವಂತೆ ತೋಡಿನ ನೀರು ಬಿಡೋಣ. ಎತ್ತುಗಳಿಗೇನೂ ತ್ರಾಸವಿಲ್ಲ. ಬೀಜಕ್ಕಾಗುವ ಭತ್ತವನ್ನು ಅಯ್ಯ ಬಂಗಾಡಿ ಪೇಟೆಯಿಂದ ತರಿಸಿಟ್ಟಿದ್ದಾರೆ" ಎಂದು ಗೋವಿಂದರಾಯರು ತಮ್ಮ ಮನಸಿನ ಆಶೆಯನ್ನು ತಿಳಿಸಿದರು.

"ಆಯ್ತಯ್ಯಾ. ಇವಕ್ಕೇನಾಗಬೇಕು? ಏಳೆಂಟು ದಿವಸಗಳ ಕೆಲಸ! ಬಂಗಾಡಿ ಊರಿನಲ್ಲಿದ್ದ ಹಾಗೆ ನೀವು ಬಿಟ್ಟಿ ಕೆಲಸ ಮಾಡಿಸುವುದಿಲ್ಲ. ಮತ್ತೆ ನಮಗೇನು ನಷ್ಟ?" ಎಂದು ಅವರು ಒಪ್ಪಿ ಕೊಂಡರು. ಮತ್ತು ಅವರಂತೆ ಒಂದು ಹೆಚ್ಚಿನ ಬೆಟ್ಟು ಮತ್ತು ಮಜಲು ಗದ್ದೆಗಳನ್ನು ಉತ್ತು ಬಿತ್ತಿದರು. ಅಂಗಳದ ಬದಿ ಬಿಸಿ ನೀರು ಕೊಟ್ಟಿಗೆಗೆ ತಾಗಿದ್ದ ಒಂದೆರಡು ಗದ್ದೆಗಳನ್ನು ತರಕಾರಿಗಳಿಗಾಗಿ ಬಿಟ್ಟರು. ಹೊಳೆಯ ಬದಿಯಲ್ಲಿದ್ದ ತಗ್ಗಿನ ಬೈಲು ಗದ್ದೆ ಗಳಲ್ಲಿ ಸಾಧ್ಯವಾದರೆ ನೇಜಿ ನೆಡಬೇಕೆಂದೂ ಅವುಗಳನ್ನು ಉಳಿಸಿದರು. ನೇಜಿಗಾಗಿ ಪ್ರತ್ಯೇಕ ಒಂದು ಕೆಸರು ಮಜಲಿನಲ್ಲಿ ಭತ್ತದ ಬೀಜ ಚೆಲ್ಲಿ ನೀರ ನ್ನೊಣಗಿಸಿ ಬಿಟ್ಟರು. ನದೀ ನೀರಿನ ಆಶ್ರಯವಿದ್ದುದರಿಂದ ಕೆಲವು ದಿವಸ ಗಳಲ್ಲೇ ಮುಡಿ ಮಣ್ಣಿನ ಗದ್ದೆಗಳಲ್ಲೂ ಮಜಲುಗಳಲ್ಲೂ ಹಸುರು ಸೂಜಿ ಗಳಂತೆ ಭತ್ತದ ಸಸಿಗಳು ಎದ್ದುವು.

ಭತ್ತದ ಸಸಿ ಮಾಡಿದ ಬಳಿಕ ಹುಣೆಗಳೆಲ್ಲ ಬೋಳು ಬೋಳಾಗಿ ಕಂಡವು ಗೋವಿಂದರಾಯರ ಕಣ್ಣಿಗೆ. "ಈ ಹುಣ್ಣೆಗಳಲ್ಲಿ ತೆಂಗು ಕಂಗುಗಳ ಸಸಿಗಳನ್ನು ಸಾಲಾಗಿ ನೆಟ್ಟರಾದೀತು" ಎಂಬ ವಿಚಾರವೂ ಸಟಕ್ಕನೆ ಸುಳಿ ಯಿತು. ಸರಿ. ಆ ಮೋಳಿ ಅಹ್ಮದ್ ಬ್ಯಾರಿಯನ್ನು ಕರೆದುಕೊಂಡು ಬಂಗಾಡಿ, ನಿತ್ತಬಾಗಿಲ್, ಇಂದ ಬೆಟ್ಟು ಗ್ರಾಮಗಳಲ್ಲಿ ಸಂಚರಿಸಿ ದೊಡ್ಡ ದೊಡ್ಡ ತೆಂಗಿನ ಮರಗಳಲ್ಲಿ ಬೆಳೆದ ತೆಂಗಿನ ಕಾಯಿಗಳನ್ನು ಕೊಯ್ಸಿ ಕೊಂಡು ಬಂದರು. ಕೆಲವು ದಿನಗಳ ವರೆಗೆ ಅಂಗಳದಲ್ಲಿ ಬಿಸಿಲಿಗಿಟ್ಟರು. ಹಸುರು ಸಿಪ್ಪೆ ಒಣಗಿದಾಗ ಬಿಸಿನೀರಿನ ಕೊಟ್ಟಿಗೆಯ ಬಳಿ ಬಂಜರು ಬಿಟ್ಟಿದ್ದ ಒಂದು ಗದ್ದೆಗೆ ತೋಡಿನ ನೀರು ಕುಡಿಸಿ ಅಗೆಸಿ ಕಳಮಾಡಿಸಿದರು. ಆ ಕಳದಲ್ಲಿ ಈ ತೆಂಗಿನ ಬೀಜಗಳನ್ನೂ ಅರ್ಧ ಮರ್ಧ ಹುಗಿಸಿದರು. ಗೆಂಧಾಳಿ ಮೊಳಕೆ ಒಡೆಯಲು ಮನೆಯ ಮುಳಿ ಹುಲ್ಲಿನಲ್ಲಿ ಮರೆಸಿಟ್ಟರು. ಒಂದಷ್ಟು ಅಡಿಕೆ, ಗೇರು ಬೀಜ ಗಳ ಸಸಿಗಳನ್ನೂ ಮಾಡಬೇಕೆಂಬ ಯೋಚನೆ ಹುಟ್ಟಿತು. ಬಂಗಾಡಿ ಪೇಟೆ ಯಿಂದ ಒಂದು ಕಳಸೆ ಗೇರು ಬೀಜವನ್ನೂ ತರಿಸಿದರು. ಅಡಿಕೆ ಬೀಜಗಳಿಗಾಗಿ ಬುಟ್ಟಿ ಕೊಟ್ಟು ಬೋರನನ್ನು ಮುಂಡಾಜೆಗೆ ಕಳಿಸಿದರು.

ಮಳೆಗಾಲವನ್ನು ನೆನಸಿಯೋ ಏನೋ ಆಕಾಶದಲ್ಲಿ ಅಲೆಯುತ್ತಿದ್ದ ಮೋಡಗಳ ಬಿಳಿ ಮೋರೆ ಕಂದಿತು. ಗಾಳಿ ಮೋಡಗಳನ್ನು ಕಡೆಯಿತು ಆಶಾ

ಶದ ಕಡೆಯುವ ಕಲ್ಲಲ್ಲಿ. ಆವರಿಂದ ಮತ್ತೆ ಗುಡು ಗುಡು ಗುಡು ಗುಡು ಎಂದೆನತೊಡಗಿತು. ಗಾಳಿಯಲ್ಲಿ ನೀರಿನ ಹನಿಗಳ ಪಸೆಯನ್ನು ಗುರುತಿಸಿದರು ಗೋವಿಂದರಾಯರು. "ಕರಾವಳಿಯಲ್ಲೆಲ್ಲೋ ಮಳೆಯಾಗಿರಬೇಕು. ಇನ್ನು ಬಹಳದಿನಗಳಿಲ್ಲ ಮಳೆಗಾಲಕ್ಕೆ" ಎಂದಂದು ಕೊಂಡರು. ಮಳೆಗಾಲ ಆರಂಭವಾಗುವುದರೊಳಗೆ ಬೈಲಿನಲ್ಲಿ ನೇಜಿ ನೆಟ್ಟು ಬಿಡಬೇಕೆಂದು ಅವರ ಯೋಚನೆ ಜಡಿಮಳೆಯಾಗಿ ಬೈಲುಗದ್ದೆಗಳಲ್ಲಿ ನೀರು ನಿಂತ ಮೇಲೆಯೇ ಅವನ್ನು ಉತ್ತು ನೇಜಿ ನೆಡಲು ಸಾಧ್ಯ. ಆದುದರಿಂದ ಜಿರಾಪರ್ತಿ ಮಳೆಯನ್ನೇ ಎಲ್ಲರೂ ನಿರೀಕ್ಷಿಸುವರು. ಆದರೆ ಗೋವಿಂದರಾಯರು ಮಳೆರಾಯನ ದಾರಿ ನೋಡುವ ಅಗತ್ಯವಿಲ್ಲ. ನದೀ ನೀರಿನ ಆಶ್ರಯವಿದೆ ಅವರ ಗದ್ದೆಗಳಿಗೆ. ಬೆಳಗಾದಾಗ ತುಂಬಿಸಿ ಕೋಣಕಟ್ಟಲು ಅನುಕೂಲ. ಜೋರು ಮಳೆ ಆರಂಭವಾದಮೇಲೆ ಸಕಾಲಕ್ಕೆ ಕೋಣವೂ ಸಿಗಲಿಕ್ಕಿಲ್ಲ. ನೇಜಿ ನೆಡಲು ಹೆಣ್ಣಾಳುಗಳು ದೊರೆಯುವುದೂ ದುರ್ಲಭ. ಆದುದರಿಂದ ಬೇಗನೇ ಮುಗಿಸಿ ಬಿಡಲು ಅವರ ಆತುರ. ಬೋರ ಅದಕ್ಕೆ ಅನ್ಯಥಾ ಅನಲಿಲ್ಲ.

ಬೋರ, ಮರುದಿನ ನಸುಕಿಗೇ ಕೋಣಗಳನ್ನು ಹೊಡೆದುಕೊಂಡು ಬಂದು ಅವುಗಳ ಕುತ್ತಿಗೆಗಳಿಗೆ ನೊಗಕಟ್ಟಿ ಎರಡು ಕೋಣಗಳ ಮಧ್ಯೆ ನೇಗಿಲನ್ನು ಎಳೆದು ಅದಕ್ಕೆ ಗೂರಿದ ಕೋಲನ್ನು ನೊಗಕ್ಕೆ ಬಿಗಿದ. ಮೊದಲಿನ ರಾತ್ರಿ ಗೋವಿಂದರಾಯರು ತೋಡಿನ ನೀರನ್ನು ಬೈಲುಗದ್ದೆಗಳಿಗೆ ಕಟ್ಟಿ ಬಿಟ್ಟಿದ್ದುದರಿಂದ ನೀರು ತುಂಬಿತ್ತು. ಹೆಚ್ಚಿನ ನೀರನ್ನು ಹೊಳೆಗೆ ಕಡಿದುಬಿಟ್ಟ ಬೋರ. ಹೂಡಲೂ ತೊಡಗಿದ. ಎಡಗೈಯಿಂದ ನೇಗಿಲನ್ನು ಒತ್ತಿ ಬಲಗೈಯಲ್ಲಿ ಕೋಲನ್ನು ಎತ್ತಿ, "ಕಾಳ ಬೊಳ್ಳ ಓ, ಓ" ಎಂದು ಅವನು ಓಂಕಾರ ಸ್ವರ ತೆಗೆಯುವುದೇ ತಡ ಕೋಣಗಳು ನೇಗಿಲನ್ನು ಎಳೆದುಕೊಂಡು ಹೋದುವು. ಉದ್ದಕ್ಕೆ ಒರ್ಪಳ ಹೂಡಿದ. ಅಡ್ಡಕ್ಕೆ ಇರ್ಪಳ ಮಾಡಿದ. ಹೀಗೆ ಎರಡು ಮೂರುದಿನ ಉತ್ತಾಗ ಬೈಲುಗದ್ದೆ ಕೆಸರಿನ ರಸಾಯನವಾದಂತಾಯಿತು. ಕಾಲಿಟ್ಟೊಡನೆ ಪಾದ ಕೆಸರಲ್ಲಿ ಹೂತು ಹೋಗುವುದು. ನೇಜಿ ನೆಡಲು ಗದ್ದೆ ಸಿದ್ಧವಾದುದರಿಂದ ಲಚ್ಚಿಮಿ ಹಸೀನ್, ಬೀಬಿ, ಪಾರೋತಿ ಬಂದರು. ನೀರಿದ್ದ ಮಜಲು ಗದ್ದೆಗೆ ಇಳಿದು ನೇಜಿಯನ್ನು ಹಿಡಿ ಹಿಡಿಯಾಗಿ ಹರಿದು ಒಂದೊಂದೇ ಸೂಡಿ ಮಾಡಿ

ಒಗೆವರು. ಗೊಬ್ಬರ ಹೊರುವ ಬೀಳಿನ ಕುಕ್ಕೆಯಲ್ಲಿ ತುಕ್ರ ಅದನ್ನು ತುಂಬಿಸಿದ. ಗೋವಿಂದರಾಯರು ತಲೆಗೆತ್ತಿ ಕೊಟ್ಟರು. ಬೈಲು ಗದ್ದೆಯಲ್ಲಿಲ್ಲಿ ಅವನ ಹೊತ್ತುಹಾಕಿದುದನ್ನು ಮೋಹನ ಒಂದೊಂದೇ ಸೂಡಿಯನ್ನೆತ್ತಿ ಗದ್ದೆಯಲ್ಲೆಲ್ಲ ನಿಲ್ಲಿಸಿದ. ನೇಜಿ ಹರಿದು ಮುಗಿದ ಮೇಲೆ ಲಚ್ಚಿಮಿ ಉಳಿದವರನ್ನು ಕರೆದುಕೊಂಡು ಬೈಲು ಗದ್ದೆಗೆ ಬಂದಳು. ಒಂದೊಂದೇ ಸೂಡಿ ಬಿಚ್ಚಿ ಮೂರು ನಾಲ್ಕು ಸಸಿಗಳನ್ನು ಕೂಡಿಸಿ ಸಾಲಾಗಿ ಮೂವರೂ ಬಗ್ಗಿ ಬಂದರು ನೆಡುತ್ತ. ಹಸೀನ್ ಬೀಬಿ ತಲೆಯ ಮೇಲೆ ದೊಡ್ಡ ಕೆಂಪು ಕರವಸ್ತ್ರವನ್ನು ಸುತ್ತಿದ್ದಳು. ಅದರ ಒಂದು ಚುಂಗು ಬೆನ್ನ ಮೇಲಿನ ರವಕೆಯಲ್ಲಿ ಓಲಾಡುತಿತ್ತು. ಹಸೀನ್ ಬೀಬಿ ಸೆರಗನ್ನೂ ಎದೆಯ ಮೇಲೆ ಎಳೆದುಕೊಂಡಿರಲಿಲ್ಲ. ಉದ್ದ ತೋಳಿನ ರವಕೆ ಮಾತ್ರ ಇದೆ. ತೊಟ್ಟ ಸೀರೆಗೆ ಸೆರಗಿಲ್ಲ. ಸೆರಗನ್ನು ಕಟ್ಟೆಯಾಗಿ ಬಿಗಿದವರು ಲಚ್ಚಿಮಿ ಮತ್ತು ಪಾರ್ವತಿ. ತಲೆಯ ಮೇಲೆ ಕಂಗಿನ ಪಾಳೆಯ ಮುಟ್ಟಲೆಯನ್ನೂ ಇಟ್ಟಿದ್ದರು.

ಗದ್ದೆಯ ಹುಣಿಯ ಮೇಲೆ ಕುಳಿತು ಕಾಲುಗಳನ್ನು ಕೆಸರಲ್ಲಿ ಇಳಿಬಿಟ್ಟ ಗೋವಿಂದರಾಯರು ಈ ಮುಟ್ಟಲೆಗಳನ್ನು ಕಂಡು, "ಲಚ್ಮಕ್ಕ, ನಿನ್ನ ಟೊಪ್ಪಿ ದೇಶೀ ಟೊಪ್ಪಿ. ಗಾಳಿ, ಮಳೆ, ಬಿಸಿಲು ತಲೆಗೆ ಏನೇನೂ ತಾಗುವಂತಿಲ್ಲ. ಅಂತಹ ಒಂದು ಟೊಪ್ಪಿ ನನಗೂ ಬೇಕೆಂದು ಮನಸ್ಸಾಗುತ್ತದೆ." ಎಂದು ರಸಿಕತನದ ಮಾತು ತೆಗೆದರು.

"ಅಯ್ಯಾ, ಮುಟ್ಟಲೆ ನೋಡಿ ನಿಮಗೆ ಮನಸ್ಸಾಯಿತು. ಅದನ್ನು ಮುಟ್ಟಿದರೆ ಮತ್ತೇನು ಮನಸ್ಸಾದೀತೋ?" ಎಂದು ತುಕ್ರ ಹೇಳಿ ನಕ್ಕ.

ಅವನ ಮಾತು ಕೇಳಿ ಎಲ್ಲರೂ ಗಹಗಹಿಸಿ ನಕ್ಕರು.

"ಮನಸ್ಸಾಗುತಿತ್ತಲ್ಲ. ಏನು ಮಾಡೋಣ? ತಲೆಯೆಲ್ಲ ಹಣ್ಣಾಯಿತು ಓಂಕ್ಲೆ, ಮುಟ್ಟದ ಈ ಜಬ್ಬಜ್ಜನನ್ನು ಯಾರು ಮೂಸಬೇಕು" ಎಂದು ಅವರು ಕೂಡಿಸಿದರು.

"ಅಯ್ಯಾ, ಓಂಕ್ಲೇ ನೀವು ಜಬ್ಬ ಎಂದನ್ನುತ್ತೀರಿ. ಬಂಗಾಡಿ ಪೇಟೆಯ ತಮ್ಮಯ್ಯಾಚ್ರಿಗಳು ಓಂಕ್ಲೇ ಮೂರನೇ ಹೆಂಡತಿ ಮಾಡಿಕೊಂಡರು ಮೊನ್ನೆ" ಎಂದು ತುಕ್ರ ಸುದ್ದಿ ಹೇಳಿದ.

"ಹೌದಾ ತುಕ್ರ? ಹಾಗಾದರೆ ಅಡ್ಡಿಯಿಲ್ಲ. ನಾನೂ ಆಗಬಹುದು. ಎಲ್ಲಾದರೂ ಒಂದು ಕನ್ಯಾ ನೋಡು"

"ಹುಡುಗಿ ಹೇಗಿರಬೇಕಯ್ಯಾ ನಿಮಗೆ?"

"ಫಸ್ಟ್‌ಕ್ಲಾಸ್! ಫ್ರೊಲ್ಲಕ್ಕ! ಫ್ರೊಲ್ಲಕ್ಕ ಬೇಕು ನೋಡು. ಆಕೆಯನ್ನು ನೋಡಿದ ಕೂಡಲೆ ತಕತಕ ಕುಣಿಯುವಂತಾಗಬೇಕು ನೋಡು."

ಅವರ ಮಾತುಕೇಳಿ ಲಚ್ಚಿಮಿ, ಹಸೀನ್ ಬೀಬಿ ಪಾರೋತಿಯರು ಬಿದ್ದು ಬಿದ್ದು ನಕ್ಕರು. ಅಲ್ಲಿಗೆ ಬಂದ ಸೀತಮ್ಮನವರಿಗೂ ನಗು ಬಂದಿತು.

"ಅಯ್ಯಾ, ಮತ್ತೆ ಅಮ್ಮ ನಿಮಗೆ ಊಟಕ್ಕೆ ಹಾಕಲಿಕ್ಕಿಲ್ಲ" ಎಂದಳು ಲಚ್ಚಿಮಿ ಸೀತಮ್ಮನವರ ಮುಖ ನೋಡಿ.

"ಹಾಂ, ಹೊಸ ಹೆಂಡತಿ ಬಂದ ಮೇಲೆ ಅವಳದೇ ರಾಜ್ಯ. ನನಗೇ ಅವಳು ಊಟ ಹಾಕಬೇಕಾದೀತು" ಎಂದರು ಸೀತಮ್ಮ.

"ನಿನಗೆ ಒಳ್ಳೆದಾಯಿತಲ್ಲ. ಕೆಲಸ ಮಾಡಿ ಮಾಡಿ ಸಣ್ಣ ಆಗಿದ್ದೇನೆಂತ ಗೊಣಗುಟ್ಟುತಿದ್ದೀಯಲ್ಲ. ಮತ್ತೆ ಕೂತಲ್ಲಿ ಅನ್ನ ಹಾಕಿದರೆ ನಿನ್ನ ಗಂಟೇನು ಹೋಯ್ತು?" ಎಂದು ಗೋವಿಂದರಾಯರು ಹೆಂಡತಿಯನ್ನು ಪ್ರಶ್ನಿಸಿದರು.

"ಅಗತ್ಯ ಆಗಲಿ. ಇನ್ನೊಂದಲ್ಲ. ಎರಡು ಮಾಡಿಕೊಳ್ಳಿ. ಜ್ವರ ಬಂದಾಗ ಕಾಲು ಒತ್ತಲು ಒಂದು ಜನವಾದರೂ ಆದೀತು. ನಾನೇನು ತಡೆಯುವುದಿಲ್ಲ ನನಗೂ ಪರಮಗುಣ" ಎಂದು ಸೀತಮ್ಮ ಒಪ್ಪಿಕೊಂಡು ಹೊರಟರು

ಎಲ್ಲರ ನಗು ನಿಂತ ಮೇಲೆ ಗೋವಿಂದರಾಯರು ಪುನಃ ಮಾತೆತ್ತಿ "ಹಾಂ, ಕುಶಾಲ್ ಸಾಕು. ಒಂದು ಪಾಡ್ದನ ಹೇಳು ಲಚ್ಮಕ್ಕ. ಬಾಯಿ ಯೊಳಗೆ ಪುಳ್ಕೊಟ್ಟೆ ಹಾಕಿ ಕೊಂಡಿದ್ದೀಯಾ ಏನು? ಹೇಳು" ಎಂದು ಒತ್ತಾಯ ಮಾಡಿದರು.

ಪಾರ್ವತಿ ತಾ ನ ನ ನಾ ತಾನ ತೇಲಾಡಿಸಿದಳು ಗಾಳಿಯಲ್ಲಿ. ಅವಳ ಆ ಕೊರಳ ವೀಣಾ ತಾನಕ್ಕೆ ಸರಿಯಾಗಿ ಲಚ್ಮಕ್ಕ ತನ್ನ ಪಾಡ್ದನ ಪೋಣಿ ಸಿದಳು.

"ಆಂ, ತಾ ನ ನ ನ ನಾ, ದಾನೆ ಪಣ್ಕೆ ಕೋಟಿ ಚೆನ್ನಯ್ಯನ ಮಹಿ ಮೆನ್" ಎಂದು ಲಚ್ಮಕ್ಕ ಕೋಟಿ ಚೆನ್ನಯ್ಯರ ಕಥೆಯ ಪಾಡ್ದನ ತೆಗೆದ್ದಾಳು

ಒಂದು ಸೊಲ್ಲು ಮುಗಿದ ಕೂಡಲೇ ಹಸೀನ್ ಮತ್ತು ಸಾರೋತಿ ಆ ೦ ತಾ ನನ ನಾ'' ಎಂದು ಪಲ್ಲವಿ ಹಾಡಿ ಹಿಮ್ಮೇಳದ ಧ್ವನಿಗೈದರು.

ಆಲಾಪನೆ ಕೇಳಿದ ಕೋಣಗಳು ಕಿವಿ ನಿಗುರಿಸಿದುವು. ಅವುಗಳ ಕಾಲ ಗತಿ ಮಂದವಾದುದನ್ನು ಕಂಡ ಬೋರ, "ಒ ಓ, ಓ, ಓಲೆ, ಓ ಬೇಲೆ" ಎಂದು ರಾಗ ಎಳೆದ. ಈ ತಾನ ವಿತಾನಕ್ಕೆ ಸರಿಯಾಗಿ ಕೋಣಗಳೂ ಹೆಜ್ಜೆಯಿಟ್ಟುವು. ಈ ಧ್ವನಿ ತರಂಗದೊಂದಿಗೆ ಗಾಳಿಯೂ ನಲಿದಾಡಿತು. ನೆಟ್ಟ ಭತ್ತದ ಸಸಿಗಳ ಹಸುರು ಅಲಗುಗಳಂತಹ ಎಲೆಗಳು ತಲೆದೂಗಿ ದುವು.

ಜಡಿಮಳೆ ಆರಂಭವಾದಾಗ, ನೆಟ್ಟನೇಜಿ ಹಸುರೊಡೆದು ನೆಲದಲ್ಲಿ ಭದ್ರವಾಗಿದ್ದುವು. ನೆಟ್ಟಾಗ ನೀಡಿಕೊಂಡಿದ್ದ ಹಳೇ ಒಣಗಿದ ಎಸಳುಗಳು ನೀರ ಮೇಲೆ ಬಿದ್ದು ಕೊಳೆತುವು. ಕೊಳೆತ ವಸ್ತುಗಳನ್ನು ತಿನ್ನಲು ಸಣ್ಣ ಸಣ್ಣ ತರು ಮೀನುಗಳು ನುಸುಳಿದುವು ನೀರಲ್ಲಿ. ಕಪ್ಪೆಗಳ ಬಳಗಕ್ಕೂ ಕಡಿಮೆಯಿರಲಿಲ್ಲ. ಅವುಗಳ ಟ್ರ್ರಂ ಟ್ರ್ರಂ ಕೂಗಾಟ ರಾತ್ರಿ ಮಲಗಿದ್ದ ಮನೆಯವರೆಲ್ಲರಿಗೂ ಕೇಳಿಸುತಿತ್ತು. ನೀರು ಕೋಳಿಗಳು ಬೆಳಗಿನ ಜಾವಕ್ಕೆ "ಕುಂವಾ ಕುಂವಾ'' ಎಂದು ಕರೆದುವು. ಮಳೆಗೆ ತಲೆ ನೈ ತೋಯದಂತೆ ಗೊರಬು ಹಾಕಿಕೊಂಡು ಗದ್ದೆಗಳ ಹುಣಿಗಳ ಮೇಲೆ ಗೋವಿಂದರಾಯರು ನಡೆದಾಗ ಒಂದೊಂದೇ ಕಪ್ಪೆಗಳು ಬುಳುಕ್ ಬುಳುಕ್ ಎಂದು ಗದ್ದೆಯ ನೀರಿಗೆ ನೆಗೆದುವು. ನೀರು ಕೋಳಿ ಅಲ್ಲಿಂದೆದ್ದು ಗದ್ದೆಯ ಮತ್ತೊಂದು ಮೂಲೆಗೆ ಹಾರಿ ಸಸಿಗಳ ನಡುವೆ ಅಡಗಿತು. ಹುಣಿಗಳ ಬದಿಗಳಲ್ಲಿ ಹುಲ್ಲುಗಳೊಂದಿಗೆ ಗರ್ಗ, ಕದಿಕೆ, ಕಡಿರು ಬೇರು, ನಾಚಿಕೆ ಮುಳ್ಳು, ಒಂದೆಲಗ ಸಸ್ಯಜಾತಿಗಳೂ ಬೆಳೆದುವು. ಗದ್ದೆಗಳನ್ನು ಸಿಂಹಾವಲೋಕಿಸಿ ಮರಳಿದಾಗ ಗೋವಿಂದರಾಯರು ಒಂದೆಲಗವನ್ನು ಹರಿದು ನೀರಲ್ಲಿ ತೊಳೆದು ತರುವ ಪದ್ಧತಿ. ಅದನ್ನು ಅಡಿಗೆ ಮನೆಗೆ ತಂದು, "ಸುವರ್ಣಗಡ್ಡೆ ಕುಂಬಳ ಸವುತೆಗಳನ್ನು ದಿನಾ ತಿಂದು ತಿಂದು ನನಗೂ ಬೇಸರವಾಗಿದೆ. ಬೇರೇನಿದೆ ಈ ಮಳೆಗಾಲಕ್ಕೆ ಎಂದನ್ನುತಿದ್ದಿಯಲ್ಲ. ಇಗೋ ತಿಮರೆ. ತಂಬ್ಳಿ ಮಾಡು ನೋಡೋಣ'' ಎಂದು ಹೆಂಡತಿ ಮುಂದೆ ನುಡಿಯುವರು.

"ಅವರಲ್ಲಿ ಸಣ್ಣ ಹುಳವಿದ್ದೀತು. ನನಗೆ ಕಣ್ಣು ಸರಿ ಕಾಣುವುದಿಲ್ಲ ಅವಸರಕ್ಕೆ ಆಗುವ ಕೆಲಸವೂ ಅಲ್ಲ. ಒಂದು ಮಿನಿಟು ನೀವೇ ಕುಳಿತು ಅದನ್ನು ನೋಡಿಕೊಡಿ" ಎಂದು ಸೀತಮ್ಮ ಹೇಳುವರು.

"ಆಗಲಿ. ಸೀತಾದೇವಿಯ ಅಪ್ಪಣೆ! ಶಿರಸಾವಹಿಸಲಾಯ್ತು!" ಎಂದು ಮುಗುಳು ನಗುತ್ತ ಅಲ್ಲೇ ಕುಳಿತು ಒಂದೊಂದೇ ಒಂದೆಲಗದ ಬಳ್ಳಿಯಲ್ಲಿ ನಾಲ್ಕೈದು ಕಡೆ ಬಿಟ್ಟ ಬೇರನ್ನು ಕಿತ್ತೊಗೆದು, ನೋಡಿ ಪಾತ್ರೆಯಲ್ಲಿ ತುಂಬಿಸುವರು. ಒಮ್ಮೊಮ್ಮೆ ದಿನ ಮನೆಯ ಮುಂದಿನ ಗುಡ್ಡಕ್ಕೆ ತೆರಳಿ ಕೇಪಳ ಹೂವನ್ನು ಅವರು ತರುವುದುಂಟು. ಬುದ್ದಿನ ಕಾಳುಗಳೊಡನೆ ಕೇಪಳದ ಹೂಗಳನ್ನೂ ಹುರಿದು ಹೆರಿಮಣೆಯಲ್ಲಿ ತೆಂಗಿನ ಹೂವನ್ನು ಹೆರೆದುಹಾಕಿ ಉಪ್ಪು, ಹುಳಿ, ಮೆಣಸುಗಳೊಡನೆ ಕಡೆದರೆ ಕೇಪಳದ ಬಜ್ಜಿಯೂ ಬಾಯಿಗೆ ರುಚಿ. ಮಳೆಗಾಲದಲ್ಲಿ ಅದು ಅಪರೂಪ ವಸ್ತು. ಒಂದೆಲಗವೇ ಗತಿ. ಒಂದೆಲಗದ ಎಲೆ ಕೀಳುವಾಗ ಒಂದೊಂದೇ ಹಿಂದಿನ ಮುಂದಿನ ಮಧುರ ದಿನಗಳ ಮಧುರ ಮಾತುಗಳನ್ನು ಅವರು ಹೆಂಡತಿಯ ಮುಂದೆ ಹೇಳುವುದುಂಟು. ಮಳೆಗಾಲದ ದಿನಗಳು ಸಂದುತ್ತ ಬಂದುದ ರಿಂದ ಈಗ ಹರಿಯ ಸುದ್ದಿಯನ್ನೇ ಅವರು ತೆಗೆದರು.

"ಹರಿ ಹೊರಡುತ್ತಾನಂತಲ್ಲೇನೇ? ಎಲ್ಲಿಗೆ ಏನು ಎಂದು ಏನಾದರೂ ನಿನ್ನೊಡನೆ ಹೇಳಿದನೇನು?"

"ಅವನ್ನೆಲ್ಲ ನಾನು ಯಾಕೆ ಕೇಳುತ್ತೇನೆ? ಅವನೂ ಯಾಕೆ ಹೇಳು ತ್ತಾನೆ? ಎಲ್ಲಿಗೆ ಹೋಗುತ್ತಾನೆಂದು ಅವನಿಗೂ ಗೊತ್ತಿಲ್ಲ. ಆದರ ಮಾತೆ ತ್ತಿದರೆ "ಎಲ್ಲಿಗಾದರೂ ಸರಿ" ಎಂದಂದು ಬಿಡುವ. ಒಟ್ಟು ನನ್ನ ದುರಾದೃಷ್ಟ!" ಎಂದು ಅವರು ಕಣ್ಣೀರು ಸುರಿಸಿದರು.

ಹರಿ ಮನೆ ಬಿಟ್ಟು ಹೊರಟಾಗಲೂ ಸೀತಮ್ಮನವರು ಬಹಳ ಅಳ ತೊಡಗಿದರು. "ಯಾಕೆ ಅಳುತ್ತೀ? ಅವನೇನು ಸತ್ತುಂಬಿಟ್ಟನೇನು? ನಾಲ್ಕು ಅಕ್ಷರ ಕಲಿತಿದ್ದಾನಲ್ಲ! ಎಲ್ಲಾದರೂ ಬದುಕಿಯಾನು! ಸಹರಾ ಮರು ಭೂಮಿಗೆ ತೆರಳಿದರೂ ತನ್ನ ಹೊಟ್ಟೆ ತಾನು ತುಂಬಿಸಿಕೊಳ್ಳದೇ ಇರಲಾರ. ಇಲ್ಲಿದ್ದರೆ ಅವನಿಂದಾಗುವ ಕೆಲಸವಾ ಇದೆಲ್ಲ? ಒಂದು ಕೊಡ ನೀರೆಳೆಯುವ

ದೇಹತ್ರಾಣ ಅವನಿಗಿಲ್ಲ. ಪೆಸ್ ಹರಿದರೇ ಅವನ ಪ್ರಾಣ ಉಳಿದೀತು. "ನಗೆ ಮರುಳು" ಎಂದು ಗೋವಿಂದರಾಯರು ಸ್ವಲ್ಪ ರೇಗಿಯೇ ಸಂತೈಸಬೇಕಾಯ್ತು ಆದರೂ ಮನೆಯ ಮೇಲಿರುವ ರಸ್ತೆಯವರೆಗೂ ಸೀತಮ್ಮನವರು ಕಣ್ಣುಗಳನ್ನೊರಸಿಕೊಳ್ಳುತ್ತ ಬಂದರು.

"ನೀನು ಇರಮ್ಮ, ನಾನು ಬರುತ್ತೇನೆ" ಎಂದು ಹರಿ ಹೇಳಿ ನಮಸ್ಕರಿಸಿದ.

"ನಾವು ಜೀವಂತವಿರುವ ವರೆಗೆ ವರುಷಕ್ಕೊಮ್ಮೆಯಾದರೂ ಬಾರದೆ ಇರಬೇಡ" ಎಂದು ಗದ್ಗದಿತ ಕಂಠದಿಂದ ಬೀಳ್ಕೊಟ್ಟರು ತಾಯಿ.

ಜೀವಂತವಿದ್ದರೆ ಬರುತ್ತೇನೆ" ಎಂದುಸುರಿ ಹರಿ ಹೊರಟ.

## ೯ನೆಯ ಅಧ್ಯಾಯ

ಗೋವಿಂದರಾಯರು ಅಲ್ಲೇ ಮಗನನ್ನು ಬೀಳ್ಕೊಳ್ಳಲಿಲ್ಲ. ಮುಂಡಾಜೆಯ ವರೆಗೆ ತೆರಳಿ, ಬಸ್ಸಿನಲ್ಲಿ ಅವನನ್ನು ಕುಳ್ಳಿರಿಸಿ ಬರಲು ಅವರೂ ಅವನನ್ನು ಹಿಂಬಾಲಿಸಿದರು. ಅವರ ಮನಸ್ಸು ವ್ಯಸನದಿಂದಿದೆ. ಮಗನೊಡನೆ ಹೃದಯ ಬಿಚ್ಚಿ ನಾಲ್ಕು ಮಾತುಗಳನ್ನಾಡಲು ಮನಸ್ಸಾಗಿದೆ. ಮನೆಯಲ್ಲಿ ಅದಕ್ಕೆ ಅವಕಾಶವೂ ಇರಲಿಲ್ಲ. ದಾರಿಯಲ್ಲಿ ಯಾರ ಆತಂಕವೂ ಇಲ್ಲ. ಏಕೆಂದರೆ ಈ ರಸ್ತೆಯಲ್ಲಿ ಮನುಷ್ಯ ಸಂಚಾರವೇ ಕಡಿಮೆ. ಆದುದರಿಂದ ಸ್ವಲ್ಪ ದೂರ ಬಂದ ಬಳಿಕ ಅವರು ಒಂದೊಂದೇ ಮಾತು ತೆಗೆದರು.

“ಹರಿ, ನೀನು ಮನೆಯಿಂದ ಹೊರಟು ಬಂದಿ. ನಿಜ. ಎಲ್ಲಿಗೆ ಹೊರಟಿದ್ದೀ? ಯಾವ ಊರಿಗೆ? ” ಎಂದು ಮತ್ತೆ ಹಿಂದೆ ಕೇಳಿದ್ದ ಪ್ರಶ್ನೆಯನ್ನೇ ಪುನರುಚ್ಚರಿಸಿದರು.

“ಎಲ್ಲಾದರೂ ಹೋದ” ಎಂದು ಹಿಂದಿನ ಉತ್ತರವೇ ಬಂತು.

“ಎಲ್ಲಾದರೂ ಎಂದು ಮತ್ತೆ ಹೇಳುತ್ತೀಯಲ್ಲ. ನನ್ನೊಡನೆ ಮುಚ್ಚುಮರೆ ಮಾಡಬೇಡ. ನಾನು ನಿನ್ನನ್ನು ತಡೆಯುವುದಿಲ್ಲ. “ಇಲ್ಲೇ ಇರು” ಎಂದು ಹೇಳಿ ಇರಿಸಿಕೊಳ್ಳಲೂ ನನಗೆ ತ್ರಾಣವಿಲ್ಲ. ನಿನ್ನ ಅಣ್ಣನಿಗೆ ಅನುಕೂಲವಿಲ್ಲವೆಂಬುದು ನಿನಗೂ ಗೊತ್ತು. ಆದುದರಿಂದ ನಿನ್ನನ್ನು ವೃಥಾ ತಡೆಯಲು ನನಗಿಷ್ಟವಿಲ್ಲ! ಒಮ್ಮೊಮ್ಮೆ ವಿಚಾರಿಸಿದರೆ ಅದಕ್ಕಾಗಿ ನಾನು ವ್ಯಸನಪಡುವುದೂ ತಪ್ಪೆಂದೆನಿಸುತ್ತದೆ. ಆದರೆ ನೀನಿನ್ನೂ ಸಣ್ಣವ. ನಿನ್ನಷ್ಟು ವಯಸ್ಸಿಗೆ ಬಂದಾಗ ನಾನು ಮೆಟ್ರಿಕ್‌ನಲ್ಲೂ ಇದ್ದಿರಲಿಲ್ಲ. ನೀನು ಆ ಪರೀಕ್ಷೆ ಮುಗಿಸಿದ್ದೀ. ಮನೆ ಬಿಟ್ಟು ಹೊರಟಿದ್ದಿ. ನಮಗೆ ಪಿತ್ರಾರ್ಜಿತ ಮನೆಯೂ ಇಲ್ಲ. ಇದ್ದುದನ್ನು ಕಳೆದುಕೊಂಡೆವು. ಆದುದರಿಂದ ಇರಬೇಕೆಂದೂ ನಾನು ಒತ್ತಾಯ ಮಾಡುವುದರಲ್ಲಿ ಅರ್ಥವಿಲ್ಲ. ಅವರವರ ತಲೆಗೆ ಅವರವರದೇ ಕೈ. ಅವರ ದಾರಿಯನ್ನು ಅವರೇ ನೋಡಿಕೊಳ್ಳಬೇಕಾಗಿದೆ. ಆದರೆ, ಹೊರ

ಟಾಗ ಯಾವ ದಾರಿ? ಯಾವ ಗುರಿ? ಇವುಗಳ ಕಲ್ಪನೆಯಾದರೂ ಮನುಷ್ಯ ನಿಗೆ ಬೇಕು. ಅದಕ್ಕಾಗಿ ಕೇಳಿದೆ."

ಏನೊಂದೂ ತೋಚದ ಹರಿ, "ಯಾವ ದಾರಿ? ಹೋದದ್ದೇ ದಾರಿ. ಮುಟ್ಟಿದುದೇ ಗುರಿ" ಎಂದ.

ಗೋವಿಂದರಾಯರಿಗೆ ಅದೂ ಇಷ್ಟವಾಗಲಿಲ್ಲ. ಅವರ ಧ್ವನಿ ಸ್ವಲ್ಪ ಏರಿತು. "ಹೀಗೆ ಮಾತನಾಡಿದರೆ ಏನರ್ಥ?" ಎಂದು ಅವರು ಪ್ರಶ್ನಿಸಿ ಮತ್ತೂ ನುಡಿದರು.

"ಹಿಂದೊಮ್ಮೆ ಕೂಡಾ ಈ ವಿಷಯ ಬಂದಾಗ, 'ಎಲ್ಲಾದರೂ ಹೋದ. ಬೇಡಿ ತಿಂದ' ಎಂದು ನುಡಿದಿದ್ದಿ. ನಿನಗೆ ನೆನಪಿದೆಯಾ? ನೀನು ಕುಶಾಲಿಗೆಂದಿಯೋ ಅಥವಾ ತಿಳಿದು ಹೇಳಿದಿಯೋ ನಾನರಿಯೆ. ಅದೇನಿದ್ದರೂ ಬೇಡಿ ತಿನ್ನುವ ವಿಚಾರ ಎಂದೆಂದೂ ತಲೆಯಲ್ಲಿ ಸುಳಿಯಕೂಡದು. ಕೈಲಾಗದವರು, ಕೈ ಕಾಲುಗಳಿಲ್ಲದವರು ಬೇಡುವರು. ಬೀಡಿಲ್ಲದವರು ಬೇಡುವರು. ಬೇಡುವ ಮೊದಲು ಮಾನ ಮರ್ಯಾದೆಗಳೆಲ್ಲವನ್ನೂ ಬಿಡಬೇಕಾಗುತ್ತದೆ. ಮಾನ ಹೋದ ಮೇಲೆ ಮಾನವ ಬದುಕಿ ಏನು ಫಲ? ದ್ರೌಪದೀ ಉದಯರಾಗದಲ್ಲಿ ಒಂದು ಪದ್ಯವಿದೆ. "....ಪಾವಕನಾ ಜ್ವಾಲೆಯಲಿ ಹೊಕ್ಕು ಹೊರಡಲು ಬಹುದು। ತೀವಿರ್ದ ಮಡುವ ಧುಮುಕಲು ಬಹುದು। ಗರಳವನು ಸೇವಿಸಲು ಬಹುದು। ಜಗದಿ॥ ಸಾವಿಗಂಜದೆ ಕೊರಳ ಕತ್ತರಿಸಿಕೊಳಬಹುದು। ಜೀವ ಇದ್ದಂತೆ ಲಜ್ಜೆಯ ತೊರೆಯ ನಾರ್ಕೆ। ಆವ ಪರಿಯಲಿ ನಿನ್ನ ನಂಬಿದ ಅನಾಥೆಯಾ ಅಭಿಮಾನ ಕಾಯೋ"॥ ಎಂದು ನಾನು ಹಾಡುತ್ತಿದ್ದುದನ್ನು ನೀನು ಕೇಳಿರಲೂ ಬಹುದು. ಮಾನ ಅಂದರೆ ಅಷ್ಟು ದೊಡ್ಡದು. ಮಾನ ಮರ್ಯಾದೆ ಬಿಟ್ಟವನು ಊರಿಗೆ ದೊಡ್ಡವನು ಎಂಬ ಗಾದೆಯೇ ಉಂಟಲ್ಲ?"

"ಇಲ್ಲಪ್ಪಯ್ಯ, ನಾನು ಸಹಜ ಒಂದು ಮಾತಿಗಂದೆ. ತಮಾಷೆಗೆ"

"ಆಗಲಿ. ತಮಾಷೆಗೇ ಆಗಲಿ. ನಿನ್ನ ಬಾಯಿಂದ ದೇವರು ಆಡಿಸಿದ್ದುದೂ ಒಳ್ಳೆಯದಾಯಿತು. ಇಲ್ಲದಿದ್ದರೆ ನಾನು ಹೇಳಬೇಕಾದ ಪ್ರಸಂಗವೂ ಬರುತಿದ್ದಿಲ್ಲ. ನೀನು ಪರವೂರಿಗೆ ಹೊರಟಾಗ ನಾಲ್ಕು ಹಿತೋಪದೇಶ ಮಾಡಬೇಕಾದುದು ನನ್ನ ಕರ್ತವ್ಯ. ಪರಸ್ಥಳದಲ್ಲಿ ಯಾವ ಪರಿಸ್ಥಿತಿ ಉದ್ಭವಿಸಬಹುದೆಂದು ಊಹಿಸುವುದೂ ಕಠಿನ. ಭವಿಷ್ಯದ ಗರ್ಭದಲ್ಲಿ ಏನೇನು ಅಡಗಿ

ವೆಯೋ ಯಾರು ಬಲ್ಲರು? ಬೇಡುವ ಕಾಲವೇ ಒದಗಬಹುದು. ಯಾರಿಗೂ ಬೇಡದ ಕಂಗಾಲುತನ ಬಂದೀತು. ಆದರೆ ಏನಾದರೂ ಅದಕ್ಕೀಳಿಯು ಬೇಡ. ಅದಕ್ಕಿಂತ ದೊಡ್ಡ ಅಪಮಾನ ಬೇರೊಂದಿಲ್ಲ. ಇಂದಿಗೆ ನಮ್ಮ ಅಧಃಪತನ ನಾಪಂತೆಯೇ ಸೈ. ಸ್ವಾಭಿಮಾನಿಗೆ ಅದು ಹೇಳಿದುದದಲ್ಲ. ಸ್ವಾಭಿಮಾನ ನಮ್ಮ ಜನರಲ್ಲಿ ಶೂನ್ಯವಾಗಿರುವುದರಿಂದಲೇ ನಾವು ಅಧೋಗತಿಗಿಳಿದಿದ್ದೇವೆ. ನಮ್ಮ ದೇಶವೂ ಅಧೋಗತಿಗಿಳಿದಿದೆ. ಪಾಪ, ಗಾಂಧಿ ಮಹಾತ್ಮ ಒಬ್ಬರಿಂದೆಷ್ಟೆಯೇ ಏನು ಮಾಡಿಯಾನು?"

"ಹೌದು. ಏನು ಮಾಡಿಯಾರು ಗಾಂಧಿಜಿ? ಅವರು ಜಾದೂ ವಿದ್ಯೆ ಕಲಿತಿಲ್ಲ" ಎಂದುಸುರಿದ ಹರಿ.

"ಜಾದೂವಿದ್ಯೆ ಉಪಯೋಗಿಸಿದರೂ ಬ್ರಿಟಿಶರು ಬಗ್ಗುವವರಲ್ಲ. ಮಹಾ ಕುತಂತ್ರಿಗಳು ಅವರು. ಮಾಯಾವಿಗಳು. ಬಂಗಾಲ ಗೆದ್ದು ಗೌಡ ಬಂಗಾಳಿ ವಿದ್ಯೆಯನ್ನು ಕಲಿತಿದ್ದಾರೆ. ಅವರಿಗೆ ಗಾಂಧೀ ಮಹಾತ್ಮನ ಅಸಹಕಾರವೊಂದೇ ಮದ್ದು."

ಹರಿ ಆಲಿಸುತ್ತ ನಡೆದ.

"ಹೌದಾ ಹರಿ, ನೀನೂ ಗಾಂಧಿ ಚಳವಳಿಯಲ್ಲಿ ಸೇರುತ್ತೀಯಾ ಏನು ಮತ್ತೆ? ಹಾಗೆ ಲಕ್ಷಣ ಕಾಣಿಸುತ್ತಿದೆ ನನಗೆ ನಿನ್ನ ಮಾತಿನ ಮೇಲಿನಿಂದ" ಎಂದು ಪುನಃ ಕೇಳಿದರು ತಂದೆ.

"ಸೇರಿದರೆ ನಿಮಗೇನಾದರೂ ಬೇಸರ ಇದೆಯಾ?"

ಅದಕ್ಕೆ ಉತ್ತರ ಕೊಡುವ ಮೊದಲು ಗೋವಿಂದರಾಯರು ಸ್ವಲ್ಪ ತಡೆದರು. ಇದಿರಿಗೆ ಏರೂ ಬಂದಿತು. ಉಚ್ಛ್ವಾಸ ಬಿಡುತ್ತಾ ಮೌನದಿಂದ ಏರಿ ಸಮತಟ್ಟಾದ ರಸ್ತೆಯಲ್ಲಿ ನಾಲ್ಕು ಮಾರು ನಡೆದ ಮೇಲೆ ಉತ್ತರ ಕೊಟ್ಟರು.

"ನನಗೇನು ಬೇಸರ? ಅದು ನಿನ್ನಿಷ್ಟ. ಅದಕ್ಕೆ ನಾನು ಅಡ್ಡ ಬರುವುದಿಲ್ಲ. ಆದರೆ ಮೊದಲು ನೀನೇ ಎದೆ ಗಟ್ಟಿ ಇದೆಯೋ ಇಲ್ಲವೋ ಎಂದು ಮುಟ್ಟಿಕೋ. ಗಟ್ಟಿಯಿದ್ದರೆ ಸರಿ. ಅಳ್ಳೆದೆಯವರಿಂದ ಅದು ಆಗುವ ಹೋಗುವ ಕೆಲಸವಲ್ಲ. ಅಂಜಿಕೆಯಿದ್ದರೆ ಅರ್ಧದಲ್ಲೇ ಗಾಂಧಿಯನ್ನು ನಡು ನೀರಲ್ಲಿ ತೊರೆದು ಬಿಡುವರು. ಅದರಿಂದ ಯಾರಿಗೂ ಹಿತವಾಗಲಾರದು. ಆದುದರಿಂದ ಸೇರುವುದೇ ಆದರೆ ಮೊದಲು ನಿರ್ಭಯನಾಗಿರಬೇಕು. ನಿರ್ಭಯ

ನಾಗಿದ್ದ ಮನುಷ್ಯನಿಗೆ ಪೋಲೀಸರ ಲಾಠಿ, ಈಟಿ, ಬಂದೂಕು, ಬಾಂಬು ಜೈಲುಗಳು ಭಯವಿಲ್ಲ. ನಿರ್ಭೀತಿಯೇ ಎಲ್ಲವನ್ನೂ ಇದಿರಿಸುವ ಗುರಾಣಿ."

"ಅದು ಸತ್ಯ. ಗಾಂಧೀಜಿ ಆ ಸ್ಥಿತಿಗೆ ಮುಟ್ಟಿದ್ದಾರೆ, ಆದುದರಿಂದಲೇ ಬಲಿಷ್ಠ ಬ್ರಿಟಿಶ್ ಸಾಮ್ರಾಜ್ಯವನ್ನು ಪ್ರತಿಭಟಿಸುವ ಧೈರ್ಯ ಅವರಲ್ಲಿದೆ."

"ಹೌದು. ಗಾಂಧಿ ನಿರ್ಭಯ ಪುರುಷ. ಅದರೊಂದಿಗೆ ಅವನು ನಿರಹಂಕಾರಿ. ಸ್ವಾಭಿಮಾನವಿದ್ದರೂ ಮಮಕಾರವಿಲ್ಲ. ಮಮಕಾರವೇ ದುರಹಂಕಾರ. ನಿರಹಂಕಾರ ಮತ್ತು ದುರಹಂಕಾರ ಈ ಎರಡು ಪದಗಳಲ್ಲಿ ಒಂದು ಅಕ್ಷರ ವ್ಯತ್ಯಾಸ. ಆದರೆ ಅರ್ಥವೆಷ್ಟು ಭಿನ್ನ? ಒಂದು ಸಾತ್ವಿಕ. ಇನ್ನೊಂದು ತಾಮಸಿಕ ಶಕ್ತಿ. ತಾಮಸಿಕ ದುರಹಂಕಾರವೇ ಕೌರವನ ಮೃತ್ಯುವಿಗೆ ಕಾರಣ. ನಿರಹಂಕಾರವೇ ಮಹಾತ್ಮನ ಏಳ್ಗೆಯ ಮೂಲ. ಅದರೊಂದಿಗೆ ನಿರ್ವಂಚನೆಯ ಕರ್ಣಕವಚವನ್ನೂ ಧರಿಸಿದ್ದಾನೆ. ಸತ್ಯ, ಸದಾಚಾರ, ಅಹಿಂಸೆ ಇವೆಲ್ಲ ನಿರ್ವಂಚನೆ ಶಕ್ತಿಯ ವಿವಿಧ ಸ್ವರೂಪಗಳು. ನಿರ್ಭೀತಿ, ನಿರಹಂಕಾರ, ನಿರ್ವಂಚನೆ ಮೂರನ್ನೂ ದಾರಿಯ ಬುತ್ತಿಯನ್ನಾಗಿ ನೀನು ಕಟ್ಟಿಕೊಂಡರೆ ಅಗ್ನಿ ಸುಡಲಿಕ್ಕಿಲ್ಲ. ನೀರು ದಾರಿ ಬಿಟ್ಟು ಕೊಟ್ಟೀತು. ಯಾವ ಮನುಷ್ಯ ಏನು ಮಾಡಿಯಾನು ನಿನಗೆ? ನೀನು ಯಾರಿಗೂ ತಲೆತಗ್ಗಿಸಬೇಕಾಗಿಲ್ಲ ಈ ಜಗತ್ತಿನಲ್ಲಿ."

ಹರಿ ನಿರನುಭವಿ. ವಯಸ್ಸೂ ಕಿರಿದು. ಗೋವಿಂದರಾಯರು ಆಡಿದುದದ್ದೆಲ್ಲ ಸಂಪೂರ್ಣ ಅರ್ಥವಾಯಿತೆಂದು ಹೇಳಲಿಕ್ಕಾಗದು. ಆದರೂ ತಂದೆಯ ಬಗ್ಗೆ ಬಹಳ ಗೌರವದ ಭಾವ ಅವನ ಹೃದಯದಲ್ಲಿ ತಲೆದೋರಿತು. ಸುಮ್ಮನೆ "ಹುಂ, ಹುಂ" ಎಂದು ಹೇಳುತ್ತ ಬಂದ. ಮಾತಿನಲ್ಲಿ ದಾರಿ ನಡೆದುದೂ ಗೊತ್ತಾಗಲಿಲ್ಲ. ಮುಂಡಾಜೆಯೂ ಸಮೀಪಿಸಿದುದುದನ್ನು ಕಂಡು 'ಹರಿ, ನೀನು ಎಲ್ಲಿಗೆ ಹೊರಟೆ? ಯಾವ ಊರಿಗೆ?" ಎಂದು ಗೋವಿಂದರಾಯರು ಪುನಃ ಬಹಳ ಕನಿಕರದಿಂದ ಕೇಳಿದರು.

ಅವನ ಕಣ್ಣುಗಳಲ್ಲಿ ನೀರು ತುಂಬಿದುವು. "ಈಗಂತೂ [ಮಂಗಳೂರಿಗೆ ಅಲ್ಲಿ ಏನೇನಾಗುತ್ತದೋ ನೋಡಬೇಕು. ಏನೂ ಕೆಲಸ ಕೈಗೂಡದಿದ್ದರೆ ಮುಂಬಯಿಗೆ "ಎಂದು ಹರಿ ಮನಸ್ಸಿನಲ್ಲಿದ್ದುದನ್ನು ನುಡಿದ.

"ಹಾಂ, ನೀನು ಹೇಳಿದಿಯಲ್ಲ. ಅದೇ ನನಗೆ ಪರಮ ಸಂತೋಷ. ಆಗಲಿ ದೇವರು ನಿನಗೆ ಒಳ್ಳೆಯದನ್ನೇ ಮಾಡಲಿ" ಎಂದು ಅವರು ಆಶೀರ್ವದಿಸಿ ಸ್ವಲ್ಪ ಹೊತ್ತು ಮೌನವಾಗಿಯೇ ದಾರಿಯನ್ನತಿಕ್ರಮಿಸುತ್ತ ನಡೆದರು. ರಸ್ತೆಯ ಮಧ್ಯೆ ಅಲ್ಲಲ್ಲಿ ಹೊಂಡಗಳು ಬಿದ್ದಿದ್ದುವು. ಕೆಲವೆಡೆ ಚೂಪು ಬೆಣಚು ಕಲ್ಲುಗಳು. ಅವುಗಳ ಮೇಲೆ ನಡೆದ ಗೋವಿಂದರಾಯರಿಗೆ ಮತ್ತೇನೋ ನೆನಪಾದಂತಾಗಿ, "ಈ ರಸ್ತೆಯಂತೆ ನಿನ್ನ ದಾರಿಯೂ ಬಹಳ ಕಠಿನ ಮಗನೇ" ಎಂದು ಆರಂಭಿಸಿದರು.

"ಮಂಗಳೂರು ಅಥವಾ ಮುಂಬಯಿ! ಮಂಗಳೂರಿಗಿಂತ ಮುಂಬಯಿ ದೊಡ್ಡದು. ಮಂಗಳೂರು ಟೌನ್. ಮುಂಬಯಿ ದೊಡ್ಡ ಸಿಟಿ. ನೀನು ಸಿಟಿಗೇ ಹೊರಟಂತೆ ತೋರುತ್ತದೆ. "ಕಾಸಿದ್ದರೆ ಕುಡಿಯಾಲ ಇಲ್ಲದಿದ್ದರೆ ನಡಿಯೆಲ" ಎಂಬ ಹಿರಿಯರ ಗಾದೆಯೇ ಉಂಟು. ಹಾಗಿರುವಾಗ ಮುಂಬಯಿ ಕಥೆ ಏನು? ನಿನ್ನ ಕೈಯಲ್ಲಿ ಕಾಸಿಲ್ಲ. ಯಾರು ಮಾತನಾಡಿಸುತ್ತಾರೆ ನಿನ್ನನ್ನು? ಹಣವಿಲ್ಲದವನನ್ನು ಹೆಣವೂ ಕಣ್ಣೆತ್ತಿ ನೋಡುವುದಿಲ್ಲ. ಹಣವಂತನ ಕಾರಿನಡಿ ಬಿದ್ದು ಹೆಣವಾದರೆ ಅವನು ಹಣಕೆ ನೋಡಲಾರ. ಹಣಕ್ಕೆ ಗುಣವಿಲ್ಲ. ಸತ್ಯ ಅಸತ್ಯ, ನ್ಯಾಯ ಅನ್ಯಾಯ, ಧರ್ಮಅಧರ್ಮ, ಇವುಗಳನ್ನೂ ಅವರು ಲಕ್ಷಿಸಲಾರರು. ಒಂದಕ್ಕೆ ಎರಡು ವಸೂಲು ಮಾಡುವುದು ಅನ್ಯಾಯವೆಂದು ನಾವು ಕಂಡರೆ ಅದು ಅವರ ಬಿಜಿನೆಸ್ ದೃಷ್ಟಿಯಲ್ಲಿ ನ್ಯಾಯ. ಬಡವರಿಗೆ ಅಧರ್ಮವಾದುದು ಅವರ ಧರ್ಮವಾಗುತ್ತದೆ. ತಿಂಗಳಿಗೆ ಹದಿನೈದು ರೂಪಾಯಿ ಸಂಬಳವಿಟ್ಟರೂ ಗುಮಾಸ್ತ ೧೫ ತಾಸು ದುಡಿಯಬೇಕೆನ್ನುವರು. ಅದು "ಸೇವಾ ಧರ್ಮ" ಎಂದು 'ದೊಡ್ಡವರಿಂದ" ಬೋಧಿಸಲು ಅವರು ಮರೆಯುವುದಿಲ್ಲ. ಬಡವರ ರಕುತ ಹೀರುವ ನವನಾಗರಿಕತೆಯ ವಿಧಾನಗಳು ಇವೆಲ್ಲ. ಅವರಿಗೆ ರಕುತವೊಂದೇ ಏಕೆ, ಆಸ್ತಿಯಿದ್ದರೆ ಅದಕ್ಕೂ ಕೈಕೊಡುವರು. ಅವನಿಗೆ ಚಂದದ ಹೆಂಡತಿ ಹೆಣ್ಮಕ್ಕಳಿದ್ದರೆ ಅವರ ಮೇಲೂ ಕಣ್ಣೇ. ಆಚಾರ ವಿಚಾರ, ಕಾಯದೆ ಕಾನೂನು ಯಾವುದೂ ಇಲ್ಲ ಅವರಿಗೆ. ಇರುವುದೆಲ್ಲ ಬಡವರಿಗೆ"

ಹಾ, ಬಡವರ-ಬಡಿವಾರವೇ? " ಎಂದು ಉದ್ಗರಿಸಿದ ಹರಿ.

"ಹೌದು, ಬಡವನ ಬಡಿವಾರ ಕಷ್ಟ. ಬಡಿಯುವಾತನೇ ಬಡವ. ಆದರೆ ಬಡಿಸಿಕೊಂಡ ಬಡವನೂ ಸಂದರ್ಭದೊರೆತರೆ ಮತ್ತೊಬ್ಬ ಬಡವನನ್ನೂ ಬಡಿಯುತ್ತಾನಲ್ಲ! ಇದೇ ದುರ್ಜೀವದ ಸಂಗತಿ. ಒಬ್ಬನ ನೌಕರಿ ತೆಗೆಸಲು, ಅವನ ವಿರುದ್ಧ ಛಾಡಿ ಹೇಳಲು, ಬೆನ್ನಿನ ಮೇಲೆ ತಿವಿಯಲು, ನಾಲ್ಕು ಜನರ ಮುಂದೆ ಅಪಮಾನ ಮಾಡಲು ಹೇಸುವದಿಲ್ಲವಲ್ಲಾ ಅವಾ? ಬಡತನದಿಂದ ಶ್ರೀಮಂತಿಕೆಗೆ ಏರಿದ ಮೇಲೂ ಬಡವರನ್ನು ಬಡಿಯುತ್ತಾನಲ್ಲಾ ಅವಾ? ಈ ಬಡಬಾಗ್ನಿಗೆ ಬಲಿಬೀಳಬಾರದಲ್ಲಾ ಬಡವ.! ಇಕೋ, ಅದಕ್ಕೆ ಒಂದೇ ಉಪಾಯ ಹೇಳಿ ಬಿಡುತ್ತೇನೆ. ಎಲ್ಲರನ್ನೂ ಪ್ರೀತಿಸು. ಗಾಂಧಿ ಮಂತ್ರ ಇದೇ. ಬ್ರಿಟಿಶರ ಮೇಲೆ ಅವನಿಗೆ ಸಿಟ್ಟಿದೆಯಾ? ಇಲ್ಲ" ಎಂದು ನಕ್ಕರು ಗೋವಿಂದರಾಯರು.

ಹರಿಗೂ ನಗು ಬಂದಿತು.

"ಕಾಲೇಜಿಗೆ ಅಪ್ಪಯ್ಯ ಕಳಿಸಲಿಲ್ಲ ವೆಂದಾಗಲೀ ಅಣ್ಣ ಹಣ ಕೊಡಲಿಲ್ಲವೆಂದಾಗಲೀ ನಿನಗೆ ಸಿಟ್ಟಿಲ್ಲವಲ್ಲ? " ಎಂದು ಕೊನೆಯದಾಗಿ ಕೇಳಿದರು.

ಹರಿ ತಂದೆಯ ಮೋರೆ ನೋಡಿ, "ಇಲ್ಲ ಅಪ್ಪಯ್ಯ. ಎಳ್ಳಷ್ಟು ಸಿಟ್ಟಿಲ್ಲ" ವೆಂದುತ್ತರ ಕೊಟ್ಟ.

ಅವರ ಕಣ್ಣುಗಳಲ್ಲಿ ನೀರು ತುಂಬಿತು. ಅವನಿಗೆ ಟಿಕೆಟ್ ತೆಗೆಸಿ ಕೊಟ್ಟು ಕಿಸೆಯಲ್ಲಿ ಒಂದು ನೋಟನ್ನೂ ತುರುಕಿಸಿದರು. ಬಸ್ ಬಿಡುವ ಹೊತ್ತಿಗೆ "ಬರುತ್ತೇನೆ ಅಪ್ಪಯ್ಯ" ಎಂದು ಹೇಳಿ ಹರಿ ಕಣ್ಣುಗಳನ್ನೊರಸಿಕೊಂಡ. "ಆಗಲಿ" ಎಂದೆನ್ನಲು ಅವರ ನಾಲಿಗೆಯೇ ಹೊರಡಲಿಲ್ಲ. ಕೈಯೆತ್ತಿದರು ಮಾತ್ರ.

ಮೋಟಾರು ಹೊರಟ ಮೇಲೆ ಗೋವಿಂದರಾಯರ ಕೈ ಕಾಲುಗಳಲ್ಲಿದ್ದ ಚೈತನ್ಯವೂ ಹೋಯಿತು. ಹಾಟೇಲಿಗೆ ಪ್ರವೇಶಿಸಿ ಕಾಫಿ ಕುಡಿದು, ಒಂದು ಮುಕ್ಕಾಲಿನ ನಸ್ಯವನ್ನು ಬುರುಡೆಗೆ ತುಂಬಿಸಿದರು. ಮನೆಗೆ ಅವಶ್ಯವಿದ್ದ ಕೆಲವು ಸಾಮಾನುಗಳನ್ನು ಗಂಟು ಕಟ್ಟಿ ಹೆಗಲ ಮೇಲೇರಿಸಿ ಮನೆಯ ದಾರಿ ಹಿಡಿದರು. ಆದರೆ, ಎಷ್ಟು ನಡೆದರೂ ದಾರಿ ಸಾಗಲೊಲ್ಲದು. ಕಾಲುಗಳು ಸೋತುವು. ಮೈಯಿಂದ ಬೆವರಿಳಿದು ಅಲ್ಲಲ್ಲಿ ಅಂಗಿ ಮೈಗೆ ಅಂಟಿಕೊಂಡಿತು. ರಸ್ತೆಯ ಪಕ್ಕದಲ್ಲಿದ್ದ ಗೋಳಿ ಮರದ ನೆರಳಲ್ಲಿ ಒಮ್ಮೆ ಕುಳಿತರು. ಮತ್ತೆ

ಒಂದೆರಡು ಮೈಲು ನಡೆದು ಬೂರುಗದ ನೆರಳಲ್ಲಿ ಆಶ್ರಯ ಪಡೆದರು ಬೂರುಗದ ಮರದಡಿ ಬೇಸಿಗೆಯ ಬಿಸಿಲಿಗೆ ಒಡೆದು ಚಲ್ಲಾಪಿಲ್ಲಿಯಾಗಿ ಬಿದ್ದ ನೂರಾರು ಕಾಯಿಗಳು ಮಳೆಗಾಲದಲ್ಲಿ ಮೊಳಕೆ ಒಡೆದಿದ್ದುವು. ಕೆಲವು ಗಿಡಗಳನ್ನು ಹರಿದು ಕೋಟಿನ ಕಿಸೆಯೊಳಗೆ ತುಂಬಿಸಿ ಹೊರಟರು. ರಸ್ತೆ ಬಿಟ್ಟು ಮನೆಗೆ ತಿರುಗುವಲ್ಲಿ ತಿರುಗದೆ ಮತ್ತೂ ಅರ್ಧ ಮೈಲು ಮುಂದಕ್ಕೆ ಬಂದಾಗ, "ಹಾಂ, ಎಲ್ಲಿಗೆ ಬಂದೆ" ಎಂದು ಯೋಚಿಸಿ ಪುನಃ ಹೊರಳಿ ಮನೆ ಮುಟ್ಟಿದರು. ಮನೆಗೆ ಬಾಗಿಲು ಎಳೆದಿತ್ತು. "ಓಡಿ. ಹಿಡಿಯೋ" ಎಂದು ಸೀತಮ್ಮನವರು ಬೈಲಲ್ಲಿ ಗುಲ್ಲೆಬ್ಬಿಸುತ್ತಿದ್ದುದು ಕೇಳಿಸುತಿತ್ತು. "ಏನು ಏನು?" ಎಂದು ಕೇಳುತ್ತ ಗೋವಿಂದರಾಯರು ಬೈಲಿಗೆ ಬಂದರು. "ಮಂಗಗಳ ಉಪದ್ರ. ಮತ್ತೇನು? ಅವುಗಳಿಗೂ ನಮ್ಮ ಮೇಲೆ ಹಗೆತನ! ಭತ್ತದ ಕೊರಳನ್ನು ತಿನ್ನಲು ಗದ್ದೆಗಳಿಗೆ ಇಳಿದಿವೆ" ಎಂದು ಸೀತಮ್ಮನವರು ನುಡಿದರು. ಮರಗಳ ಮೇಲೆ ಕುಳಿತು ಟರ್ ಟರ್ ಎಂದು ಬೆದರಿಸುತಿದ್ದ ಮಂಗಗಳ ಮೇಲೆ ಕಲ್ಲೆಸೆಯುತಿದ್ದ ಮೋಹನ.

"ಓಡಿ ಹಿಡಿ ಎಂದರೆ ಮಂಗಗಳಿಗೆ ಹೆದರಿಕೆಯಾದೀತಾ? ಹಿಡಿ ಕಲ್ಲೆಸೆದರೆ ಅವುಗಳಿಗೆ ತಾಗುತ್ತದಾ? ಮನೆಯಿಂದ ಒಂದು ಡಬರಿ ತಾ. ಅದನ್ನು ಒಂದು ಮರಕ್ಕೆ ಕಟ್ಟಿ ಬಡೆದರೆ ಹೆದರುತ್ತವೆ" ಎಂದು ಅವರು ಸೂಚಿಸಿದರು. ಮೋಹನ ಮನೆಗೋಡಿ ಹಳೇ ಡಬ್ಬಿಯೊಂದನ್ನು ತಂದು ಕೋಲಿನಿಂದ ಡಬ ಡಬ ಬಡೆದ. ಮಂಗಗಳೆಲ್ಲ ಬೆದರಿ ದಿಕ್ಕಾಪಾಲಾದುವು.

ಭತ್ತದ ಪೈರಿಗೆ ಮಂಗಗಳ ಕಾಟವೊಂದೇ ಅಲ್ಲ. ಹಗಲಿಗೆ ಗಿಳಿಗಳ ದಳಗಳೂ ಬಂದು ಕೊರಳಿನ ಮೇಲೆ ಕುಳಿತು ಕಳಕಳ ಕಳಾರವನ್ನೆಬ್ಬಿಸಿದುವು. ಅವುಗಳನ್ನು ಹೆದರಿಸಲು ಬೈ ಹುಲ್ಲಿನ ತಟ್ಟೇರಾಯನನ್ನು ತಯಾರಿಸಿದರು. ಮನುಷ್ಯಾಕೃತಿಯ ಈ ತಟ್ಟೇರಾಯನಿಗೆ ಹರಕು ಅಂಗಿ ತೊಡಿಸಿ ಸುಣ್ಣದ ಬೊಟ್ಟು ಬರೆದ ಒಡೆದ ಮಡಿಕೆಯ ಕುಲಾವಿಯನ್ನಿಟ್ಟರು ತಲೆಗೆ. ಉದ್ದ ಕೋಲಿಗೆ ತಟ್ಟೇರಾಯನನ್ನು ಕಟ್ಟಿ ಗದ್ದೆಯ ಮಧ್ಯೆ ಕೋಲನ್ನೂ ಊರಿದರು. ಅಂದಿನಿಂದ ಗಿಳಿಗಳು ಬೆದರಿ ಬರಲಿಲ್ಲ. ಈ ಚಿಂತೆ ದೂರವಾಯ್ತೆಂದು ನಿಶ್ಚಿಂತೆಯಿಂದಿರುವಂತಿರಲಿಲ್ಲ. ರಾತ್ರಿ ಉಳಿಗಳ ಹಿಂಡುಗಳೇ ಬಂದು ಪುಡಿ ಎಬ್ಬಿಸಿದುವು. "ಏನು ನಮ್ಮ ಗ್ರಹಚಾರ! ಈ ಜಿಂಕೆಗಳ ಹಿಂಡನ್ನು

ತಡೆಯಲು ಗದ್ದೆಯ ಹುಣಿಯಲ್ಲೇ ರಾತ್ರಿ ಜಾಗರಣೆ ಮಾಡಬೇಕಾಯಿತೇ ಹೇಗೆ? ನಮ್ಮ ಮನೆಯೊಳಗೆ ಒಂದು ಕೋವಿಯೂ ಇಲ್ಲ. ಬೋರನ ಹತ್ತಿರ ಒಂದು ಕೇಪಿನ ಕೋವಿಯಾದರೂ ಇದೆ. ಹೇಳಿದರೆ ಒಂದು ಗುಂಡು ಹಾರಿಸಿಯಾನು'' ಎಂದು ಸೀತಮ್ಮನವರು ತೋಡಿಕೊಂಡರು. ಅವರಿಂ ಮತೆ ಬೆಳದಿಂಗಳು ಬಿದ್ದ ದಿನ ನೋಡಿ ಬೋರನೂ ಬಂದ.

ಆದರೆ ಗದ್ದೆಯ ಹುಣಿಯಲ್ಲಿ ಮುಸುಕು ಹಾಕಿ ಕಾಯಲು ಅವನಿಗೂ ಹೆದರಿಕೆ. ಹಾವು ಬಂದರೇನು ಗತಿ? ಪೆಬ್ಬುಲಿಗೂ ಕೇಪಿನ ಕೋವಿ ಈಡಲ್ಲ. ನಾಯಿ ಹುಲಿಗೆ ಮಾತ್ರ ಸಾಕು. ಆದುದರಿಂದ ರಾತ್ರಿ ಅವನು ಬಿಸಿ ನೀರಿನ ಕೊಟ್ಟಿಗೆಯಲ್ಲೇ ಕಂಬಳಿ ಹಾಸಿ ಕುಳಿತ. ಕೊಟ್ಟಿಗೆಗೆ ಬಿದಿರಿನ ತಟ್ಟಿ ಕಟ್ಟಿ ಅಡರ್ ಸಿಕ್ಕಿಸಿದ್ದರು. ಬಾಗಿಲಿಗೆ ಮಡಲ್. ಅದನ್ನು ಎಳೆದುಕೊಂಡು ಕುಳಿತ ಬೋರನಿಗೆ ಮಧ್ಯರಾತ್ರಿಯ ಹೊತ್ತಿಗೆ ಕಣ್ಣು ಜೊಂಪು ಹಿಡಿಯಿತು. "ಬೋರಾ ನಿದ್ದೆ ಬಂದಿತಾ?'' ಎಂದು ರಾತ್ರಿ ಆಗಾಗ ಗೋವಿಂದರಾಯರು ಕಿಟಕಿಗೆ ಮೊಗ ಆನಿಸಿ ಕೇಳುತಿದ್ದರು. ಒಮ್ಮೆ ಕೇಳಿದಾಗ ಎಚ್ಚರವಾಯಿತು. ಅಡರಿನ ಕಿಂಡಿಗಳಿಂದ ನೋಡಿದ. ಕೊಟ್ಟಿಗೆಯ ಸಮೀಪ ಹಂದಿಗಳು ದಾಡೆಗಳಿಂದ ನೆಲ ಒಕ್ಕುತಿದ್ದುವು. ಕಿಂಡಿಯಲ್ಲೇ ಕೋವಿಯ ನಳಿಗೆಯನ್ನು ತೂರಿ ಒಂದು ಹಂದಿಗೆ ಈಡಿಟ್ಟ ಬೋರ. 'ಗುರ್ ಗುರ್' ಎಂದು ಗುರುಗುಟ್ಟಿ ದಿಕ್ಕಾಪಾಲಾಗಿ ಓಡ ಹತ್ತಿದುವು. ಬೋರ ಬೆವರಿ ಮುಖಮಂಟಪಕ್ಕೆ ಓಡಿ ಬಂದ. ಗುಂಡಿನ ಸಪ್ಪಳ ಕೇಳಿ ಗೋವಿಂದರಾಯರೂ ಬಾಗಿಲು ತೆರೆದು ಮುಖ ಮಂಟಪಕ್ಕೆ ಕಾಲಿಟ್ಟರು. "ಜಿಂಕೆ ಸತ್ತೀತಾ? ಓಡಿ ಬಂದೆಯಲ್ಲಾ? '' ಎಂದು ಅವರು ಕೇಳಿದರು.

"ಓಡಿ ಬರುವುದೇ. ಜಿಂಕೆಯಲ್ಲ ಹಂದಿ. ಹಂದಿಗೆ ಮೈಮೇಲೆ ಗುಂಡು ಒಪ್ಪರಿ ನಾಟುವುದೇ ಇಲ್ಲ. ಅರ್ಧ ಪೆಟ್ಟಾದ ಹಂದಿಗೆ ವೈರ ಬಹಳ. ಎದುರಿಗೆ ಏನು ಸಿಕ್ಕಿದರೂ ದಾಡೆಯಿಂದ ಸೀಳಿ ಬಿಡುತ್ತದೆ. ಹುಲಿ ಕೂಡಾ ಹೆದರುತ್ತ ದಯ್ಯ ಹಂದಿಗೆ'' ಎಂದು ವರಾಹ ಅವತಾರವನ್ನು ವರ್ಣಿಸಿದ ಬೋರ.

"ಆಗಲಿ, ಜೀವ ಎಲ್ಲದಕ್ಕಿಂತ ದೊಡ್ಡದು. ನೀನು ಇಲ್ಲೇ ಮಲಗು!'' ಎಂದು ಹೇಳಿ ಗೋವಿಂದರಾಯರು ಒಳಗಿನಿಂದ ಒಂದು ಚಾಪೆಯ ಸುರುಳಿ ಹೊರಗಿಟ್ಟರು.

ಮುಂಜಾನೆದ್ದು ನೋಡಿದಾಗ ಕೆಸು, ಮರಸಣಿಗೆ, ಮರಗೆಣಸುಗಳನ್ನೆಲ್ಲ ಹಂದಿಗಳು ದಾಡೆಗಳಿಂದ ಒತ್ತಿ ತಿಂದಿದ್ದು ಕಂಡು ಬಂದಿತು. "ಹಾಂ ಇದಕ್ಕೂ ಬಂತಾ ಕಾಲ? " ಎಂದು ಗೋವಿಂದರಾಯರು ಅಡ್ಡಾದಿಡ್ಡಿಯಾಗಿ ಬುಡ ಕಿತ್ತು ಬಿದ್ದ ಗಿಡಗಳನ್ನು ಪುನಃ ದರಗಳಲ್ಲಿ ನೆಟ್ಟರು.

"ನಿಮಗೆ ಬೇರೆ ಕಸುಬಿಲ್ಲ. ಯಾಕೆ ಸುಮ್ಮಗೆ ಅದನ್ನೆಲ್ಲ ನೆಟ್ಟು ಹಂದಿಗಳಿಗೆ ಆಹಾರ ಮಾಡುತ್ತೀರಿ? " ಎಂದು ಸೀತಮ್ಮನವರು ಒರಲಿದರು.

ವಾಸನೆ ಮೂಸಿ ತೆರಳುವ ಬೇಟೆ ನಾಯಿಗಳಂತೆ ಹಂದಿಗಳ ಕಾಲ ಹೆಜ್ಜೆಗಳ ಗುರುತು ಹಿಡಿದು ಜೋರ ನಡೆದ. ಒಂದೆಡೆ ರಕುತದ ಕಲೆಗಳೂ ಕಾಣಿಸಿದುವು. ಗದ್ದೆಯಲ್ಲಿ ಹಂದಿ ಹೊರಳಾಡಿದುದರಿಂದ ಸಸಿಗಳೆಲ್ಲ ಪುಡಿ ಪುಡಿಯಾಗಿದ್ದುವು. ಗಾಯವಾದ ಹಂದಿ ಎಲ್ಲಾದರೂ ಬಿದ್ದಿರಬೇಕೆಂದು ಜೋರನ ಆಶೆ. ಆದರೆ ಎಲ್ಲೆಲ್ಲಿ ಹುಡುಕಿದರೂ ಸಿಗಲಿಲ್ಲ. ತೆಂಕು ಬದಿಯ ಪಟ್ಟಡಪಿ ಸೇರಿರಬೇಕೆಂದು ನಂಬಿ ಅಲ್ಲೂ ಅಲ್ಲಲ್ಲಿ ನುಸುಳಿ ನೋಡಿ "ಸಿಗಲಿಲ್ಲಯ್ಯ. ಈಡು ತಪ್ಪಿತು. ಅದರ ತಲೆಗೆ ಬೀಳಬೇಕಿತ್ತು ಗುಂಡು!" ಎಂದು ಜೋರ ಹೇಳಿ, "ಅಯ್ಯಾ, ನಿಮ್ಮ ತೆಂಕು ಕಾಡಿನಲ್ಲಿ ಒಳ್ಳೇ ಮೆಣಸಿನ ಬೀಳು ಭಾರೀ ಇದೆ. ಯಾವ ಮರ ನೋಡಿದರೂ ಅದರ ಬೀಳುಗಳೇ. ಈ ವರುಷ ಬೇಸಿಗೆಗೆ ಒಂದು ಕಳಸೆ ಒಳ್ಳೆ ಮೆಣಸಾದೀತು. ಕೊಯ್ಯದೆ ಬಿಡಬೇಡಿ " ಎಂದು ತಿಳಿಸಿದ. ಅವನೊಡನೆ ಗೋವಿಂದರಾಯರು ಪುನಃ ತೆರಳಿ ನೋಡಿ ಬಂದರು. "ಹಂದಿಯ ನೆವದಿಂದ ಒಳ್ಳೇ ಮೆಣಸಿನ ಸಂಶೋಧನೆಯಾಯಿತಲ್ಲ" ಎಂದವರು ಹಿಗ್ಗಿದರು. "ಈ ಕಾಡಿನಲ್ಲಿ ಯಾವ ಮಹಾರಾಯ ನೆಟ್ಟಿದ್ದ ಈ ಬಳ್ಳಿಗಳನ್ನು ? '' ಎಂದು ಸೀತಮ್ಮನವರು ಆಶ್ಚರ್ಯ ವ್ಯಕ್ತಪಡಿಸಿದರು.

"ಅಮ್ಮಾ, ಯಾರು ನೆಡುತ್ತಾರೆ? ಯಾರೂ ನೆಡಬೇಕೆಂದಿಲ್ಲ. ಮಳೆಯಲ್ಲಿ ತಾನಾಗಿ ಬೆಳೆಯುತ್ತದೆ. ಕುದುರೆ ಮುಖ, ಎಳ್ನೀರ್, ಬಲ್ಲಾಳ ರಾಯ ದುರ್ಗದ ಮಲೆಗಳಲ್ಲಿ ಮುಡಿ ಮುಡಿ ಬೆಳೆಯುತ್ತದೆ. ಎಲ್ಲ ಕೊಯ್ದರೆ ಅನೇಕ ಗಾಡಿಗಳಾಗಬಹುದು. ಕೊಯ್ಯುವವರಿಲ್ಲ ಅಷ್ಟನ್ನು. ದಾರಿ ಸಿಗುವುದಿಲ್ಲ ತೆರಳಲಿಕ್ಕೆ. ಅಲ್ಲಲ್ಲಿ ಕೈಗೆ ಸಿಕ್ಕಿದುದನ್ನು ಹರಿದುಕೊಂಡು ಬರುತ್ತಾರೆ. ಕೈಗೆ ಸಿಗುವ ವಸ್ತು ಒಳ್ಳೇ ಮೆಣಸೊಂದೇ ಎಂದು ತಿಳಿದಿರಾ? ಸೀಗೆ, ಏಲಕ್ಕಿ,

ಬೆತ್ತ ಕೂಡಾ ಬೇಕಾದಷ್ಟಿವೆ. ಉಳಿಕೊಂಬು, ಆನೆ ಕೊಂಬುಗಳೂ ದೊರೆಯುತ್ತವೆ. ಹಲಸು, ಮಾವಿನ ಮರಗಳಿಗೂ ಕಡಿಮೆ ಇಲ್ಲ.”

“ಹೌದಾ, ಮಾವಿನ ಹಣ್ಣು ಇದೆಯಾ? ಯಾರು ನೆಟ್ಟರು ಅಲ್ಲಿ?”

“ಯಾರು ನೆಡಬೇಕು? ಪಕ್ಷಿ ಪರಣೆ ತಿಂದು ಬಿದ್ದ ಗೊರಟುಗಳೇ ಮರವಾಗಿವೆ. ಒಂದು ಮರವಿದ್ದರೆ ಸಾಕು. ಹತ್ತು ವರುಷಗಳಲ್ಲಿ ಹತ್ತು ಸಾವಿರವಾಗುತ್ತದೆ ಅದರ ಸಂತಾನ” ಎಂದು ಗೋವಿಂದರಾಯರು ತಿಳಿಸಿದರು.

“ಮಾವಿನಕಾಯಿ ಕೊಯ್ಯುತಿದ್ದರೆ ಉಪ್ಪಿನ ಕಾಯಾದರೂ ಹಾಕಬಹುದಿತ್ತು” ಎಂದು ಸೀತಮ್ಮ ಬಾಯಿಗೆ ನೀರು ತಂದು ಕೊಂಡರು.

“ಇನ್ನೆರಡು ವರುಷಗಳಲ್ಲಿ ಕಸಿ ಗಿಡಗಳಲ್ಲೇ ತೋತಾಪುರಿ ಕಾಯಿಗಳಾಗುತ್ತವೆ. ಎಷ್ಟು ಉಪ್ಪಿನಕಾಯಿ ಹಾಕಿ ಉಣಬಡಿಸುತ್ತೀ ನೋಡುತ್ತೇನೆ. ನಿನಗದೇ ಚಿಂತೆ. ಭತ್ತ ಕೊಯ್ಸಿ ಅಂಗಳಕ್ಕೆ ಹೇಗೆ ಬಂದೀತೆಂದು ನನಗೆ ಚಿಂತೆಯಾಗಿದೆ. ಸಮಯಕ್ಕೆ ಯಾರೂ ಸಿಗದಿದ್ದರೆ ಗದ್ದೆಗೇ ಸಮರ್ಪಣೆ” ಎಂದು ಅವರು ಕೃಷ್ಣಾರ್ಪಣ ಮಾಡುವವರಂತೆ ಬೊಗಸೆಗಳನ್ನೆತ್ತಿ ಬಿಟ್ಟರು.

ಅವರು ಊಹಿಸಿದಂತೆ ಸಕಾಲಕ್ಕೆ ಹೆಣ್ಣಾಳುಗಳನ್ನು ಕರೆಸುವುದೇ ಕಷ್ಟವಾಯ್ತು. ಬೋರ, ತುಕ್ರ, ಅಹ್ಮದರ ಮನೆಗೆ ಅನೇಕ ಸಲ ಓಡಾಡಿದರು. ಲಚ್ಚಿಮಿ ಏಳನೇ ತಿಂಗಳಲ್ಲೇ ಪ್ರಸವಿಸಿ ಹಾಸಿಗೆ ಹಿಡಿದಿದ್ದಳು. ಗೇಣುದ್ದದ ಕೂಸು ಉಳಿದಿರಲಿಲ್ಲ. ಅವಳು ಉಳಿದುದೇ ದೊಡ್ಡದು. ಪಾರ್ವತಿಯ ಕೈ ಕಾಲುಗಳಲ್ಲಿ ನೀರು ಬಂದಿತ್ತು. ಗುಳಿ ಸೇರಿದ್ದ ಕೆನ್ನೆಗಳೂ ಉಬ್ಬಿದ್ದುವು ಕೆಂಡ ಬಿದ್ದು ಬಂದ ಪೊಕ್ಳದಂತೆ. ಹಸೀನ್ ಬೀಬಿ ನರಳುತಿದ್ದರೂ ಗೋವಿಂದರಾಯರ ಒತ್ತಾಯಕ್ಕೆ ಆಹ್ಮದ್ ಬ್ಯಾರಿ ಕಳಿಸಿದ. ಬಂದಾಗ ಅವಳು ಇನ್ನಿಬ್ಬರನ್ನು ಕರೆದುಕೊಂಡು ಬಂದಳು. ಹಾಗೂ ಹೀಗೂ ಭತ್ತದ ಕೆಯ್ಯಿ ಕೊಯ್ದರು. ಬ್ಯಾರಿ ಮತ್ತು ಬೋರ ಸೂಡಿಗಳನ್ನು ಒಂದರ ಮೇಲೊಂದಿಟ್ಟು ಹೊರೆ ಕಟ್ಟಿ ಅಂಗಳಕ್ಕೆ ತಂದು ಹೊತ್ತು ಹಾಕಿದರು. ಕೆಲವು ದಿವಸಗಳ ವರೆಗೆ ಅವು ಬಿಸಿಲಲ್ಲಿ ಇನ್ನಷ್ಟು ಒಣಗಿದುವು. ಸೀತಮ್ಮನವರು ಸೆಗಣಿ ನೀರಿನಿಂದ ಅಂಗಳ ಸಾರಿಸಿದ ಮೇಲೆ ಅಂಗಳದ

ಮಧ್ಯದಲ್ಲಿ ಹೊಡೆ ಮುಂಜವನ್ನಿಟ್ಟು ಸೂಡಿಗಳನ್ನು ಹೊಡೆದರು. ಸೀತಮ್ಮ ನವರೂ ತಲೆಗೊಂದು ಸ್ಕಿರಾಸ್ ಸುತ್ತಿಕೊಂಡು ಬಂದು ಕೂಡಿಕೊಂಡರು. ಭತ್ತ ಪ್ರತ್ಯೇಕಿಸಿದ್ದ ಹುಲ್ಲಿನ ಸೂಡಿಗಳನ್ನು ಹಟ್ಟಿಯ ಬಳಿ ಅಂಗಳದ ಒಂದಂಚಿನಲ್ಲೇ ಮೂಟೆ ಒಟ್ಟಿದರು. ಭತ್ತವನ್ನು ಬಿಸಿಲಿಗೆ ಒಣಗಿಸಿ, ಕಸ ಕಡ್ಡಿಗಳನ್ನು ತೂರಿ ಗುಡಿ ಮುಂಟೆಗಳಲ್ಲಿ ಹೇರಿದಾಗ ಏಳು ಕೆರೆಯ ನೀರು ಕುಡಿದಂತಾಯಿತು ಗೋವಿಂದರಾಯರಿಗೆ. ಮೊದಲನೇ ವರುಷದ ಬೇಸಾಯಕ್ಕೇ ಅವರ ಮೈ ನೋರಿಯಲ್ಲಿ ಬೆವರು ಧಾರಾಕಾರವಾಗಿ ಹರಿಯಿತು. ಮೋಹದ ರಾತ್ರಿಯಿಡೀ ಕೈ ಮೈ ಮುರಿಸಿಕೊಂಡು ಅಳುತ್ತಿದ್ದ.

ಆಳುಗಳಿಗೆ ಸಂಬಳ ಕೊಡಲು ರಾಜಾ ವಾರದ ಕೊನೆಯ ರಜಾದಿನ ಮನೆಗೆ ಬಂದಾಗ ಗೋವಿಂದರಾಯರು ಕಷ್ಟಗಳನ್ನೆಲ್ಲ ಅವನ ಮುಂದೆ ವಿವರಿಸಿದರು. ಒಕ್ಕಲು ಮಕ್ಕಳುಗಳಿದ್ದರೆ ಬೇಸಾಯ. ಇಲ್ಲದಿದ್ದರೆ ಮನೆಯಲ್ಲೇ ನಾಲ್ಕು ಗಟ್ಟಿ ಮುಟ್ಟಿನ ಗಂಡಸರು ಹೆಂಗಸರು ಇರಬೇಕು. ಅದಿಲ್ಲದೆ ಎಲ್ಲ ಆಳುಗಳಿಂದಲೇ ಮಾಡಿಸುವುದು ವ್ಯರ್ಥ. ಈ ಊರಲ್ಲಿ ನಾಲ್ಕಾಣೆ ಕೊಟ್ಟರೂ ಆಳುಗಳು ಸಿಗುವುದಿಲ್ಲ. ಸಿಕ್ಕರೂ ನಮ್ಮ ಹೊತ್ತಿಗೆ ಆಗುವವರಲ್ಲ. ಎಲ್ಲಕ್ಕೂ ಹಣ ತೆತ್ತು ಬಿತ್ತಿದರೂ ಈ ಹಂದಿ ಹರಿಣ ಮೊದಲಾದ ಕಾಡು ಪ್ರಾಣಿಗಳ ಕಾಟ ಬೇರೆ. ಬಂಬೂಚು ರೋಗವೂ ತಪ್ಪಿದ್ದಲ್ಲ. ಅಳಿದುಳಿದ ಭತ್ತ ಸಕಾಲಕ್ಕೆ ಅಂಗಳಕ್ಕೆ ಬಂದೀತೆಂಬ ಧೈರ್ಯವಿಲ್ಲ. ಈ ಸಲ ಅಷ್ಟು ಮಾಡಬೇಕಾದರೆ ಕುರಿಕೋಣ ಬಿದ್ದು ಹೋಯ್ತು. ಇನ್ನು ಭತ್ತ ಬೇಯಿಸಿ ಕುಟ್ಟಿ ಅಕ್ಕಿ ಮಾಡಬೇಕು. ಅದಕ್ಕಷ್ಟು ಕೂಲಿ ಸಲ್ಲುತ್ತದೆ. ಅವಳಿಂದಲೇ ಎಲ್ಲಿ ಭತ್ತ ಕುಟ್ಟಲು ಸಾಧ್ಯವಿಲ್ಲ. ಈಗಲೇ ಅವಳ ಬೆನ್ನು ಬಗ್ಗಿದೆ. ಹೀಗೇ ಆದರೆ ಇನ್ನು ನಾಲ್ಕು ವರುಷ ಅವಳು ಬದುಕಲಿಕ್ಕಿಲ್ಲ." ಎಂದವರು ಭವಿಷ್ಯ ನುಡಿದರು.

ತಾಯಿ ಭತ್ತ ಕುಟ್ಟುವ ಸುದ್ದಿ ಕೇಳಿ "ಯಾರು ಹೇಳಿದರು ಅವಳಿಗೆ ಇದನ್ನೆಲ್ಲ ಮಾಡಲಿಕ್ಕೆ? ಭತ್ತವನ್ನೇ ಮಾರಿಬಿಡೋಣ. ಬಂಗಾಡಿ ಪೇಟೆಗೆ ಹೇಳಿ ಕಳಿಸಿದರೆ ಗಾಡಿ ತಂದು ಅಳೆದು ಒಯ್ಯುತ್ತಾರೆ." ಎಂದು ರಾಜಾ ರೇಗಿದ.

"ಹೌದು, ಭತ್ತವನ್ನೇ ಅಳೆಯಬಹುದು. ಆದರೆ ಅಷ್ಟಲ್ ಬೇಗ

ಮುಡಿ ಅಕ್ಕಿಗೇ ಮೂರು ರೂಪಾಯಿ ದೊರೆಯುವುದು ಪರಹರ. ಭತ್ತಕ್ಕೆ ಎರಡೋ ಎರಡೂವರೆಯೋ? ಆಳು, ಕಾಳು, ಕೂಲಿ ಕುಂಬಳಗಳಿಗೆಲ್ಲ ಆದಿಯಿಂದ ಅಂತ್ಯದ ವರೆಗಿನ ಲೆಕ್ಕಾಚಾರ ಮಾಡಿದರೆ ಅಷ್ಟರಷ್ಟು ಅದಕ್ಕೇ ಖರ್ಚಾದಂತೆ ಕಾಣುತ್ತದೆ'' ಎಂದು ತಂದೆ ಗುಣಿಸಿದರು.

ಅದು ನಿಜವೆಂದು ರಾಜನಿಗೂ ಮನದಟ್ಟಾಯಿತು. ಮುಂಗೋಪವೂ ಇಳಿಯಿತು. ಅವನೂ ವಿಚಾರವಶನಾದ. ಮುಖಮಂಟಪದಿಂದ ಇಳಿದು ಬಿಸಿ ನೀರು ಕೊಟ್ಟಿಗೆಗೆ ಬಂದ. ಕೊಟ್ಟಿಗೆಯ ಬದಿಗೆ ಒಂದು ಗದ್ದೆಯ ಕಳದಲ್ಲಿ ನೂರಾರು ತೆಂಗು ಮತ್ತು ಕಂಗಿನ ಸಸಿಗಳು ಹರಿಪೆ ಕಳದಂತೆ ತಲೆಎತ್ತಿದ್ದುವು. ಆ ಕಳಕ್ಕೆ ಪ್ರದಕ್ಷಿಣೆ ಬಂದು ಅಲ್ಲೇ ಸ್ವಲ್ಪ ಹೊತ್ತು ನಿಂತ. ಆ ಮೇಲೆ ತನಗೆ ತಾನೇ ಪ್ರದಕ್ಷಿಣೆ ಬಂದು ಬೆಟ್ಟು ಗದ್ದೆಗಳನ್ನೂ ಮಜಲು ಗದ್ದೆಗಳನ್ನೂ ಸಿಂಹಾವಲೋಕಿಸಿದ. ಏನು ವಿಚಾರ ಹೊಳೆಯಿತೋ ಏನೋ, "ಅಪ್ಪಯ್ಯಾ, ಇಲ್ಲಿ ಬನ್ನಿ. ಇಲ್ಲಿ ಬನ್ನಿ'' ಎಂದು ಕೂಗಿ ಕರೆದ.

ಗದ್ದೆಯಿಂದ ರಾಜಾ ಒಮ್ಮೆಂದೊಮ್ಮೆಯೇ ಕೂಗಿ ಕರೆದುದರಿಂದ ಗೋವಿಂದರಾಯರು ಗಾಬರಿಯಾದರು. "ಏನು? ಏನಾಯ್ತು? ಹಾವು ಉಂಟಾ?'' ಎಂದು ಕೇಳುತ್ತ ಕೇಳುತ್ತ ಓಡಿಬಂದರು. "ಏನಿಲ್ಲ. ಒಂದು ವಿಚಾರದ ಬಗ್ಗೆ ನಿಮ್ಮನ್ನು ಕೇಳೋಣವೆಂದು ಕರೆದೆ." ಎಂದು ರಾಜಾ ಉತ್ತರಿಸಿದ ಮೇಲೆ ಅವರು ದೀರ್ಘ ಶ್ವಾಸಬಿಟ್ಟರು. ತೆಂಗು ಕಂಗು ಸಸಿಗಳ ಬಳಿ ಅವರು ಬಂದು ನಿಂತ ಮೇಲೆ "ಅಪ್ಪಯ್ಯ ಈ ತೆಂಗಿನ ಸಸಿಗಳನ್ನು ಗದ್ದೆಗಳ ಹುಣಿಗಳ ಮೇಲೆ ನೆಡೋಣ. ಆದರೆ ಕಂಗಿನ ಸಸಿಗಳನ್ನು ಆ ರೀತಿ ಬೆಳೆಸುವುದು ಬೇಡ. ಈ ಬೆಟ್ಟು ಮತ್ತು ಮಜಲುಗಳಲ್ಲೇ ಹೊಂಡ ತೆಗೆಸಿ ಸಸಿಗಳನ್ನಿಟ್ಟರೆ ದೊಡ್ಡ ತೋಟವಾಗುತ್ತದಲ್ಲ. ಸಸಿಗಳು ಬೇಸಿಗೆಗೆ-ಒಣಗುವ ಭಯವೂ ಇಲ್ಲ ಕಟ್ಟದ ನೀರಿದೆ ಬೇಕಾದಷ್ಟು'' ಎಂದು ರಾಜಾ ತನ್ನ ಹೊಸ ವಿಚಾರವನ್ನು ತಿಳಿಸಿದ.

"ಅದು ನಿಜ'' ವೆಂದುತ್ತರವಿತ್ತ ಗೋವಿಂದರಾಯರು ಸ್ವಲ್ಪ ತಡೆದು, "ಆದರೆ ಫಸಲು ಬರಲು ಬಹಳ ಕಾಲ ಬೇಕು. ಗದ್ದೆಯಾದರೆ ವರುಷ ವರುಷ ಫಲ ದೊರೆಯುತ್ತದೆ. ಮನೆಗೆ ಅಕ್ಕಿ ಪೇಟೆಯಿಂದ ಕೊಳ್ಳಬೇಕಾಗಿಲ್ಲ'' ಎಂದು ನುಡಿದರು.

"ಗದ್ದೆ ಅವಶ್ಯವಿದ್ದರೆ ಬೈಲುಗದ್ದೆಗಳಿವೆಯಲ್ಲ. ಮನೆಗೆ ಬೇಕಾದ ಭತ್ತಕ್ಕೆ ಅಷ್ಟು ಸಾಕು. ಅಲ್ಲದೆ ಒಮ್ಮೆಯೇ ಈ ಎಲ್ಲ ಗದ್ದೆಗಳಲ್ಲಿ ತೋಟ ಬೆಳೆಸಲು ಸಾಧ್ಯವೂ ಇಲ್ಲ. ಅದಕ್ಕೆ ಹಣ ಎಷ್ಟು ಬೇಕು? ಆ ಬನದಲ್ಲಿದ್ದ ಕೊಪ್ಪರಿಗೆ ಅಗೆಯಬೇಕಾದೀತು. ಅದೆಲ್ಲ ಇಂದು ನಾಳೆ ಆಗುವ ಹೋಗುವ ವ್ಯಾಪಾರವಾ? ಈ ವರುಷ ಸ್ವಲ್ಪ ಸಸಿಗಳನ್ನು ನೆಟ್ಟ. ಮುಂದಿನ ವರುಷ ಸ್ವಲ್ಪ. ಈ ಎಲ್ಲ ಗದ್ದೆಗಳು ಮುಗಿದ ಮೇಲೆ ಹಟ್ಟಿಯ ಬಡಗು ದಿಕ್ಕಿನ ಎಲ್ಲ ಭೂಮಿಯಲ್ಲೂ ಬೆಳೆಸಿ ಬಿಡೋಣ. ಮತ್ತೆ ಈ ಆಳುಗಳ ಹಂಗಿಲ್ಲ. ಕಾಡು ಪ್ರಾಣಿಗಳ ಉಪದ್ರವವೂ ತಪ್ಪುತ್ತದೆ. ನೀವು ಹೇಳಿದ ಹಾಗೆ ಒಕ್ಕಲಿದ್ದರೇ ಗದ್ದೆಯಿಟ್ಟುಕೊಳ್ಳುವುದರಲ್ಲಿ ಅರ್ಥವಿದೆ. ನಮ್ಮಿಂದ ಈ ಕೆಲಸ ಆದೀತಾ ಹೋದೀತಾ?"

ಅವನ ವಿಚಾರಕ್ಕೆ ಗೋವಿಂದರಾಯರೂ ಒಪ್ಪಿದುದರಿಂದ ಈ ವರುಷ ಎಲ್ಲೆಲ್ಲಿ ತೆಂಗಿನ ಸಸಿಗಳನ್ನು ನೆಡಬೇಕು? ಎಷ್ಟು ಅಂತರಕ್ಕೊಂದು ಸಸಿ? ಯಾವ ಬೆಟ್ಟು ಗದ್ದೆಯಲ್ಲಿ ತೋಟ ಆರಂಭಿಸಬೇಕು? ಮೊದಲಾದ ವಿಷಯಗಳನ್ನು ಚರ್ಚಿಸುತ್ತ ತಂದೆ ಮಗ ಈ ಗದ್ದೆಯಿಂದ ಆ ಗದ್ದೆಗೆ, ಆ ಹುಣಿಯಿಂದ ಈ ಹುಣಿಗೆ ತಿರು ತಿರುಗಿ ತಿರುಗಿದರು. ಮಧ್ಯಾಹ್ನವಾದುದರಿಂದ ಹಸಿದು ಊಟಕ್ಕೆ ಬಂದರು. ಊಟವಾದ ಮೇಲೆ ಬಸಿಲಲ್ಲೇ ರಾಜಾ ಬಂಗಾಡಿ ಪೇಟೆಗೆ ಹೋಗಿ ಬಾಡಿಗೆಗೆ ಎರಡು ಎತ್ತಿನ ಗಾಡಿಗಳನ್ನು ಹೊಡೆಸಿಕೊಂಡು ಬಂದ. ಮುಖಮಂಟಪದಲ್ಲಿ ಒಟ್ಟಿದ್ದ ಭತ್ತದ ರಾಶಿಯನ್ನು ಗೋಣಿ ಚೀಲಗಳಿಗೆ ತುಂಬಿಸಿ ಗಾಡಿಗೆ ಹೇರಿದರು. ರಾತ್ರಿ ಊಟ ತೀರಿಸಿ ಗಾಡಿಯೊಂದಿಗೆ ಹೊರಡಲು ರಾಜಾ ಸಿದ್ಧವಾದಾಗ ಗೋವಿಂದರಾಯರು "ರಾತ್ರಿಗೆ ನೀನೂ ಹೊರಟಿಯಲ್ಲ. ಬೆಳಿಗ್ಗೆ ಎದ್ದು ಹೊರಡಬಹುದಿತ್ತು" ಎಂದು ಆಕ್ಷೇಪಿಸಿದರು.

"ಇಲ್ಲ. ಮುಂಡಾಜೆಗೆ ಈ ಗಾಡಿಗಳೂ ಬರುತ್ತವೆ. ಅಲ್ಲಿ ಕೆಲವರನ್ನು ಕಂಡು ಬಾಳೆ ಗಿಡಗಳನ್ನು ಕೊಡಲು ಕೇಳಬೇಕಾಗಿದೆ. ಬೇಕಾದಷ್ಟು ಅಡಿಕೆ ತೋಟಗಳಿವೆ ಅಲ್ಲಿ. ಗಾಡಿಗಳಲ್ಲಿ ಬಾಳೆ ಸಸಿಗಳನ್ನು ಕಳಿಸುತ್ತೇನೆ. ಆಳುಗಳನ್ನು ಕರೆಸಿ ತೋಟ ಆರಂಭಿಸಿ. ಮಣ್ಣಿನಲ್ಲಿ ಈಗ ತೇವವಿದೆ" ಎಂದು ಅವನು ಸಮಾಧಾನ ಪಡಿಸಿ ಗಾಡಿಗಳ ಹಿಂಬದಿ ಹೊರಟ.

"ತೋಟ ಆರಂಭಿಸಿ" ಎಂದು ಹೇಳಲು ಸುಲಭ. ಆದರೆ ಜಾದೂ ವಿದ್ಯೆಯ ಪ್ರಯೋಗದಂತೆ ಒಂದೆರಡು ಕ್ಷಣದಲ್ಲಿ ಮುಗಿವ ಕೆಲಸವಲ್ಲ ಅದು. ಮೊದಲು ಗದ್ದೆಗಳಲ್ಲಿ ಮೂರು ಹೆಜ್ಜೆಗಳಿಗೊಂದರಂತೆ ಮೊಣ ಗಂಟು ಆಳದ ವರೆಗಿನ ಗುಳಿಗಳನ್ನು ತೋಡಬೇಕು. ಆ ಹೊಂಡಗಳಿಗೆ ಸೊಪ್ಪು ಸವರಿ ಅಗೆದ ಮಣ್ಣನ್ನೇ ಸ್ವಲ್ಪ ಜಾರಿಸಬೇಕು. ಆ ಮೇಲೆ ಒಂದು ಹೊಂಡದಲ್ಲಿ ಬಾಳೆಯ ಸಸಿಯನ್ನೂ ಇನ್ನೊಂದರಲ್ಲಿ ಕಳದಿಂದ ತೆತ್ತು ತಂದ ಅಡಿಕೆ ಸಸಿಯನ್ನೂ ನೆಡುವುದು ಪದ್ಧತಿ. ಬಾಳೆಯು ನೆರಳಿಲ್ಲದಿದ್ದರೆ ಕಂಗಿನ ಸಸಿ ಬಾಳಲಾರದು. ಅದೂ ನಾಲ್ಕಾಗದೆ ಸಸಿಯನ್ನು ಅದರಿಂದ ಹೊಡೆಸದೆ ಗತ್ಯ-ಹವಿಲ್ಲ. ಹೊಸ ಬೇರು ಹುಟ್ಟಿ ಬಲಿಸಿದಾಗ ಅದರನ್ನೂ ಅದರ ಬುಡಕ್ಕೆ ನೂಕಿ ಮಣ್ಣು ಚೆಲ್ಲುವುದೂ ಇದೆ. ಅಡಿಕೆಯ ಸಸಿ ದೊಡ್ಡದಾಗುವ ಮೊದಲೇ ಬಾಳೆಯ ಗಿಡ ಗೊನೆ ಬಿಡುತ್ತದೆ. ಅದರ ಬುಡದಲ್ಲಿ ಅನೇಕ ಕಂದುಗಳು ಹುಟ್ಟುತ್ತವೆ. ಕಂದುಗಳನ್ನು ಒಂದೊಂದನ್ನೇ ಅಗೆದು ಬೇರೆ ಕಡೆ ತೋಟ ಬೆಳೆಸಲು ಉಪಯೋಗಿಸುವರು. ಮೊದಲಿನ ಹೊಂಡದಲ್ಲಿ ಮತ್ತೊಂದು ಅಡಿಕೆ ಸಸಿ ನೆಡುವುದು ಈ ಮಲೆನಾಡಿನ ಕ್ರಮ. ಅಷ್ಟರೊಳಗೆ ಅದರ ಒತ್ತಿನ ಅಡಿಕೆ ಸಸಿ ಮನುಷ್ಯನಷ್ಟು ಎತ್ತರ ಬೆಳೆದಿರುತ್ತದೆ. ಒಂದರ ಜಾಗೆಯನ್ನು ಮತ್ತೊಂದು ಕಂಗು ಸ್ವೀಕರಿಸುತ್ತದೆ.

ಕಂಗಿನ ತೋಟದಲ್ಲಿ ಕಂಗುಗಳೆ. ತೆಂಗು ಸುಳಿಯುವಂತಿಲ್ಲ. ಏಕೆಂದರೆ ತೆಂಗಿನ ಸುಳಿ ದೊಡ್ಡದು. ಕಂಗಿನ ಬೆಳವಣಿಗೆಯನ್ನು ತಡೆಯುತ್ತದೆ. ಕಂಗುಗಳು ಕೊಕ್ಕರೆಯ ಕಾಲುಗಳಂತೆ ಬೆಳೆಯುವ ಭಯವುಂಟು. ಆದುದರಿಂದ ಗದ್ದೆಯ ಹುಣಿಗಳೇ ತೆಂಗುಗಳಿಗೆ ಯೋಗ್ಯ ಸ್ಥಾನ. ಹತ್ತಿರ ಹತ್ತಿರ ಆ ಸಸಿಗಳನ್ನು ನೆಡುವಂತೆಯೂ ಇಲ್ಲ. ಆದುದರಿಂದ ಹತ್ತು ಹೆಜ್ಜೆಗಳಿಗೊಂದರಂತೆ ಹೊಂಡ ತೆಗೆಯಲು ಗೋವಿಂದ ರಾಯರು ಹಾರೆಯಿಂದ ಅಗೆದು ಗುರುತು ಮಾಡಿದರು. ಹೊಸ ಸಿರಿಮುಡಲಿನ ಸುಳಿ ಬರುವ ವರೆಗೆ ಅಡರ್ ಚುಚ್ಚಿದರೆ ಸಾಕು. ಬಾಳೆಯ ನೆರಳಿನ ಅಗತ್ಯ ಅದಕ್ಕಿಲ್ಲ. ಕಂಗಿನ ತೋಟಕ್ಕೆ ಮಾತ್ರ ಬಾಳೆ. ಬಾಳೆ ಬಾಳಿನ ಗಿಡವೆಂದು ತಿಳಿದು ಅವರು ಒಂದನ್ನೂ ನೆಡಲಿಲ್ಲ. ಕಂಗಿನ ಸಸಿಗಳಿಗೆ ಬಾಗೀರಥಿ ಬಾಯಿ ಹಾಕಿದೆಯೆಂದು ಚೆಲ್ಲಲಿಲ್ಲ. ಒಂದು ಸಾಲು ಮುಗಿದ ಮೇಲೆ

ನುತ್ತೊಂದು. ಒಂದೊಂದು ಸಾಲುಗಳ ಮಧ್ಯೆ ಬೇಸಿಗೆಗೆ ನೀರು ಹರಿಸಲು ಹೋದು. ಇವೆಲ್ಲ ಕೆಲಸ ಮುಗಿಯುತ್ತಾ ಬಂದಾಗ ಬೇಸಿಗೆಯು ಪಸಿಲೇ ಬಿದ್ದಿತು. ಮತ್ತೆ ನೀರಿನ ಕಾಲುವೆ ತೆರೆಸುವ, ಕಟ್ಟೆ ಕಟ್ಟುವ ಕೆಲಸಕ್ಕೆ ಅವರು ಸೊಂಟಕಟ್ಟಿದರು. ಆ ಮೇಲೆ ಮಳೆಗಾಲ ಆರಂಭವಾಗುವ ವರೆಗೆ ತೋಟಗಳಿಗೆ ನೀರು ಹರಿಸುವ ಕೆಲಸವೇ.

ಮಳೆ ಗಗನದಿಂದ ಇಳಿಯ ತೊಡಗಿದ ಮೇಲೆ ಯಥಾ ಪ್ರಕಾರ ಬೈಲುಗದ್ದೆಯ ಬೇಸಾಯ. ಹೊಸ ಅಡಿಕೆ ಕಳಗಳ ರಚನೆ, ಗೇರು ಬೀಜ ಬಿತ್ತಿಗೆಗಳೂ ಪ್ರಾರಂಭ. ಮಳೆ ಇಳಿಮುಖವಾಗಿ ನೆರೆ ನೀರು ಇಳಿದು ಹೊಳೆ ಪಜಾಚೆಯ ಆಳುಗಳು ಬಂದ ಕೂಡಲೇ ಹೊಸ ಹೊಸ ಬೆಟ್ಟು ಗದ್ದೆ ಮಜಲು ಗದ್ದೆಗಳಲ್ಲಿ ಬಾಳೆಯ ಕಂದುಗಳನ್ನೂ ಅಡಿಕೆ ಸಸಿಗಳನ್ನೂ ನೆಡಬೇಕು. ಹೀಗೆ ಮಳೆಗಾಲ ಬೇಸಿಗೆ ಕಾಲಗಳಲ್ಲೆಲ್ಲ ಕೆಲಸವೇ ಕೆಲಸ. ಬಿಡುವೇ ಇಲ್ಲ ಗೋವಿಂದರಾಯರಿಗೆ. ಸೀತಮ್ಮನವರಿಗಾದರೂ ಅಷ್ಟೆ. ಮನೆಗೆಲಸ, ಬಾಗೀರಥಿಯ ಸೇವೆಗಳಲ್ಲೇ ಅವರ ಕೈಕಾಲುಗಳು ತಳೆದು ಹೋದುವು. ಎಲ್ಲಾದರೂ ಅಪರೂಪಕ್ಕೆ ಮಕ್ಕಳು ಮರಿ ಬಂದಾಗ ಮಾತ್ರ ಅವರು ಸ್ವಲ್ಪ ಒಂದೆರಡು ಗಳಿಗೆ ಹಾಯಾಗಿ ಕುಳಿತು ಸುಖದುಃಖದ ಮಾತುಕತೆ ಆಡಿದರು.

ಮಕ್ಕಳೂ ಬಂದರು. ಆನಾಗ ರಾಜಾ ಹೆಂಡತಿ ಮಕ್ಕಳೊಂದಿಗೆ ಬಂದು ಎರಡು ದಿನಗಳಿದ್ದು ಮರಳಿದ. ಗಂಡನನ್ನು ಕೂಡಿ ಚೊಚ್ಚಲು ಮಗುವನ್ನೆತ್ತಿಕೊಂಡು ಬಂದು ಅಜ್ಜ ಅಜ್ಜಿಯರ ಕಾಲುಗಳಿಗೆ ಎರಗಿಸಿ ಕಮಲಾ ಎರಡು ವಾರ ಉಳಿದಳು. ವ್ಯಾಪಾರವಿಲ್ಲದ ಒಂದು ಮಳೆಗಾಲದಲ್ಲಿ ಶಿವರಾಯ ಸುಗುಣಳನ್ನು ಕಟ್ಟಿಕೊಂಡು ಬಂದು ತನ್ನ ಮಗುವನ್ನು ತೋರಿಸಿದ. ಒಂದು ಬೇಸಿಗೆಗೆ ಹರಿ ಬಂದ. ಒಂದು ವಸಂತ ಕಾಲದಲ್ಲಿ ಗುಲಾಬಿ ತನ್ನ ಮಕ್ಕಳೊಂದಿಗೆ ಒಕ್ಕಲಾದಳು. ಒಬ್ಬೊಬ್ಬರ ಮಕ್ಕಳಲ್ಲಿ ಒಂದೊಂದು ಸುಖ ಅನುಭವಿಸಿದರವರು. ಒಂದರ ಅಂದ ಚಂದವನ್ನು ಗೋವಿಂದರಾಯರು ಹೊಗಳಿದರೆ ಇನ್ನೊಂದರ ಅಂಗಾಂಗವನ್ನು ಮುದ್ದಿಟ್ಟು ಸರ್ವಾಂಗ ಸುಖ ಪಡೆದರು ಸೀತಮ್ಮ. ಹೊಟ್ಟೆ ಎಳೆದುಕೊಂಡು ಹರಿವ ಮಗು ಕೈಗೆ ಸಿಕ್ಕಿದುದನ್ನು ಬಾಯಿಗೆ ತುರುಕಿ ಪಲೆತ್ನಿಸಿದಾಗ ಒಬ್ಬರು ಬಂದು ಎತ್ತಿಕೊಂಡರು. ಒಂದರ ತೊದಲು ನುಡಿ ಕೇಳಿದಷ್ಟೂ ತೃಪ್ತಿಯಿಲ್ಲ. ಮತ್ತೊಂದರ ಕಾಲು ಗೆಜ್ಜೆಯ ಸಪ್ಪಳವೇ ಸಾಕು.

ತಂದೆಯಂತೆ ಒಂದು ಮಗುವಿದೆಯೆಂದು ಒಬ್ಬರೆಂದಾಗ ಮತ್ತೊಬ್ಬರು ನಕ್ಕರು. ಕಮಲಿಯ ಲತೆಯಲ್ಲಿ ಒಂದು ಬೆಳ್ದಾವರೆ ಅರಳಿತು ಎಂದಾಗ ಮಗಳು ಕಮಲಾಳ ಮೊಗದಾವರೆ ಅರಳಿತು. ಗುಲಾಬಿಯ ಮಕ್ಕಳಿಗೆ ತಾಯಿಯ ಬಣ್ಣವೆಂದಾಗ "ಅಲ್ಲ, ಗುಲಾಬಿ ಹೂಗಳ ಬಣ್ಣ" ಎಂದು ಹೇಳಿ ಅವಳು ನಗಿಸಿದಳು. "ಈ ಹೂಗಳು ನಿನ್ನ ಕೈಯಲ್ಲಿರಲಿ. ತುರುಬಿಗೆ ಗುಲಾಬಿಯಿರಲಿ" ಎಂದು ಸೀತಮ್ಮ ಗುಲಾಬಿ ಹೂಗಳನ್ನು ಮುಡಿಸಿದರು. ತನ್ನ ಮಕ್ಕಳು, ತಂದ ಮಕ್ಕಳು ಎಂಬ ಭೇದವಿಲ್ಲದೆ ಎಲ್ಲರಿಗೂ ಮನೆಯಲ್ಲಿ ನೆಟ್ಟು ಬೆಳೆಸಿದ ಎಲ್ಲ ಪ್ರಕಾರದ ಹೂಗಳನ್ನು ಕೊಟ್ಟರು. ಹೂಗಳಾದರೂ ಎಷ್ಟು? ಎಷ್ಟು ಮುಡಿದರೂ ಮುಗಿಯದು. ಆ ಮಲ್ಲಿಗೆಗಳಲ್ಲಿಯೂ ಅನೇಕ ವಿಧ. ಅದನ್ನು ಮುಡಿದು ಮುಡಿದು ಬೇಸರ ಬಂದಾಗ ಬೇಲಿಯಲ್ಲಿ ಬೆಳೆದ ಗೋರಟೆ, ಮರದಡಿ ಉದುರಿದ ರೆಂಜೆ, ಮರದ ರೆಂಬೆಗಳಲ್ಲಿ ನೊಳೆಗಳಂತೆ ಒಡೆದ ಸುರಗೆ, ನದಿಯ ದಡದಲ್ಲಿ ನೊರೆತ ಕೇದಿಗೆ, ನೀರಿನ ಕಾಲುವೆಯ ಇಕ್ಕೆಲಗಳಲ್ಲಿ ನೆಟ್ಟ ಸುಳ್ಳಿಗಳನ್ನೂ ತುರುಬುಗಳಿಗೆ ತುರುಕಿಸಿದರು. ಹೂಗಳ ಸುವಾಸನೆಗೆ ತುರುಬು ಗಮಗಮಿಸುವುದೊತ್ತಟ್ಟಿಗಿರಲಿ, ನೈ ಮನ ಮನೆಗಳೂ ಪರಿಮಳಿಸುವುವು.

ಅಪರೂಪಕ್ಕೆ ಬಂದ ಮಕ್ಕಳಿಗೆ ಸ್ನಾನ ಪಾನ ಊಟ ಉಪಚಾರಗಳನ್ನು ಮಾಡದೆ ಗತ್ಯಂತರವಿಲ್ಲ. ತಾವು ಮಕ್ಕಳ ತಾಯಂದಿರಾದರೂ ಸೀತಮ್ಮನವರ ಕೈಗಳಿಂದ ಎಣ್ಣೆ ತಿಕ್ಕಿಸಿಕೊಳ್ಳಲು ಗುಲಾಬಿ ಕಮಲೆಯರ ಆಶೆ. ಸುಭಾಷಿಣಿ ಮತ್ತು ಸುಗುಣ ಕೂಡಾ ನಾಚುವುದಿಲ್ಲ. ನೀರು ಮನೆ ಬಾಗಿಲಲ್ಲಿ ಹರಿಯುತ್ತಿದೆ. ಕ್ರಯಕೊಟ್ಟು ಕೊಂಡ ಕಟ್ಟಿಗೆಯೂ ಅಲ್ಲ. ಆದುದರಿಂದ ಒಬ್ಬೊಬ್ಬರು ಒಂದೊಂದು ದಿನ ಒಂದೊಂದು ಗುಡಾಣ ಬಿಸಿ ನೀರನ್ನು ಎರೆದುಕೊಂಡರು. ಸಣ್ಣ ಮಕ್ಕಳಂತೆ ತಿಂಡಿ ತಿನಸುಗಳನ್ನು ಬೇಡಿ ತಿನಲಾರಂಭಿಸಿದರು. ಮಲೆ ನಾಡಿನಲ್ಲಿ ಹಲಸಿನ ಹಣ್ಣನ್ನು ತಿನ್ನುವವರೇ ಇಲ್ಲ. ಬೋರನನ್ನು ಅಲ್ಲಲ್ಲಿ ಕಳಿಸಿ ಅನೇಕ ಹಣ್ಣುಗಳನ್ನು ತರಿಸಿ, ಅದರ ಸೊಳೆಗಳನ್ನು ಅಕ್ಕಿಯೊಂದಿಗೆ ಕಡೆದು ತೇಗಿನ ಎಲೆಯಲ್ಲಿ ಮುದ್ದೆ ಮುದ್ದೆಯಿಟ್ಟು ಬೇಯಿಸಿ ಗಟ್ಟಿಮಾಡಿ ತಿಂದರು. ಶ್ಯಾವಿಗೆ, ತೆಂಗಿನಕಾಯಿ ಹಾಲೆಂದರೆ ಕಮಲೆಯ ಗಂಡನಿಗೆ ಇಷ್ಟ. ಸುಭಾಷಿಣಿಗೆ ದೋಸೆಯ ಮೇಲೆ

ಪ್ರೀತಿ. ಅವರವರಿಗೆ ರುಚಿಯಾಗಿದುದ್ದನ್ನು ಹೇಳಿ ಕೇಳಿ ಮಾಡಿ ತಿಂದರು ಹಬ್ಬ ಹುಣ್ಣಿಮೆಗಳಲ್ಲಿ ಅಕಸ್ಮಾತ್ ಮಕ್ಕಳು ಒದಗಿದರೆ ಆಗ ನಡೆಯುವ ಪಂಚ ಭಕ್ಷ್ಯ ಪರಮಾನ್ನಗಳೇ ಬೇರೆ. ನಾಗರ ಪಂಚಮಿಗೆ ಉಂಡ್ಲುಕ, ಮೋದಕ ಗಳಾದರೆ ದೀಪಾವಳಿಗೆ ದೋಸೆಯ ರಾಶಿಯೇ ತಯಾರಿಸುವರು. ಯುಗಾದಿ ಹಬ್ಬಕ್ಕೆ ಮುಂಡಗೆ ಒಲಿ ತರಿಸಿ, ಮುಳ್ಳು ತೆಗೆದು ಬೆಂಕಿಯಲ್ಲಿ ಬಾಡಿಸಿ ಬೀಸುವ ಕಲ್ಲಿನಂತೆ ಮಡಚಿಟ್ಟು ಆ ಮೇಲೆ ಉದ್ದ ತೊಟ್ಟೆ ಕುತ್ತುವರು. ಕಡೆದ ಅಕ್ಕಿಯ ಬಂದ ಈ ತೊಟ್ಟೆಗಳಿಗೆ ಸುರಿದು ಇಡ್ಲಿ ಪಾತ್ರೆಯಲ್ಲಿ ಬೇಯಿಸಿ ಕಡುಬು ಮಾಡುವುದು ಕ್ರಮ. ಉಪ್ಪಿನಕಾಯಿ ರಸ ಮುಟ್ಟಿಸಿ ಕೊಂಡು ಕಡುಬು ತಿನ್ನಲೂ ರುಚಿ. ತೆಂಗಿನಕಾಯಿ ಹಾಲು ಹಿಂಡಿ, ಬೆಲ್ಲ ಏಲಕ್ಕಿ ಬೆರಸಿ ಕಡುಬಿಗೆ ಕಲಸಿಕೊಂಡು ತಿನ್ನಲೂ ಸೊಗಸು. ಸೊಗಸಿನ ಈ ತಿಂಡಿ ತೀರ್ಥ ತಿಂದು ಹೊರಡಲು ಮಕ್ಕಳಿಗೆ ಕಾಲೇ ಬರಲಾರದು. ಎರಡು ದಿನವೆಂದು ಹೇಳಿ ಬಂದವರು ಎರಡು ವಾರ ಇದ್ದು ತೆರಳಿದರು. ಅವರು ಇದ್ದಷ್ಟು ದಿನ ಮನೆಯಲ್ಲಿ ಸಂತೆಯಷ್ಟು ಗದ್ದಲ. ಶೀತ, ಜ್ವರ, ವಾತ, ಪಿತ್ಥ ಯಾವುದೂ ಗೊತ್ತಾಗಲಿಲ್ಲ. ಅವರು ಒಬ್ಬೊಬ್ಬರೇ ತೆರಳಿ ಮನೆ ಬರಿದಾದ ಮೇಲೆ ಮತ್ತೆ ಬೇಸರದಿಂದ ಮರುಗಿದರು. ಸೀತಮ್ಮ.

"ನನಗೆ ವನವಾಸವೇ ಗತಿ. ಒಂದು ದಿನ ಒಂದು ಕಡೆ ತೆರಳಲಿಕ್ಕಿಲ್ಲ. ಏನು ದೇವರು ಬರೆದಿದ್ದಾನೋ ನನ್ನ ಹಣೆಯಲ್ಲಿ." ಎಂದು ನುಡಿಯಲಾ ರಂಭಿಸಿದರು.

"ಒಂದೆಡೆ ಏಕೆ? ಬೇಕಾದ ಕಡೆ ಹೋಗು. ಬರೇ ಕೈಯಲ್ಲಿ ತೆರಳ ಬೇಡ. ಕೈಯಲ್ಲಿ ಒಂದು ಕೋವಿ ಹಿಡಿದುಕೋ. ಈಗ ಯುದ್ಧ ಆರಂಭ ವಾಗಿದೆಯಂತೆ. ನಿನ್ನನ್ನೂ ಸೇರಿಸಿಕೊಳ್ಳುತ್ತಾರೆ ಸೈನ್ಯದಲ್ಲಿ. ಬಲಿ ಕೊಡಲು ನಮ್ಮ ಎಷ್ಟು ಸೈನ್ಯವಿದ್ದರೂ ಬೇಕು ಬ್ರಿಟಿಶರಿಗೆ. ಈ ಪ್ರಮೀಳಾ ಸೈನ್ಯ ದೊರಿತರಂತೂ ಅವರಿಗೆ ಬಹಳ ಆನಂದ. ಹಿಟ್ಲರನ ಸೈನಿಕರು ಸ್ತ್ರೀ ಸೈನ್ಯ ನೋಡಿ ಯುದ್ಧವನ್ನೇ ಮಾಡಲಿಕ್ಕಿಲ್ಲ. ನೋಡು ಒಂದು ಕೈ!" ಎಂದು ಅವರು ಪರಿಹಾಸ ಮಾಡಿದರು.

"ನನ್ನನ್ನು ಕಳಿಸಲು ಹುಷಾರಿದ್ದೀರಿ. ಸರಿ. ಮೊದಲು ಗಂಡಸರನ್ನು ಎಳೆದುಕೊಂಡು ಹೋಗುತ್ತಾರಂತೆ. ನೀವು ಹೊರಡ ಬೇಕು ಮೊದಲು."

ನನ್ನಷ್ಟು ಎಳೆದುಕೊಂಡು ಹೋಗುವವ ಬ್ರಹ್ಮ. ನಾನು ಮುಂದೆ ಗುಂಡು ಹಾರಿಸುವ ಬದಲು ಕೋವಿ ಹಿಂದೆ ತಿರುಗಿಸಿ ಬ್ರಿಟಿಶರನ್ನೇ ಹೊಡೆಯುಲುಂಟು. ನಾನು ಜರ್ಮನರ ಕಡೆ. ೧೪-೧೮ರ ಯುದ್ಧದಲ್ಲಿ ತಮಗೆ ಸಹಾಯ ನೀಡಿದ ಗಾಂಧಿಗೆ ಏನು ಕೊಟ್ಟರು ಬ್ರಿಟಿಶರು? "ಕೊಡುತ್ತೇವೆ" ಎಂದು ನಂಬಿಸಿ ತಮ್ಮ ಬೇಳೆ ಬೆಂದ ಮೇಲೆ ಮತ್ತೆ ಕೊಟ್ಟುದು ಮೋಸವೇ. ಸ್ವರಾಜ್ಯವಲ್ಲ. ಈ ಸಲ ಯಾರು ಕೊಡುತ್ತಾರೆ ಅವರಿಗೆ ಸಹಾಯ? ನಾನು ಒಂದು ದಮಡಿ ಕೊಡಲಿಕ್ಕಿಲ್ಲ".

"ಕೊಡಲು ನಿಮ್ಮ ಹತ್ತಿರ ಉಂಟು ಕುಬೇರನ ಬೊಕ್ಕಸ?" ಎಂದು ವ್ಯಂಗ್ಯವಾಗಿ ನಕ್ಕರು ಸೀತಮ್ಮ.

"ಕುಬೇರನಲ್ಲದಿದ್ದರೂ ಕುಚೇಲನೇನಲ್ಲ. ಹೀಗೆಯೇ ಇನ್ನು ನಾಲ್ಕಾರು ವರುಷ ಹೋಗಲಿ. ಮತ್ತೆ ನೋಡು. ವಿಮಾನ, ವಿಮಾನದಲ್ಲಿ ಹಾರಾಡುತ್ತೇವೆ"

ಅವರು ಮಾತು ಮುಗಿಸುವಷ್ಟರಲ್ಲಿ ಆಕಾಶದಲ್ಲಿ ಗುಡುಗಿನಂತೆ ಬುಡು ಬುಡು ಬುಡು ಬುಡಿಕೆಯನ್ನು ಬಡಿದಂತಾಯ್ತು. "ವಿಮಾನ! ವಿಮಾನ! ಅಪ್ಪಯ್ಯ ವಿಮಾನ!" ಎಂದು ಕೂಗಿದ ಮೋಹನ.

ಗೋವಿಂದರಾಯರು ಅಂಗಳಕ್ಕೆ ಒಂದು ನಿಂತು ನೋಡಿದರು. ಸೀತಮ್ಮನವರು ಮುಸುರೆ ಕೈಯಲ್ಲೇ ದಡದಡ ಓಡಿ ಬಂದರು.

"ಕುದುರೆ ಮುಖಕ್ಕೆ ಎಲ್ಲಾದರೂ ತಾಗಿದರೆ ವಿಮಾನದ ರೂಪ ಉಳಿದೀತೇ? ಅದರೊಳಗೆ ಕೂತವರ ಎಲುಬಿನ ಚೂರೂ ಸಿಗಲಿಕ್ಕಿಲ್ಲ" ಎಂದು ಸೀತಮ್ಮನವರು ಎದೆಗೆ ಕೈಯಿಟ್ಟುಕೊಂಡರು.

"ಇದು ಯುದ್ಧ! ಮಹಾಯುದ್ಧ! ಮನುಷ್ಯನ ಪ್ರಾಣಕ್ಕೆ ಬೆಲೆಯಿಲ್ಲ. ನಿನಗೇನು ಗೊತ್ತುಂಟು?" ಎಂದು ಹೇಳುತ್ತ ಗೋವಿಂದರಾಯರು ಮುಖಮಂಟಪಕ್ಕೆ ಬಂದು ನಶ್ಯ ಏರಿಸಿದರು. ಯುದ್ಧದ ಬಗ್ಗೆ ವಿಚಾರ ಮಾಡತೊಡಗಿದರು ದಂಡಿಗೆ ಹೋಗುವವರ ಹಾಗೆ.

# ೧೦ನೆಯ ಅಧ್ಯಾಯ

ಗೋವಿಂದರಾಯರು ಯುದ್ಧಕ್ಕೆ ಹೋದವರಲ್ಲ. ಯುದ್ಧವನ್ನೂ ಅವರು ಕಂಡಿಲ್ಲ. ಅವರ ಜೀವಮಾನದಲ್ಲೇ ೧೯೧೪-೧೮ ರ ಮಹಾಯುದ್ಧ ನಡೆದಿತ್ತೇನೋ ನಿಜ. ಭಾರತವನ್ನು ಬ್ರಿಟಿಶರು ತಮ್ಮ ಗಾಡಿಗೆ ಜೋಡಿಸಿದ್ದರೂ ಈ ದೇಶದಲ್ಲಿ ಕಾಳಗ ಸಂಭವಿಸಿರಲಿಲ್ಲ. ಆದರೆ ಜನ ದುಃಖದ ಬಂಡಿಯನ್ನು ಮಾತ್ರ ಎಳೆಯ ಬೇಕಾಯ್ತು. ಮುಡಿ ಅಕ್ಕಿಗೆ ಮೂರು ರೂಪಾಯಿ ಇದ್ದುದು ಮೂವತ್ತಕ್ಕೆ ಏರಿತ್ತು. ರಾವ್ ಬಹದ್ದೂರ್, ದಿವಾನ್ ಬಹದ್ದೂರ್, ಖಾನ್ ಬಹದ್ದೂರ್, ಪದ ಪದವಿಗಳ ಆಶೆಯಿಂದ ಪಂತಿಗೆ ಕೂಡಿಸಿ ಆಳುವ ಮಹಾನುಭಾವರ ಕೃಪಾದೃಷ್ಟಿ ಪರಿಪುಷ್ಟರಾಗಲೆತ್ನಿಸಿದ ಜನರುಂಟು. ತಿಂಗಳಿಗೆ ಹತ್ತಿಪ್ಪತ್ತು ರೂಪಾಯಿ ಸಂಬಳವೂ ದೊರೆಯದ ಸಕಾಲಕ್ಕೆ ಕೈಸೇರದ ಶಾಲಾ ಮಾಸ್ತರರನ್ನೂ ಅವರು ಬಿಟ್ಟಿರಲಿಲ್ಲ. ಹೀಗಾಗಿ ಸಂಸಾರದಲ್ಲಿ ಆಚೆಯ ದಂಡೆ ಕಾಣದೆ ಮುಳುಗೇಳುತಿದ್ದ ಗೋವಿಂದರಾಯರು ಅನಂತ ಕಷ್ಟ ನಷ್ಟಗಳಿಗೆ ಈಡಾಗಿದ್ದರು. ಆ ಕಟು ಅನುಭವಗಳು ಇನ್ನೂ ಅವರ ಸ್ಮರಣೆಯಲ್ಲಿದೆ. ಆದುದರಿಂದ ಮತ್ತೆ ಮಹಾಯುದ್ಧ ಆರಂಭವಾಯಿತೆಂದು ಮಂಗಳೂರಿನಿಂದ ಬಂದ ರಾಜಾ ತಿಳಿಸಿದಾಗ, "ಹಾ, ಹಾ" ಎಂದು ಹಾ ಹಾಕಾರ ತೆಗೆದರು. "ಏನು ಅನರ್ಥವಿದು! ಎಂಥಾ ವಿಪತ್ತು ಇದು ಪ್ರಳಯ! ಅಗ್ನಿಪ್ರಳಯ" ಎಂದು ತತ್ತರಿಸಿದರು. "ಈ ಯುದ್ಧ ಎಷ್ಟು ಕಾಲದ ವರೆಗೆ ಎಳೆಯುತ್ತದೋ? ಏನೇನು ಈ ಕಣ್ಣುಗಳಿಂದ ಕಾಣಲಿದೆಯೋ, ಯಾವ ಯಾವ ದುಃಖ ದುಮ್ಮಾನಗಳನ್ನು ಸಹಿಸಲಿದೆಯೋ " ಎಂದು ಅವರು ಚಡಪಡಿಸತೊಡಗಿದರು. ಇವೆಲ್ಲವುಗಳಿಗಿಂತಲೂ ಮೂರನೇ ಮಗ ಹರಿಯ ಚಿಂತೆಯೂ ಬಹಳವಾಯ್ತು ಅವರಿಗೆ.

ಹರಿ ಮನೆಯಿಂದ ಹೊರಟು ಹೋದ ಮೇಲೆ ಮಂಗಳೂರಿನ ಒಂದು ಪತ್ರಿಕಾ ಕಚೇರಿಯಲ್ಲಿ ಕೆಲಸಕ್ಕೆ ಸೇರಿಕೊಂಡ. ಅಲ್ಲಿರುವಾಗಲೇ ಗಾಂಧೀ ಗಾಳಿ

ಬೀಸಿತು ಅವನಿಗೆ. ದೊಡ್ಡವರೊಡನೆ ಕೂಡಿಕೊಂಡು ದೊಡ್ಡವರ ಮಕ್ಕಳೊ
ಡನೆ ತಾನೂ ಆರು ಮೊಳದ ದೇಶೀ ಪಂಚೆ, ಗಾಂಧೀ ಟೊಪ್ಪಿಗೆ ಹಾಕಿಕೊಂಡು
ಹಳ್ಳಿ ಹಳ್ಳಿ ಅಲೆದ. ಈ ಹೊತ್ತು ಅಲ್ಲಿ ಮೀಟಿಂಗ್, ಈ ಹೊತ್ತು ಇಲ್ಲಿ
ಮೀಟಿಂಗ್. ಇಲ್ಲಿ ಈ ಬಂಗಾಡಿಯ ಮಲೆನಾಡಿನ ಕೊಂಪೆಗೆ ಬಂದಾಗಲೂ
ಅವನು ಒಂದು ದಿನ ತೆಪ್ಪಗೆ ಕುಳಿತು ಕೊಂಡಿರಲಿಲ್ಲ. ಬಂಗಾಡಿ ಪೇಟೆಯ
ಜಾತ್ರೆ, ಕೊಲ್ಲಿ ಜಾತ್ರೆಗಳ ಕಾಲಕ್ಕೆ ಮಿತ್ರರೊಡನೆ ಸಭೆ ಸೇರಿಸಿದ. ಪೋಲೀ
ಸರಿಗೆ ಅವನ ಮೇಲೆ ಕಣ್ಣು. ಬೇಟೆಯ ನಾಯಿಗಳಂತೆ ಅವನನ್ನು ಹಿಂಬಾಲಿ
ಸುತ್ತಿದ್ದರು ಸಿ. ಐ. ಡಿಗಳು. ಕೊನೆಗೆ ಈ ಜಿಲ್ಲೆಯಿಂದ ಅವನನ್ನು ಗಡೀಪಾರು
ಮಾಡಿದರು. ಜಿಲ್ಲೆ ಬಿಟ್ಟು ಪರ ಜಿಲ್ಲೆಗೆ ತೆರಳುವ ಮುಂಚೆ ಕೂಡಾ ಅವನು
ಊರಿಗೆ ಬಂದಿದ್ದ. ತಾಯಿ, ದೊಡ್ಡಣ್ಣ ಪರಿಪರಿಯಾಗಿ ಹೇಳಿಕೊಂಡರು
"ಇನ್ನು ಸಾಕು. ನಿನಗೆ ಈ ಚಳವಳಿ ಬೇಡ. ಹೊಟ್ಟೆ ಹೊರೆಯುವುದೇ ಕಷ್ಟ
ನಮ್ಮಂತವರು. ನಮಗೆ ಹಿಂದಿಲ್ಲ; ಮುಂದಿಲ್ಲ. ನೆರೆಯಲ್ಲಿ ಹೋಗುವಾಗ ಹಗ್ಗ
ಎಸೆಯುವವನು ಒಬ್ಬನೂ ಇಲ್ಲ. ಮನೆಯಲ್ಲಿ ಬೇಕಾವಷ್ಟು ತಿನಲು ಉಣಲು
ಇದ್ದರೆ ಅದೊಂದು ಬೇರೆ. ಶ್ರೀಮಂತರಾದರೆ ಗಾಂಧಿ ಟೊಪ್ಪಿಗೆ ಹಾಕಿ
ಕೊಂಡರೂ ನಡೆಯುತ್ತದೆ. ಅವರ ಸಮೀಪ ಹಾದು ಹೋಗಲು ಪೋಲೀ
ಸರೂ ಹೆದರುವರು. ಕೆಂಪು ಮುಂಡಾಸಿನವರು ಬಂದಾಗ ಬಿಳಿ ಟೊಪ್ಪಿಗೆ ತೆಗೆ
ದಿಟ್ಟು ಜರಿ ರುಮಾಲು ಸುತ್ತಿ ವೇಷ ಕಟ್ಟಲೂ ಅವರಿಗೆ ಗೊತ್ತಿರುತ್ತದೆ.
ನಿನ್ನಿಂದ ಅದೆಲ್ಲ ಅಶಕ್ಯ. ತಾವು ಪರದೆಯ ಹಿಂದೆ ಕುಳಿತು ನಿನ್ನಂತಹ
ಬಡಪಾಯಿಗಳನ್ನೇ ಅವರು ರಂಗಸ್ಥಳಕ್ಕೆ ನೂಕುವರು. "ಸತ್ತರೆ ಸಾಯಲಿ"
ಎಂದೆನ್ನುವರವರು. ಯಾರ ಮಕ್ಕಳ ಮೇಲೆ ಯಾರಿಗೆ ಸುಖದುಃಖ? ಜೀವ
ಕೊಡುವವರು ನೀವು. ಜೀವ ಬಿಡುವವರು ನೀವು. ನಾಳೆ ಸ್ವರಾಜ್ಯ ಸಿಕ್ಕಿ
ದರೂ ನಿಮಗೆ ಲಭಿಸುವ ಮಹಾಭಾಗ್ಯ ಅಷ್ಟರಲ್ಲೇ ಇದೆ. "ನಾನು ಹೀಗೆ
ಮಾಡಿದ್ದೆ. ನಾನು ಅಂಥವ. ಇಂಥವ. ಸಂತೆಗೆ ಹೋಗಿ ಮೊಂತೆ ಕದ್ದವ."
ಎಂದು ಜಂಭ ಕೊಚ್ಚಿಕೊಂಡು ಯಾರ್ಯಾರು ಗಾಂಧಿ ಟೊಪ್ಪಿಗೆ ಹಾಕಿಕೊಂಡು
ಬರಲುಂಟು. ರಾವ್‌ಸಾಹೇಬ್, ರಾವ್‌ಬಹಾದ್ದೂರುಗಳು ಬಿಳಿ ಟೊಪ್ಪಿಗೆ
ಧರಿಸದಿದ್ದರೆ ಮತ್ತೆ ಕೇಳು. ಮುನಿಸಿಪಾಲಿಟಿ, ಡಿಸ್ಟ್ರಿಕ್ಟ್ ಬೋರ್ಡ್,
ಪಂಚಾಯತ್ ಬೋರ್ಡ್ ಎಲ್ಲವನ್ನೂ ಅವರು ನುಂಗುವರು. ಮತ್ತೆ ಮುಖ

ನೋಡಿ ಮಣೆ ಇಡುವರು. ಜಾತಿ ನೋಡಿ ಮಾತನಾಡಿಸುವರು. ಜಾತ್ಯಾ
ತೀತನನ್ನು ಪ್ರೀತಿಸುವವರು ವಿರಳ. ಶ್ರೀಮಂತಿಕೆಗೆ ಜಾತಿಯಿಲ್ಲ. ಸಿರಿವಂತಿ
ಕೆಯೇ ಒಂದು ಜಾತಿ. ಸಿರಿಯಿಲ್ಲದವನಿಂದ ದೂರ ಸರಿಯುವರು. ಸುಲಿದು
ಆ ಕಾರ್ನಾಡ್ ಸದಾಶಿವರಾಯರನ್ನೇ ದೂರ ಸರಿಸಿದರು. ನಿಮ್ಮಂಥವರನ್ನು
ಜೀವದಿಂದ ಬಿಟ್ಟರೆ ದೊಡ್ಡದು" ಎಂದು ಬಗೆ ಬಗೆಯಾಗಿ ಬೇಡಿಕೊಂಡರು.
ಆದರೆ ಯಾವುದೂ ಅವನ ಎದೆಗೆ ನಾಟಲಿಲ್ಲ. "ಇಳಿದಾಗಿದೆ ಒಮ್ಮೆ. ಹೋದೇ
ಸಾಯಬೇಕು. ಇಲ್ಲದಿದ್ದರೆ ಬದುಕಬೇಕು. ಅಲ್ಲಿಯ ವರೆಗೆ ಸರಿ" ಎಂದು
ಹೇಳಿ ಮುಂಬಯಿ ಪ್ರಾಂತಕ್ಕೆ ನಡೆದು ಬಿಟ್ಟ.

"ಸಾವಿಗೂ ಅವನು ಅಂಜಲಾರ. ಈ ಸಲ ಸತ್ಯಾಗ್ರಹ ಆರಂಭವಾದರೆ
ಬ್ರಿಟಿಶರು ಬರೇ ಬೆತ್ತ ಪ್ರಯೋಗ, ಅಶ್ರುವಾಯು ಉಪಯೋಗ, ಲಾಠೀ
ಪ್ರಹಾರಗಳಿಗೇ ಬಿಡಲಿಕ್ಕಿಲ್ಲ. ಯುದ್ಧದ ರೊಚ್ಚಿನಿಂದ ಕಂಡ ಕಂಡಲ್ಲಿ ಗುಂಡು
ಗಳನ್ನೆಸೆಯಬಹುದು. ಮಾಣಿ ಎಲ್ಲಿ ಈ ಹುಲಿಗಳ ಬಾಯುಗಳಿಗೆ ಬೀಳು
ತ್ತದೋ! ಎಲ್ಲಿ ಕೈಕಾಲು ಮುರಿದುಕೊಳ್ಳುತ್ತಾನೋ" ಎಂದು ಗೋವಿಂದ
ರಾಯರು ಹಗಲಿರುಳು ಪರಿತಪಿಸಿದರು. "ಗಾಂಧೀಜಿಯವರು ಹೋರಾಟ
ಆರಂಭಿಸಿದರು" ಎಂದು ರಾಜಾ ಬಂದು ಹೇಳಿ, ದೇಶದ ಎಲ್ಲ ಕಡೆಗಳಲ್ಲಿ
ನಡೆದ ಗೋಳೀಬಾರಿನ ಹತ್ಯಾಕಾಂಡದ ಕರುಣ ಕತೆಗಳನ್ನೆಲ್ಲ ವಿವರಿಸಿದ.
"ನಿನ್ನ ಎದೆ ಗಟ್ಟಿಯಿದೆಯೋ ಇಲ್ಲವೋ ನೀನೆ ಮುಟ್ಟಿ ನೋಡಿಕೋ. ಲಾಠೀ
ಏಟು, ಬಾಣ ಬಾಂಬುಗಳಿಗೂ ಎದೆಯೊಡ್ಡುವ ನಿರ್ಭೀತಿ ಬೇಕು."
ಎಂದು ಹಿಂದೊಮ್ಮೆ ಮಗನ ಮುಂದೆ ಅವರು ಆಡಿದ್ದರೂ ಈಗ ಪುತ್ರ
ವಾತ್ಸಲ್ಯದಿಂದ ತಳಮಳಿಸಿದರು. ಹರಿಯ ಪತ್ರವೂ ಬಂದಿರಲಿಲ್ಲ ಇತ್ತೀಚೆಗೆ.
ಆದುದರಿಂದ ಅವರಿಗೆ ಇನ್ನಷ್ಟು ಗಾಬರಿ. "ಏನಾದರೂ ವರ್ತಮಾನ
ಇದೆಯಾ? ಪತ್ರ ಬಂತಾ?" ಎಂದು ರಾಜಾ ಬಂದಾಗಲೆಲ್ಲ ಪದೇ ಪದೇ
ಕೇಳಿದರು. "ಹರಿಯನ್ನು ಎರೆಸ್ಟ ಮಾಡಿದರಂತೆ. ಪತ್ರಿಕೆಗಳಲ್ಲಿ ಸುದ್ದಿ
ಬಂದಿದೆ" ಎಂದು ಒಮ್ಮೆ ರಾಜಾ ಬಂದಾಗ ಸುದ್ದಿ ತಂದ. ಅದನ್ನು ಕೇಳಿದ
ಮೇಲೆ, "ಅಷ್ಟೇ ಆಯಿತಲ್ಲ" ಎಂದು ನಿಟ್ಟುಸಿರುಬಿಟ್ಟರು.

ಆದರೆ ಸೀತಮ್ಮನವರು ಮಾತ್ರ ಕಣ್ಣೀರು ಸುರಿಸಲಾರಂಭಿಸಿದರು.
"ನಮ್ಮ ಕುಟುಂಬದಲ್ಲಿ ಯಾರೂ ಜೈಲಿಗೆ ಹೋಗಿಲ್ಲ. ಅವನು ಪುಡುಕಿ

ಎಂಥಾ ಕಾರ್ಯಕ್ಕೆ ಕೈಯಿಕ್ಕಿದ? ಇನ್ನು ಅವನಿಗೆ ಯಾರು ಹೆಣ್ಣು ಕೊಡುತ್ತಾರೆ? ಜೈಲಿನಲ್ಲಿ ಎಣ್ಣೆ ಇದೆಯಾ? ಉಣ್ಣೆ ಕಂಬಳಿ ಹೊದ್ದು, ರಾಗಿ ಮುದ್ದೆ ತಿಂದು ಹೇಗೆ ಬದುಕುತ್ತಾನೆ? ” ಎಂದು ಹೇಳಿ ಅಳತೊಡಗಿದರು. ಚಳಿ ಅವರ ಜೀವಕ್ಕೆ ಅಂಟಿಕೊಂಡಿತು.

ಕೇಳಿ ಕೇಳಿ ಬೇಸರವಾದಾಗ ರೇಗಿ ಮಾತನಾಡಿಯೋ ಅವರ ಬಾಯಿ ಮುಚ್ಚಿಸಲೆತ್ನಿಸಿದರು ಗೋವಿಂದರಾಯರು. “ನಿನಗೆ ಮರುಳು. ಅವನು ಕದ್ದು ಕಣ್ಣಾಗೂರು ಜೈಲಿಗೆ ಹೋಗುವನೇನು? ಅವನೊಬ್ಬನೇ ಇಲ್ಲ. ಎಂಥೆಂಥ ಲಕ್ಷಾಧೀಶರ ಮಕ್ಕಳೂ ಇವರಲ್ಲಿ ಸೇರಿಕೊಂಡಿದ್ದಾರೆ. ಜವಾಹರಲಾಲರೇನು ಸಾಮಾನ್ಯ ಪುರುಷರೇನು? ಪಟೇಲರು, ಪ್ರಸಾದರು ಇವರೆಲ್ಲ ಪುಂಡ ಪೋಕರಿಗಳೇನು? ಗಾಂಧಿಯೊಟ್ಟಿಗೆ ದೊಡ್ಡ ವಾನರ ಸೇನೆಯೇ ಹೋಗಿದೆ ಜೈಲಿಗೆ. ಇದರಲ್ಲಿ ಅಪಮಾನವಿಲ್ಲ. ಯಾರೂ ಹೆಣ್ಣು ಕೊಡದಿದ್ದರೆ ಬೇಡ. ಯಾವ ಹೆಣ್ಣನ್ನೂ ಅವನು ಮಾಡಿಕೊಂಡಾನು. ಅವನು ಹೆಣ್ಣು ಹೆಂಗಸಲ್ಲ ಲ್ಲವಲ್ಲ. ಗಂಡಸುಂತ ಆದಮೇಲೆ ಎಲ್ಲಾದರೂ ಅವನಿಗೊಂದು ಹೆಂಗಸನ್ನು ಬ್ರಹ್ಮ ಸೃಷ್ಟಿಸಿರಲೇ ಬೇಕು. ನೀನ್ಯಾಕೆ ಚಿಂತೆ ಪಡುತ್ತೀ? ನೀನು ಹೀಗೆಲ್ಲ ನೇತ್ರಾವತಿ ಹರಿಸಿದರೆ ನಾನೂ ‘ಗಾಂಧೀ-ಕಿ-ಜೈ” ಎಂದು ನಾಳೆ ಹೊರಟು ಬಿಡುತ್ತೇನೆ ನೋಡು” ಎಂದು ಗದರಿಸಿದರು.

‘‘ನಾಳೆ ಏಕೆ? ಈ ಹೊತ್ತೇ ಹೊರಡಿ. ಕಾಶೀ ಯಾತ್ರೆ ಮಾಡಿ ನೀವು ಬಂದಾಯ್ತು. ಇನ್ನೊಮ್ಮೆ ಗಾಂಧಿ ಮಹಾತ್ಮರ ಹೆಸರು ಹೇಳಿ ಜೈಲು ಯಾತ್ರೆ ಮಾಡಿ ಬನ್ನಿ. ನಾನು ಜೀವಂತವಿರುವಾಗಲೇ ಒಮ್ಮೆ ಅದನ್ನೂ ನೋಡಿ ಬಿಡುತ್ತೇನೆ.’’

“ಜೈಲಿಗೆ ನಾನೂ ಹೋಗುತ್ತಿದ್ದೆನಲ್ಲ! ಏನು ಮಾಡಲಿ ಹೇಳು. ನಾಲ್ಕು ಜನರ ನಾಲಿಗೆಗೆ ಹೆದರಿ ಕುಳಿತಿದ್ದೇನೆ. ದಮಯಂತಿಯನ್ನು ಕಾಡಿನಲ್ಲಿ ಅಗಲಿದ ನಳ ಮಹಾರಾಯನಂತೆ ನಿನ್ನನ್ನೂ ಈ ಅರಣ್ಯದಲ್ಲಿ ಬಿಟ್ಟು ತೆರಳಿದನೆಂದು ನಾಳೆ ಲೋಕಾಪವಾದ ಬಾರದೇ ಇರಲಿಕ್ಕಿಲ್ಲ. ಸಾಯುವ ಕಾಲಕ್ಕೆ ಮಾಳಪ್ಪ ಮೀನು ತಿಂದು ಸತ್ತ ಎಂದು ಜನರು ಆಡಿಕೊಳ್ಳುವುದು ಬೇಡ ಮುತ್ತೆ”.

"ಓಹೋಹೋ, ನನ್ನ ಸುಖ ದುಃಖ ನೋಡಿ ನೀವು ಹಿಂದೆ ಉಳಿದಿದ್ದೀರಾ? ಬೇಷ್. ಈಗ ನೀವೇ ಸಾಕಿ ಸಲಹುತ್ತಿದ್ದೀರಾ ನನ್ನನ್ನ? ನನ್ನ ಕೈಕಾಲು ಹಂದಾಡುವ ವರೆಗೆ ರಾಜ ಒಪ್ಪತ್ತು ಗೂಳು ಹಾಕಿಯಾನು"

"ರಾಜನ ಮೇಲೆ ಸಂಜಗ ನಿನಗೆ! ಗಂಡ ಮುದುಕನಾದ ಮೇಲೆ ಮಕ್ಕಳೇ ಊರುಗೋಲೆಂಬುದು ನಿಜ. ಆದರೆ ರಾಜ ಭೋಜ ಮಹಾರಾಜರ ದರ್ಬಾರ್ ಈಗ ಎಲ್ಲಿದೆ? ಅವರ ಥಾಂ ಥೀಂ ಡಕ್ಕ ಥೈಲ್ ವೈಭವವೆಲ್ಲ ಈಗ ಗತವೈಭವ. ಖಜಾನೆ ಬರಿದಾದ ಮೇಲೆ ತಾಳತಂಬೂರಿ ಹಿಡಿದು ಭಜನೆ ಮಾಡುವುದೊಂದೇ ಗತಿ. ಯುದ್ಧ ಸುರುವಾದ ಮೇಲೆ ರಾಜನದ್ದೂ ಅದೇ ಸ್ಥಿತಿ. ಸಂಸಾರ ಸಾಗಿಸುವುದೇ ಏಳು ಹನ್ನೊಂದಾಗಿದೆ ಅವನಿಗೆ. ಕಾಲಿಗೆಳೆದರೆ ತಲೆಗಿಲ್ಲ. ತಲೆಗೆಳೆದರೆ ಕಾಲಿಗಿಲ್ಲ. ಇನ್ನೂ ಕೆಲವು ವರುಷ ಯುದ್ಧ ಇದೇ ರೀತಿ ಸಾಗಿದರೆ ಏನೇನಾಗುತ್ತದೋ? ಜಪಾನ್ ಬಾಂಬೆಸೆಯುತ್ತಿದೆಯೆಂದು ಮುಂಬಯಿ ಮದ್ರಾಸ್ ಪಟ್ಟಣಗಳಿಂದ ಜನ ಓಡಿ ಬಂದಂತೆ ಮಂಗಳೂರಿನಿಂದಲೂ ಹೆಂಡತಿ ಮಕ್ಕಳೊಂದಿಗೆ ರಾಜಾ ಓಡಿ ಬರಲುಂಟು" ಎಂದು ಗೋವಿಂದರಾಯರು ಮಗನ ದುರವಸ್ಥೆಯ ಬಗ್ಗೆ ವಿಷಾದಿಸಿದರು.

ಅವರೆಂದಂತೆ ಯುದ್ಧ ಆರಂಭವಾದಂದಿನಿಂದ ರಾಜನ ಪರಿಸ್ಥಿತಿಯನ್ನು ಹೇಳಲಳವಲ್ಲ. ಎರಡು ಸಂಸಾರಗಳ ಭಾರ ಹೊರಲಾರದ ಹೊರೆಯಾಯ್ತು ಅವನಿಗೆ. ಅವನದು ಪೇಟೆ ಸಂಸಾರ. ಎಷ್ಟು ತಂದು ಹಾಕಿದರೂ ಇನ್ನೊಂದು ಗಳಿಗೆಗೆ ಬರಿದು. ಬಂಗಾಡಿ ಸಂಸಾರಕ್ಕೆ ವೆಚ್ಚ ಹೆಚ್ಚಿಲ್ಲದಿದ್ದರೂ ಕೃಷಿಗೆ ಮತ್ತೆ ಖರ್ಚು. ಖರ್ಚು. ಖರ್ಚು. ಒಂದಕ್ಕೆ ಹತ್ತು ಪಟ್ಟು ಖರ್ಚು! ಆದರೆ ಸಂಬಳ ವಿಶೇಷ ಹೆಚ್ಚಾಗಲಿಲ್ಲ. ಗಿಂಬಳ ತಿನ್ನಲು ಅವನದು ಆಫೀಸರ್ ಕೆಲಸವಲ್ಲ. ಬರೇ ಗುಮಾಸ್ತ. ಗುಮಾಸ್ತರರನ್ನು ಯಾರು ಕೇಳಬೇಕು? ಒಂದು ಸಿಂಗಲ್ ಚಹಾ ಕೊಡುವವರಿಲ್ಲ ಅಪರೂಪಕ್ಕೆ. ರಸ್ತೆ, ರೆವೆನ್ಯೂ, ಅಬಕಾರಿ, ಪೋಲೀಸ್ ದಫ್ತರ್‌ಗಳಲ್ಲಿ ಗುಮಾಸ್ತರಾಗಿದ್ದರೂ ಹುಲಿಗಳೊಂದಿಗೆ ನರಿಗುಳ್ಳೆನರಿಗಳಿಗೂ ಪಾಲು ಸಿಗುವುದು ಸಹಜ. ಆದರೆ ರಾಜನಿಗೆ ತುಟ್ಟಿ ಭತ್ತೆಯೊಂದೇ ಗಿಂಬಳ. ಅದೂ ಮಂಗಳೂರು ನಗರದಲ್ಲಿ ಚಹಾ, ಕಾಫಿ, ಸಾಬೂನುಗಳಿಗೆ ಸಾಲದು. ರೇಶನಿಗೂ ಒಂದು ಪೈ ಉಳಿಯುವುದಿಲ್ಲ. ರೇಶನಿನಲ್ಲಿ ಮುಡಿ ಮುಡಿ ಅಕ್ಕಿ ಸಿಕ್ಕುವುದೂ ಇಲ್ಲ. ಆಫೀಸಿಗೆ ತೆರಳುವ

ದಾರಿಯಲ್ಲಿ ಎರಡು ಸಲ ಹೋಟ್ಲಿಗೆ ಹೊಕ್ಕ ಬೇಕೇ. ಅದರಿಂದ ಒಂದಕ್ಕೆ ಎರಡು ಖರ್ಚು. ಒಂದಕ್ಕೆ ಎರಡು ಬೆಲೆ ಒಂದು ಪದಪ್ರಾಸ ಅಷ್ಟೆ. ಆದರೆ ಮಾರ್ಕೇಟಿಗೆ ಒಂದು ಗಳಿಗೆ ತಿರಳಿದರೆ ಒಂದಕ್ಕೆ ಹತ್ತರಷ್ಟು ಬೆಲೆಯೊಂದು ಗೊತ್ತಾಗುವುದು. "ಅದೂ ಒಂದಿದ್ದರೆ ಇನ್ನೊಂದಿಲ್ಲ. ಬೇಕಾದ ವಸ್ತುವೊಂದೂ ಮಾರ್ಕೇಟಿನಲ್ಲಿಲ್ಲ" ಎಂದು ಬಂಗಾಡಿ ಮನೆಗೆ ಬಂದು ಊಟಕ್ಕೆ ಕುಳಿತಾಗ ತಾಯಿ ತಂದೆಗಳ ಮುಂದೆ ರಾಜಾ ತೋಡಿಕೊಳ್ಳುವುದುಂಟು.

"ಅಬ್ಬಾ ದೇವರೇ, ಕಲಿಕಾಲ ಬಂತು" ಎಂದು ಸೀತಮ್ಮನವರು . ನುಡಿಯುವವರು. ಅವರಿಗೆ ಹೆಚ್ಚಿಗೆ ಅರ್ಥವಾಗುತ್ತಿರಲಿಲ್ಲ.

ಆದರೆ ಗೋವಿಂದರಾಯರು ಮಾತ್ರ, "ಹಾಗಾದರೆ ನಮ್ಮ ಜಿಲ್ಲೆಯಲ್ಲಿ ಬೆಳೆದ ಅಕ್ಕಿಯೆಲ್ಲ ಎಲ್ಲಿ ಹೋಯ್ತು?" ಎಂದು ಪ್ರಶ್ನಿಸುವರು.

"ಹೋಯ್ತಲ್ಲಿಗೆ? ಬ್ಲೇಕ್ ಮಾರ್ಕೇಟಿಗೆ!"

"ಹೀಗಾದರೆ ಸರಕಾರವಿದ್ದು ಏನು ಪ್ರಯೋಜನ? ಈ ಪೋಲೀಸ್ ಈ ಸೈನ್ಯ, ಎಲ್ಲ ಏತಕ್ಕೆ? ಬ್ಲೇಕ್ ಮಾರ್ಕೇಟ್ ನಿಲ್ಲಿಸಲಾಗದ ಈ ಬ್ರಿಟಿಷರಿಗೆ ಹಿಟ್ಲರನನ್ನು ಕೊಲ್ಲಿಸಲು ಸಾಧ್ಯವಾದೀತೇ?"

"ಮನಸ್ಸಿದ್ದರೆ ಮಾರ್ಗವಿದೆ. ಅವರಿಗೆ ಮನಸ್ಸು ಇಲ್ಲವಲ್ಲ ನಮ್ಮ ಜನರ ಮೇಲೆ. ತೈಮೂರ್ ಬೇಕು. ಈ ಸರ್ಕಾರ ಬೇಡ. ಯಾರಿಗೆ ಯಾರ ಮೇಲೆ ಕರುಣೆ? ಸುಂಕದವನಿಗೆ ಸುಖದುಃಖವೇನುಗೊತ್ತು? ಯಾರು ಸತ್ತರೆ ಯಾರಿಗೆ ದುಃಖ? ಬಂಗಾಲದಲ್ಲಿ ೩೦ ಲಕ್ಷ ಜನ ಹೊಟ್ಟೆಗಿಲ್ಲದೆ ಸತ್ತರು! ನಮ್ಮ ದೇಶದ ಎಲ್ಲ ಜನ ಸತ್ತರೂ ಅವರು ಪಿಟಿಕ್ ಎನ್ನಲಿಕ್ಕಿಲ್ಲ. "ನಾವೇ ಸಾಯುತಿದ್ದೇವೆ" ಎನ್ನುತಿದ್ದರೆ ಅವರು, "ನಮಗೇ ಕೊಡಿ ಮುಡಿ ಮುಡಿ ಅಕ್ಕಿ ಕೊಡಿ. ರೊಕ್ಕ ಕೊಡಿ. ನಿಮ್ಮ ಮಕ್ಕಳನ್ನು ಕೊಡಿ" ಎಂದು ಕೇಳುತ್ತಾರೆ. ಅವರಿಗೆ ಅಷ್ಟು ಸಿಕ್ಕರಾಯ್ತು. ಅಷ್ಟನ್ನು ಯಾರು ಕೊಟ್ಟರೂ ಅವರಿಗೆ ಆನಂದ. ಅಷ್ಟನ್ನು ಕೊಟ್ಟು ಯಾರು ಏನು ಮಾಡಿದರೂ ನಡೆಯುತ್ತದೆ. ಎಲ್ಲ ಲಂಚದ ಮಹಿಮೆ. ಇದು ಲಂಚ ಪ್ರಪಂಚ. ಲಂಚ ಕೊಟ್ಟರೆ ಹಗಲಿಗೆ ಲೋರಿ ಲೋರಿ ಅಕ್ಕಿ ಸಕ್ಕರೆ ಸಿಮೆಂಟ್ ಬಂದು ಬೀಳುತ್ತದೆ ಬ್ಲೇಕ್ ಮಾರ್ಕೇಟಿಗೆ. ಬ್ಲೇಕ್ ಮಾರ್ಕೇಟ್ ಮಾಡಿ ಮಾಡಿ ಮಾಡಿ ಜಮೀನ್ದಾರರೂ ವ್ಯಾಪಾರಿಗಳೂ ಧನ್ಯ ಧನ್ಯರಾಗಿ ಹೋದರು. ಅವರ ಮೋಟಾರ್

ಕಾರುಗಳೇನು ? ಅವನ ಹೆಂಡತಿ ಮಕ್ಕಳ ಮೈಮೇಲಿನ ಆಭರಣಗಳೇನು ? ಉಪ್ಪರಿಗೆ ಮನೆಗಳೇನು ? ಏರಿದರು ! ಮೋಕ್ಷಕ್ಕೇ, ಗಗನಕ್ಕೇ ಏರಿದರು.''

"ಹೌದು. ಗಗನಕ್ಕೇ ಏರಿದರು. ಹದ್ದುಗಳ ಹಾಗೆ. ಆದರೆ ರಣ ಹದ್ದುಗಳು ಎಷ್ಟು ಮೇಲಕ್ಕೇರಿದ್ದರೂ ಅವುಗಳ ದೃಷ್ಟಿ ನೆಲದಲ್ಲಿ ಸತ್ತು ಬಿದ್ದಿರುವ ಕಳೇಬರಗಳ ಕಡೆಗೇ. ಜನರ ಪ್ರೇಮಾದರ ಗಳಿಸಿ ಅವರು ಮೋಕ್ಷಕ್ಕೇರಿದರು ಎಂದೆನಬೇಡ ".

ಯಾರು ಕೇಳುತ್ತಾರೆ ನಿಮ್ಮ ಜನರನ್ನು ? ಜನರ ಪ್ರೀತಿ, ವಿಶ್ವಾಸ, ಪ್ರೇಮ, ಆದರ, ಸದಾಚಾರ ಇವೆಲ್ಲ ನಮ್ಮ ನಿಮ್ಮಂತವರ ಮಾತು. ಅವರಿಗೇನಿಲ್ಲ. ಅವರೆದೆ ಕಲ್ಲು. ಬ್ಲೇಕ್ ಮಾರ್ಕೇಟ್ ಮಾಡಿ, ಮಾಡಿ ಮಾಡಿ, ಹಣತಿಂದು, ಹಣತಿಂದು, ತಿಂದು ತಿಂದು ತಿಂದು ರಕುತ ತುಂಬಿ ತುಂಬಿ, ಅದು ಹರಿಯಲು ದಾರಿ ಕಾಣದೆ ಎದೆ ಕಲ್ಲಾಗಿದೆ. ಕಲ್ಲುಗಳಿಗೆ ತಲೆ ತಲೆ ಒಡೆದುಕೋಡು ಪ್ರಯೋಜನವಿಲ್ಲ.''

"ಹೀಗಾದರೆ ಏನು ಗತಿ ? ಯುದ್ದ ಮುಗಿದ ಮೇಲಾದರೂ ಸ್ವಲ್ಪ ಪರಿಸ್ಥಿತಿ ಸುಧಾರಿಸುತ್ತದೋ ಏನೋ ? ಸ್ವರಾಜ್ಯವಾದರೂ ಲಭಿಸುತಿದ್ದರೆ ಗಾಂಧಿ ಏನಾದರೂ ಮಾಡುತಿದ್ದ ! ಬಡವರಿಗೆ ಬರ್ಕತಿಲ್ಲ ಹೀಗಾದರೆ ''.

" ಬಡವರಿಗೆ ಯಾವಾಗಲೂ ಬರ್ಕತಿಲ್ಲ. ಬಡವರ ಕೈವಾರಿ ಮಹಾತ್ಮರಂತೂ ಈಗ ಅಗಾಖಾನ್ ಅರಮನೆಯಲ್ಲಿದ್ದಾರೆ ! ಈಗಂತೂ ಸ್ವರಾಜ್ಯವಿಲ್ಲ. ಯುದ್ಧ ಮುಗಿವ ವರೆಗೂ ಸ್ವರಾಜ್ಯದ ಮಾತೆತ್ತಲು ಬ್ರಿಟಿಶರು ಬಿಡುವುದಿಲ್ಲ. ಯುದ್ಧ ಮುಗಿದ ಮೇಲಿನ ಮಾತು ? ಸ್ವರಾಜ್ಯ ಸಿಕ್ಕಿದ ಮೇಲಿನ ಮಾತು ? ಆಗ ರಾತ್ರಿ ಬೆಳಗಾಗುವುದರೊಳಗೆ ಇಂದಿನ ಈ ಹೊಲಸು ಹೋಗುತ್ತದೆಂದು ಮಾಡಿದಿರಾ ? ಯುದ್ಧಕಾಲದಲ್ಲಿ ಬ್ಲೇಕ್ ಮಾರ್ಕೇಟ್ ಮಾಡಿ ರುಚಿ ಸಿಕ್ಕಿದೆ ಅನೇಕರಿಗೆ ಹುಲಿಗೆ ನರ ಮಾಂಸದ ರುಚಿ ದೊರೆತ ಹಾಗೆ. ಒಮ್ಮೆ ನರಭಕ್ಷಕನಾದ ಹುಲಿ ಮತ್ತೆ ದನಕರುಗಳನ್ನೂ ಮುಟ್ಟುವುದಿಲ್ಲ. ಮನುಷ್ಯನನ್ನು ಕಂಡಲ್ಲಿ ಹಾರುತ್ತದೆ ಅವನ ಮೈ ಮೇಲೆ. ಗಾಂಧಿಯುವರ ರಕುತ ಹೀರಲೂ ಇವರು ಹೇಸುವವರಲ್ಲ. ಅವರ ಪುಣ್ಯ ಪ್ರಭಾವದಿಂದ ಎಲ್ಲಾದರೂ ನಮಗೆ ಸ್ವರಾಜ್ಯ ದೊರೆತು ಗಾಂಧೀ ರಾಜ್ಯ ಬಂದರೆ, ಅದನ್ನು ತಳಬುಡ ಮೇಲೆ ಕೆಳಗೆ ಮಾಡದೆ ಬಿಡ

ಲಾರರು. ಇವನನ್ನು ಮರ್ದನ ಮಾಡಲಿಕ್ಕೆ ಬೇಕು ಗದಿಗೆ ಶಾಸ್ತ್ರ! ಬೇಕು ಹಿಟ್ಲರ್! ಹಿಟ್ಲರನ ರಾಜ್ಯದಲ್ಲಿ ಇಂಥವರು ಇರುತಿದ್ದರೆ ದೇಶ ದ್ರೋಹಿಗಳು, ಕೊಲೆ ಪಾತಕಿಗಳೆಂದು ತಿಳಿದು ಸಾಲಾಗಿ ನಿಲ್ಲಿಸಿ ಢಂ, ಢಂ, ಢಂ ಗುಂಡು ಹಾರಿಸುತಿದ್ದ."

ರಾಜಾ ಅವುಡುಗಚ್ಚಿ "ಢಂ, ಢಂ, ಢಂ" ಎಂದಾಗ ಗೋವಿಂದ ರಾಯರ ಎದೆ ಗುಂಡಿಗೆಯ ರಕುತವೂ ಢಂ, ಢಂ ಹಾರಲಾರಂಭಿಸಿತು. "ಮಾರಾಯ, ನೀನು ಇದೇ ರೀತಿ ಮುಗಳೂರು ಪೇಟೆಯಲ್ಲಿ ಮಾತನಾಡಿ ದರೆ ನಿನ್ನನ್ನು ಜೈಲಿಗೆ ಕೊಂಡು ಹೋದಾರು. ಸ್ವಲ್ಪ ಮೆಲ್ಲಗೆ ಮಾತನಾಡು" ಎಂದು ಸಮಾಧಾನ ಪಡಿಸಲೆತ್ನಿಸಿದರು.

"ಹೋ, ಒಯ್ಯಲಿ. ಹರಿ ಹೇಗೂ ಹೋಗಿದ್ದಾನೆ. ನನಗೇನು? ತಮ್ಮ ನೊಡನೆ ಅಣ್ಣ. ಅಣ್ಣತಮ್ಮ ಇಬ್ಬರನ್ನು ದೇಶಕ್ಕೆ ಕೊಟ್ಟಂತಾಗುತ್ತದೆ. ಇಲ್ಲಿ ಇರುವುದಕ್ಕಿಂತ ಜೈಲೇ ಪರಮಗುಣ. ಇಲ್ಲಿ ನಾನು ಇದ್ದು ಏನು ಪ್ರಯೋಜನವಾಗಿದೆ? ಯುದ್ಧ ಸುರು ಆದ ಮೇಲೆ ಒಂದು ಹೊಸ ಗದ್ದೆ ಯನ್ನು ಮಾಡಿಸಿಲ್ಲ. ಒಂದು ಹೊಸ ತೋಟ ನೆಟ್ಟಿಲ್ಲ. ಮೊದಲು ಮಾಡಿದ್ದೇ ನಾಲ್ಕಾರು ಎಕರೆ. ಅದರಲ್ಲಿ ದೊರೆತುದನ್ನು ಅದಕ್ಕೇ ಸುರಿದು ಊರ್ಜಿತ ಮಾಡೋಣವೆಂದರೆ, ಅಕ್ಕಿ ಹೊಟ್ಟೆ ತಿಂದಿತು. ತೋಟದಲ್ಲಿ ಇನ್ನೂ ಫಸಲು ಬಂದಿಲ್ಲ. ಹಟ್ಟಿಯ ಹಿಂಬದಿ ಇರುವ ಹತ್ತು ಹದಿನೈದು ಎಕರೆ ಸ್ಥಳ ದಲ್ಲಿ ಯಾವಾಗ ಕೃಷಿ ಮಾಡಿಸಬೇಕು? ಅಲ್ಲಿದ್ದ ಕೊಪ್ಪರಿಗೆ ಅಗೆಯ ಬೇಕು! ಇಲ್ಲದಿದ್ದರೆ ಸಾಧ್ಯವಿಲ್ಲ. ಅಗೆದು ಬಿಡುತ್ತೇನೆ ಅದನ್ನು"

ಏನೋ ಕಷ್ಟದ ಸಿಟ್ಟಿನ ಆವೇಗದಲ್ಲಿ "ಕೊಪ್ಪರಿಗೆ ಅಗೆಯುತ್ತೇನೆ" ಎಂದು ನುಡಿದನೆಂದು ಗೋವಿಂದರಾಯರು ಭಾವಿಸಿದ್ದರು. ಆದರೆ ಮತ್ತೊಮ್ಮೆ ರಾಜ ಮನೆಗೆ ಬಂದಾಗ ಹತ್ತು ಹದಿನೇಳು ವರುಷದ ಮೋಹ ನನ್ನು ಕಳಿಸಿ ಆಳುಗಳನ್ನು ಕರೆಸಿದ. ಅವರೊಡಿಗೆ ಹಾರೆ ಪಿಕ್ಕಾಸ್ ಹಿಡಿದು ಕೊಂಡು ಅಣ್ಣತಮ್ಮ ತೆರಳಿದರು. ಎಲ್ಲಿಗೆ ಏನು ಎಂದವರು ಹೇಳಲಿಲ್ಲ. ಗೋವಿಂದರಾಯರು ಕೇಳಲಿಲ್ಲ. ಮೋರಿಸ್, ಅನಾನಾಸ್ ಗಿಡಗಳನ್ನು ತಂದು ದರಿಂದ ಎಲ್ಲಾದರೂ ಮಣ್ಣು ಅಗತೆ ಮಾಡಿಸಲು ತೆರಳಿರಬೇಕೆಂದು ಅವರ ಊಹೆ. ಈ ಮೊದಲು ಎಷ್ಟೋ ಸಲ, ಗಾಳಿ, ತೇಗು, ನಿಂಬೆ, ಕಿತ್ತಳೆ, ಮಾದಳ

ಗಿಡಗಳನ್ನು ತಂದಾಗ ತಾನೇ ತನಗೆ ಬೇಕಾದಲ್ಲಿ ರಾಜಾ ನೆಟ್ಟುದುದೂ ಇದೆ. ಆದುದರಿಂದ ಗೋವಿಂದರಾಯರು ತಮ್ಮ ಕೆಲಸದಲ್ಲೇ ಮಗ್ನರಾದರು. ತೋಟದಲ್ಲಿ ಬಿದ್ದ ತೆಂಗು ಕಂಗಿನ ಮಡಲುಗಳನ್ನು ಹೆಕ್ಕಿ ಒಂದೆಡೆ ರಾಶಿ ಒಟ್ಟುವ ಕೆಲಸ ಅವರದು. ರಾಜಾ ಬಂದುದರಿಂದ ಪಲ್ಯ ಹುಳಿ ಏನು ಮಾಡಲೆಂದು ಸೀತಮ್ಮನವರು ತರಕಾರಿ ದರಗಳಲ್ಲಿ ಅತ್ತಿತ್ತ ಸುಳಿಯುತಿದ್ದರು. ಬಾಳೆ ಗಿಡದ ಗೊನೆಯ ತುದಿಯಲ್ಲಿದ್ದ ಪೂಂಬೆಯನ್ನು ತಂದು ಅವನ್ನಾದರೂ ಬಜ್ಜಿ ಮಾಡೋಣವೆಂದು ತೋಟದೊಳಗೂ ಪ್ರವೇಶಿಸಿದರು. ಅಷ್ಟರಲ್ಲಿ "ಅಪ್ಪಯ್ಯ, ಹಾವು! ಹಾವು! ಹಾವು!" ಎಂದು ಮೋಹನ ಕೂಗುವುದು ಕೇಳಿಸಿತು.

"ಹಾರೆ ಪಿಕ್ಕಾಸು ಅಲ್ಲೇ ಬಿಡಿ. ಮನೆಗೆ ಓಡಿ. ಮನೆಗೆ ಬೇಗ ಓಡಿ" ಎಂದು ರಾಜಾ ಒದರಿದ.

"ಅನರ್ಥ ಆಯಿತೇ. ಹ, ಅನರ್ಥ ಆಯಿತು" ಎಂದು ಗೋವಿಂದ ರಾಯರು ಹೆಂಡತಿಗೆ ಕೇಳಿಸುವಂತೆ ನುಡಿದು ತೋಟದಿಂದ ಅಂಗಳದ ಕಡೆ ಓಡಿದರು.

"ಏನು ಏನು?" ಎಂದು ಏನೂ ತಿಳಿಯದವರಂತೆ, ಏನೋ ಅಸ್ಪಷ್ಟ ದುಃಖದಿಂದ ಸೀತಮ್ಮನವರೂ ಅಂಗಳಕ್ಕೆ ಬಂದರು.

"ಹಾವು! ನಾಗರ ಹಾವು! ದೊಡ್ಡದು. ಹೆಡೆ ಬಿಡಿಸಿ ಓಡಿಸಿಕೊಂಡು ಬಂತು" ಎಂದು ಮೋಹನ ಹೇಳುತ್ತಲೇ ಅಂಗಳಕ್ಕೆ ಹಾರುತ್ತ ಬಂದ. ಅವನ ಬೆನ್ನ ಹಿಂದೆ, ರಾಜಾ ಬೋರ, ತುಕ್ರ ಅಹ್ಮದರು ಓಡಿ ಬಂದರು. ಅವರೊಬ್ಬರೂ ಚಕಾರ ಶಬ್ದ ತೆಗೆಯಲಿಲ್ಲ.

"ಹಾವು ಯಾಕೆ ಓಡಿಸಿಕೊಂಡು ಬಂತು? ಎಲ್ಲಿದೆ? ಏನು ಕೊಪ್ಪರಿಗೆ ಅಗೆಯಲು ಹೋಗಿದ್ದಿರಾ?" ಎಂದು ಗೋವಿಂದರಾಯರು ಕೇಳಿದರು.

ಅವರೊಬ್ಬರೂ ಉತ್ತರ ಕೊಡಲಿಲ್ಲ. "ಹೌದಪ್ಪಯ್ಯ. ಅಗೆಯಲಿಕ್ಕೆ ಹೋಗಿದ್ದೆವು. ಹಾರೆ ಪಿಕ್ಕಾಸಿನಿಂದ ಮಣ್ಣು ಅಗೆದು ನಾಗನ ಕಲ್ಲು ಸರಿಸಿದಾಗ ಬಿಲದಿಂದ ದೊಡ್ಡ ಸರ್ಪ ಬುಸುಗುಟ್ಟುತ್ತಾ ಬಂತು. ಅಣ್ಣ ಮೇಲಿನ ದರೆಯಿಂದ ಕೆಳಗೆ ಹಾರಿದ. ಇಲ್ಲದಿದ್ದರೆ ಹೊಡೆದು ಬಿಡುತಿತ್ತು" ಎಂದು ಶ್ವಾಸಬಿಡುತ್ತ ಹೇಳಿದ.

ಸೀತಮ್ಮನವರ ಕಾಲುಗಳು ಕುಸಿದುವು.

"ಆಯ್ತು. ಆಯ್ತು. ನಾನು ಸತ್ತು ಹೋಗಿದ್ದೆನಾ? ನನ್ನ ಹತ್ತಿರ ಒಂದು ಮಾತು ಕೇಳಬಹುದಿತ್ತಲ್ಲಾ? ಈಗ ಸ್ವಲ್ಪ ಹೆಚ್ಚು ಕಡಿಮೆಯಾಗುತ್ತಿದ್ದರೆ ಅನರ್ಥವೇ ಆಗುತ್ತಿತ್ತು. ನಮ್ಮ ಮಣ್ಣಿನಲ್ಲಿ ಕೊಪ್ಪರಿಗೆಯಿದ್ದರೆ ಎಲ್ಲಿ ಹೋಗುತ್ತದೆ? ಈಗಲ್ಲದಿದ್ದರೆ ಮತ್ತೆ ಸಿಗಬಹುದು. ನಿನಗಲ್ಲದಿದ್ದರೆ ನಿನ್ನ ಮಗನಿಗೆ ದೊರೆತೀತು. ಅದು ಸಿಗುವುದೂ ಬಿಡುವುದೂ ಅವರವರ ದಶನಾದಿ ಫಲ. ಅಗೆದರೆ ಮಾತ್ರ ಸಿಗುತ್ತವಾ? ಭೋಗವಿಲ್ಲದವರು ಅಗೆದರೆ ಬಂಗಾರವೆಲ್ಲ ಮಸಿ ತುಂಡುಗಳಂತೆ ಕಾಣುತ್ತವೆ ಕಣ್ಣಿಗೆ. ಅಗೆಸುವುದಾದರೂ ಅದಕ್ಕೆ ನಾಗದರ್ಶನದ ಕ್ರಮವಿದೆ. ನಾಗಮಂಡಲ ಮಾಡಿಸುವ ಹರಕೆ ಹೊರಬೇಕು. ಅಂಜನ ಹಾಕಿ ನೋಡಬೇಕು ಎಲ್ಲಿದೆಯೆಂದು! ಅವುಗಳನ್ನೆಲ್ಲ ಬಿಟ್ಟು ಏಕಾಏಕಿ ಹೋಗಿ ಅಗೆದರೆ ಹಾವು ಬಾರದೆ ಇದ್ದೀತಾ?"

ಗೋವಿಂದರಾಯರು ಮಾತು ಮುಗಿಸಿರಲಿಲ್ಲ. ಅಷ್ಟರಲ್ಲಿ "ಅಪ್ಪಯ್ಯ ಹಾವು! ಅಂಗಳಕ್ಕೆ ಬಂತು. ಮುಖಮಂಟಪಕ್ಕೆ ಬನ್ನಿ" ಎಂದ ರಾಜ. ಮೋಹನ, ತುಕ್ರ, ಬೋರ, ಅಹ್ಮದ ಬ್ಯಾರಿ, ರಾಜ ಎಲ್ಲರೂ ಮುಖಮಂಟಪಕ್ಕೆ ತೆರಳಿದರು. ಸೀತಮ್ಮನವರು ಮೆಟ್ಟಲು ಹತ್ತಿ ಮುಖಮಂಟಪಕ್ಕೆ ಬಂದು ನಾಲಿಗೆ ಬಾರದೆ, ಅಳಲೂ ಗೊತ್ತಾಗದೆ ತಬ್ಬಿಬ್ಬಾಗಿ ತಲೆಗೆ ಕೈಯಿಟ್ಟುಕೊಂಡು ಅಂಗಳವನ್ನೇ ನೋಡತೊಡಗಿದರು.

ಕೇದಗೆ ಬಣ್ಣದ ಮಾರುದ್ದದ ನಾಗರ ಹಾವು ಅಂಗಳದಲ್ಲಿ ಕಾಣಿಸಿತು. ಒಮ್ಮೆ ಹರಿಯುತ್ತದೆ. ಒಮ್ಮೆ ನಿಂತು ಹೆಡೆಯುರಳಿಸಿ, ನಾಲಿಗೆ ಚಾಚಿ ಸುತ್ತಲೂ ನೋಡುತ್ತದೆ! "ಅದು ಮೇಲೆ ಬರಲಿ. ಅದನ್ನು ಇಂದು ಕೊಂದೇ ಸಿದ್ಧ." ಎಂದು ರಾಜಾ ಹೇಳುತ್ತ ಮನೆಯೊಳಗೆ ಉದ್ದದ ಬೆತ್ತ ಹುಡುಕಲಾರಂಭಿಸಿದ. "ಅಪ್ಪಯ್ಯ, ಮೇಲಕ್ಕೆ ಬನ್ನಿ" ಎಂದ ಮೋಹನ ಮೇಲಿಂದಲೇ. "ಅಯ್ಯಾ, ನಾಗರ ಹಾವಿಗೆ ವೈರ ಬಹಳ. ಬನ್ನಿ ಮೇಲಕ್ಕೆ!" ಎಂದ ಬೋರ. "ಅದು ಯಾರಿಗಾದರೂ ಕಚ್ಚಲಿ. ಅದನ್ನು ಇಡುವುದಿಲ್ಲ. ನಾನು ಮುಸಲ್ಮಾನ" ಎಂದ ಅಹ್ಮದ್ ಬ್ಯಾರಿ. ಸೀತಮ್ಮನವರು ಕೆಳ

ಗಿದ್ದು ಗೋವಿಂದರಾಯರ ಕೈ ಹಿಡಿದೆಳೆಯಲು ಯತ್ನಿಸಿದರು. ಅವರು ಕೈಕೊಸರಿಕೊಂಡು ನುಡಿದರು.

"ನೀನು ಬಿಡು. ಬಿಡು. ಅದು ಕಡಿಯಲಿ. ಅದು ಮುಖಮಂಟಪಕ್ಕೆ ಏರಲಿ. ಯಾರನ್ನು ಕಡಿಯುತ್ತದೆ ನೋಡುತ್ತೇನೆ. ಮಕ್ಕಳನ್ನು ಕಡಿದರೆ ಮುಗಿಯಿತು? ನಾನು ಜೀವಂತ ಇದ್ದೇನಲ್ಲ. ಅದನ್ನು ಜೀವಂತ ಬಿಟ್ಟೇನು? ಅದನ್ನು ಬಿಡು, ಅದರ ಸಂತಾನವೊಂದನ್ನೂ ಉಳಿಸುವುದಿಲ್ಲ. ಮಲಬಾರಿನಿಂದ ಮಾಪಿಳ್ಳೆಯವರನ್ನು ಕರೆಸಿ, ಬನವೆಲ್ಲ ಅಗೆಸಿ, ಹಾವುಗಳ ಮೊಟ್ಟೆ ಮರಿಗಳನ್ನೂ ನಿರ್ನಾಮಮಾಡಿ, ಬೈಹುಲ್ಲು ಹಾಕಿ ಸುಡಿಸಿ, ಆ ಬನದಲ್ಲೇ ಅವುಗಳ ಎಲುಬುಗಳನ್ನು ಹುಗಿಯಲುಂಟು ನಾನು. ಇಷ್ಟರ ವರೆಗೆ ಸರ್ಪವನ್ನು ಪೂಜಿಸುತ್ತ ಬಂದಿದ್ದೇನೆ. ದೇವರ ಪೆಟ್ಟಿಗೆಯಲ್ಲಿ ಸುಬ್ರಹ್ಮಣ್ಯ ಇದ್ದಾನೆ. ದಿನಂಪ್ರತಿ ನಾನು ಹಾಲೆರೆಯುತ್ತಿದ್ದೇನೆ. ನಾಗರ ಪಂಚಮಿ ದಿನ ಬನಕ್ಕೂ ಎರೆದದ್ದುಂಟು. ಈ ಹಾವು ಹಾರಾಡಲಿ. ಆ ಪ್ರತಿಮೆಗಳನ್ನು ಬಾವಿಗೆ ಹಾಕಿ, ಆ ಬನದ ನಾಗಕಲ್ಲುಗಳನ್ನು ನೇತ್ರಾವತಿಗೆ ಬಿಸಾಡುತ್ತೇನೆ. ನೋಡೋಣ. ಅದು ಮುಖಮಂಟಪ ಹತ್ತಲಿ."

ಮುಖಮಂಟಪದ ಕಡೆ ತಲೆಯೆಟ್ಟು ತೆರಳುತ್ತಿದ್ದ ನಾಗರ ಹಾವು ನಿಂತಿತು. ಅಂಗಳದ ಮಧ್ಯೆ ಹಾಗೆಯೇ ಹೆಡೆಯರಳಿಸುತ್ತ ನಿಂತಿತು. ಅತ್ತಿತ್ತ ಕದಲಲಿಲ್ಲ. ಅದರ ಬಾಲ ಮಾತ ಅತ್ತಿತ್ತ ಹಂದಾಡುತ್ತಿತ್ತು.

ಗೋವಿಂದರಾಯರು ಧನಿ ಇಳಿಸಿ ಮನುಷ್ಯರೊಡನೆ ಮಾತನಾಡುವವನಂತೆ ಆ ಹಾವನ್ನುದ್ದೇಶಿಸಿ ಹೇಳಿದರು.

"ಮನುಷ್ಯರ ಜೀವಕ್ಕೆ ಹೆದರಿ ಅವರು ನಿನಗೆ ಹಾಲೆರೆಯುತ್ತಾರೆ? ಹೊಡೆದು ಕೊಂದು ಬಿಡುತ್ತಾರೆ. ಮಕ್ಕಳು ಮರಿ ಕೊಟ್ಟು ನೀನು ಏನಾದರೂ ಉಪಕಾರ ಮಾಡಿದರೆ ನಾಗಕಲ್ಲು ಮಾಡಿಸಿ, ಕೊಪ್ಪರಿಗೆ ಕೊಟ್ಟು ಜನರಿಗೆ ನೆರವಾದರೆ ನಾಗಮಂಡಲ ಬರೆಸಿ, ನಲಿದು ನಿನ್ನನ್ನು ಸ್ತುತಿಸುತ್ತಾರೆ. ನೀನು ಇಷ್ಟು ಭೋಗಿಯಾದುದು ಏತಕ್ಕೆ? ನಿಧಿಯಿದ್ದಲ್ಲಿ ಕುಳಿತು ಜೀನಸಂತೆ ಕಾಯುತ್ತೀ ಎಂದು ಹೇಳುತ್ತಾರೆ ಹಿರಿಯರು. ಅದು ಹೌದೇ? ಹೌದಾದರೆ ಬಡಜನರಿಗೆ ಹಣದ ಮೇಲೆ ಆಶೆಯುಂಟಾಗುವುದು ಸಹಜವೇ. ಕೊಪ್ಪರಿಗೆ ದೊರೆತರೆ ತಮ್ಮ ಕಷ್ಟಗಳೆಲ್ಲ ಪರಿಹಾರವಾಗುವುವು ಎಂದು ಅವರು ನಂಬಿ

ಅಗೆಸಲು ಬಯಸುತ್ತಾರೆ. ಹೋಗ್ತು ನಿನಗೆ ಅಪಾಯ ಮಾಡಬೇಕು
ನಿನ್ನನ್ನು ಕೊಲಬೇಕು ಎಂಬ ಇರಾದೆ ಅವರಿಗಿರುವುದಿಲ್ಲ. ಕೊಪ್ಪರಿಗೆ
ಬಿಟ್ಟು ಕೊಡಲು ನಿನಗೆ ಇಷ್ಟವಿಲ್ಲದಿದ್ದರೆ ಬುಸ್ ಬುಸ್ ಬೆದರಿಸಿ ಬಿಡು.
ಮನುಷ್ಯರ ಅಸುವನ್ನೇ ಉಗಿವಷ್ಟು ಕೋಪವೇಕೆ ನಿನಗೆ? ದೇವರಿಗೆ
ಕೋಪವಿಲ್ಲವಂತೆ. ಅವನು ದಯಾ ಸಮುದ್ರನಂತೆ. ಅವನೇ ವಿಷ ಕುಡಿದು
ಗರಳ ಕಂಠನಾದ. ಅವನ ಕಂಠದಲ್ಲಿ ನಿನ್ನನ್ನು ಸುತ್ತಿ ಕೊಂಡಿದ್ದಾನಂತೆ.
ಅವನಂತೆ ನಿನಗೆ ಕಂಠದಲ್ಲಿ ಗರಳವಿಲ್ಲದಿದ್ದರೂ ವಿಷ ಕೋರೆ ಹಲ್ಲುಗಳಲ್ಲುಂಟು
ಕೊರಳಿಗೆ ಬಂದವರು ಅವನ ಕೊರಳಿಗೆ ಬಿದ್ದು ನನು ನೀರಲ್ಲಿ ಮುಳುಗಿ
ಸುಪ್ರವಿಲ್ಲ. ಅವನ ಕೊರಳಲ್ಲಿ ಇರುವ ನೀನು ಕೆರಳು ಕೊಬ್ಬುತ್ತೀಯಲ್ಲ!
ನೀನು ದೇವರಾ? ದೇವರಾಗಿದ್ದರೆ ಕಲಿ ಕಾಲದಲ್ಲಿ ನಿನಗೂ ಕೆಟ್ಟ ಬುದ್ಧಿ
ಬಂದಿತು. ಬಿಡು. ಕಲಿಕಾಲದಲ್ಲಿ ನೀನು ಜನಕ್ಕೆ ಕೇಡುಕು ಮಾಡಿದರೆ
ನಿನ್ನನ್ನೂ ಅವರು ಬಿಡಲಿಕ್ಕಿಲ್ಲ. ಉಪಕಾರ ಮಾಡಿದವರಿಗೇ ಅಪಕಾರ
ಮಾಡುತ್ತಾರೆ! ಕೋಪಾಕಾರ, ರೌದ್ರಾವತಾರ ತಾಳಿದವರನ್ನು ಬಿಟ್ಟಾರೇನು?
ಬಿಡಲಿಕ್ಕಿಲ್ಲ. ಆದುದರಿಂದ ನೀನು ಗಪ್ ಚಿಪ್ ಬಂದ ದಾರಿಗೆ ಸುಂಕವಿಲ್ಲ
ವೆಂದು ತೆರಳಿ ಬಿಡು. ನಿನಗೆ ಇನ್ನು ಮುಂದೆ ಯಾರೂ ಏನೂ ಮಾಡುವು
ದಿಲ್ಲ. ನಡಿ'' ಎಂದು ಕೈಯಲ್ಲಿ ತೆರಳಲು ಸಂಜ್ಞೆ ಮಾಡಿದರು.

ಹಾವು ಹೆಡೆ ಮಡಚಿ ಹೊರಳಿ ಹೊರಟಿತು. "ಪ್ರೋ. ಪ್ರೋ. ಇನ್ನು
ಬರಬೇಡ. ತೆಂಗಿನ ಮರದಲ್ಲಿ ನಿಂಯ್ಯಾಳ ಆಗಲಿ. ನಿನಗೆ ನೋಡಲು ಎರೆ
ಯುತ್ತೇನೆ'' ಎಂದು ಗೋಪೀಪರಾಯರು ಅದರ ಬೆನ್ನ ಹಿಂದೆಯೇ ಹೊರ
ಟರು. ಅಂಗಳದ ಅಂಚಿನ ವರೆಗೆ ಅದು ಹರಿದುದು ತೋರಿತು ಅವರಿಗೆ.
ಮತ್ತೆ ಕಾಣಿಸಲಿಲ್ಲ. "ಎಲ್ಲಾದರೂ ಬಿಲ ಸೇರಿರಬೇಕು. ಮತ್ತೆ ಬಂದು
ಏನಾದರೂ ಗದ್ದಲ ಎಬ್ಬಿಸೀತು. ಹಾವಿನ ಹಗೆತನ ಬಹಳ ವರುಷಗಳ
ವರೆಗೆ ಇರುತ್ತದೆ'' ಎಂದು ಬೋರ ನುಡಿದ. ತುಕ್ರ ಅದಕ್ಕೊಂದು ಉದಾ
ಹರಣೆ ಕೊಟ್ಟ. 'ಅದ್ ಬರ್ಲಿ. ಆನ್ ಅದರ ಮುಂದೆ ಒಡೆಯದಿದ್ದರೆ ಆನ್
ಬ್ಯಾರಿಗಳ ಕುಟ್ಟಿ ಅಲ್ಲ'' ಎಂದು ಅಹ್ಮದ್ ಬ್ಯಾರಿ ಹಾರಿಸಿದ. ಮಾತಿನಲ್ಲೇ
ಸ್ವಲ್ಪ ಕಾಲ-ಕಳೆದ ಮೇಲೆ ಅವರು ಹೊರಟು ಹೋದರು. ರಾತ್ರಿ ರಾಜ
ನನ್ನು ಮನೆಯಲ್ಲಿಟ್ಟುಕೊಳ್ಳಲು ಅವರಿಗೂ ಧೈರ್ಯವಾಗಲಿಲ್ಲ. ಆದುದರಿಂದ

ಬೇಗ ಊಟ ತೀರಿಸಿ ಅವನನ್ನು ಮುಂಡಾಜೆಗೆ ಕಳಿಸಿಕೊಡಬೇಕೆಂದೂ ನಿರ್ಧರಿಸಿದರು. ಅವನು ಹೊರಟಾಗ ಅವನ ಬೆನ್ನ ಹಿಂದೆಯೇ ಮಾತನಾಡುತ್ತಾ ಗೋವಿಂದರಾಯರು ಬಂದರು. ಯಾವಾಗಲೂ ರಸ್ತೆ ಮುಟ್ಟಿಸುತ್ತಿದ್ದವರು ಇಂದು ಒಂದು ಮೈಲಿನ ವರೆಗೂ ನಡೆದರು. "ರಾಜಾ ಇಂದು ಆದದ್ದು ಆಗಿ ಹೋಯ್ತು. ಇನ್ನು ಮುಂದೆ ನಾನು ಜೀವಂತವಿರುವ ವರೆಗೆ ನನ್ನೊಡನೆ ಕೇಳದೆ ಯಾವ ಕೆಲಸಕ್ಕೂ ಮುಡುಕಬಾರದು" ಎಂದು ಸಾರಿ ಹೇಳಿದರು.

ಸಪ್ಪಗೆ ಮೋರೆ ಮಾಡಿಕೊಂಡಿದ್ದ ರಾಜಾ ಉತ್ತರ ಕೊಡದೆ ಸಮ್ಮತಿ ಸೂಚಕವಾಗಿ ತಲೆ ಅಲ್ಲಾಡಿಸಿದ.

ಸ್ವಲ್ಪ ಹೊತ್ತಿನ ಮೇಲೆ ಮತ್ತೆ ಗೋವಿಂದರಾಯರು ಕೇಳಿದರು. 'ಏನು ನಿನಗೆ ಹಣದ ಅನಾನುಕೂಲತೆ ಬಹಳವಾಗಿದೆಯಾ? ನನ್ನೊಡನೆ ಬಿಚ್ಚಿ ಹೇಳು. ಮುಚ್ಚು ಮರೆ ಮಾಡಬೇಡ. ಅಂಥಾ ಕಷ್ಟ ಏನು ಬಂದಿದೆ ಹೇಳು?"

"ಇಲ್ಲಿಯ ವರೆಗೆ ಬಂದಿದೆ" ಎಂದು ಉತ್ತರವಿತ್ತ ರಾಜಾ ತನ್ನ ಕುತ್ತಿಗೆ ತೋರಿಸಿದ.

"ಅಂದರೆ ಸಾಲ ಸೋಲ ಮಾಡಿದ್ದೀಯಾ?"

"ಆಗಿದೆ ಮತ್ತೆ ಹೇಗೆ ನಡೆಯಬೇಕು ಇದೆಲ್ಲ ಸನ್ಯಾಸಿ ಸಂಸಾರ?"

"ಸಾಲವಾಗಿದೆ" ಎಂಬ ರಹಸ್ಯವನ್ನು ರಾಜಾ ಒಡೆದಾಗ ಗೋವಿಂದರಾಯರ ಎದೆಯೊಡೆದಂತಾಯಿತು. ಸಾಲದಿಂದಲೇ ಅವರ ಹಿರಿಯರ ಆಸ್ತಿ ಮುಳುಗಿದುದೂ ಅವರ ಸ್ಮರಣೆಗೆ ಬಂದಿತು. ಮತ್ತೆ ಅದೇ ಗತಿ ಬಂದಿತಲ್ಲ ಎಂದು ಅವರು ತಲ್ಲಣಿಸಿದರು. ಅದನ್ನು ಪ್ರದರ್ಶಿಸದೆ, 'ಎಷ್ಟಾಗಿದೆ ಸಾಲ? ಬಹಳ ಆಗಿದೆಯಾ? " ಎಂದು ಪ್ರಶ್ನಿಸಿದರು.

"ಬಹಳವೇನಲ್ಲ. ಆದರೆ ಅವನ ಕಿಟಿ ಕಿಟಿ ಬಹಳವಾಗಿದೆ. ಏನು ಮಾಡಬೇಕೆಂದು ಗೊತ್ತಾಗುವುದಿಲ್ಲ. ಆಸ್ತಿ ಅಡವು ಹಾಕಿದರೆ ಹೇಗೆ? ಎಂಬ ವಿಚಾರ".

"ಯಾರ ಆಸ್ತಿ ನೀನು ಅಡವು ಹಾಕುತ್ತೀ? ಇದು ನಿನ್ನದೇನು? ಯಾರು ಮುಂಜಾನೆಯಿಂದ ಸಂಜೆಯ ವರೆಗೆ ದುಡಿದವರು? ಈ ಆಸ್ತಿಯಲ್ಲಿ ಇಷ್ಟು ವರುಷಗಳ ವರೆಗೆ ಯಾರು ಬೆವರು ಸುರಿಸಿದವರು? ಜ್ವರ

ನೀವು ಲೆಕ್ಕಿಸಲಿಲ್ಲ. ಸ್ವಾಸ್ಥ್ಯವೆಂದು ಕೈಕಾಲು ಬಿಟ್ಟುಕೊಂಡು ಹಾಸಿಗೆಯ ಮೇಲೆ ಮಲಗಲಿಲ್ಲ. ಗಾಳಿ, ಬಿಸಿಲು, ಮಳೆಗಳಿಗೆ ಮೈಯೊಡ್ಡಿ ದುಡಿದವರು ಯಾರು? ಇದು ನಿನ್ನ ಆಸ್ತಿಯಲ್ಲ. ಅಡವು ಹಾಕಲಿಕ್ಕೆ ನಿನಗೆ ಅಧಿಕಾರವೇನಿದೆ? ಮಾರಾಟ ಮಾಡಲೂ ನಿನಗೆ ಅಧಿಕಾರವಿಲ್ಲ. ಇನ್ನು ಸಾಯುವ ಕಾಲಕ್ಕೆ ಮನೆಯಿಲ್ಲದೆ ಮತ್ತೆ ಬೀದಿಗೆ ತೆರಳಿ ಬ್ರಹ್ಮರಥದ ಕೊಟ್ಟಿಗೆಯಲ್ಲಿ ನಾವಿಬ್ಬರೂ ಬಿದ್ದು ಸಾಯಬೇಕೆಂದು ಮಾಡಿದಿಯೋ?" ಎಂದು ರೇಗಿ ಹೇಳಿದರು ತಂದೆ.

ಮಗನ ಮೋರೆ ಮತ್ತೂ ಸಣ್ಣದಾಯಿತು.

ಮತ್ತೆ ನಾಲ್ಕು ಹೆಜ್ಜೆಯಿಟ್ಟ ಮೇಲೆ ನುಡಿದರು. "ರಾಜಾ, ಅಡವು ಅಥವಾ ಮಾರಾಟದ ಆದೊಂದು ಕೆಲಸಕ್ಕೆ ಕೈ ಹಾಕಬೇಡ. ಇಷ್ಟರ ವರೆಗೆ ಮಾಡಿದ್ದೆಲ್ಲ ಗುಡ್ಡಕ್ಕೆ ಮಣ್ಣು ಹೊತ್ತಂತಾಗುತ್ತದೆ. ಸಾಲಕ್ಕೆ ಏನಾದರೂ ಒಂದು ವಿಲೇವಾರಿ ಮಾಡೋಣ. ನೀನು ಇನ್ನೊಮ್ಮೆ ಯಾವಾಗ ಬರುತ್ತೀ?"

"ಸಂಬಳ ಆದ ಮೇಲೆ"

"ಸಂಬಳ ಆದ ಮೇಲೆ ಬಾ. ಸಾಲ ತೀರಿಸಲು ನಾನೊಂದು ಉಪಾಯ ಹೇಳುತ್ತೇನೆ" ಎಂದು ಆವನಿಗೆ ವಿಶ್ವಾಸದ ಆಶ್ವಾಸನ ಕೊಟ್ಟು ಮನೆಗೆ ಮರಳಿದರು. ಮುಖಮಂಟಪದಲ್ಲೇ ಕುಳಿತಿದ್ದರು ತಾಯಿ ಮತ್ತು ಕಿರಿಮಗ. ಗೋವಿಂದರಾಯರು ಮೆಟ್ಟಲು ಏರಿ ಬಂದುದನ್ನು ಕಂಡೊಡನೆಯೇ ಸೀತಮ್ಮನವರು ಸೆರಗಿನಿಂದ ಕಣ್ಣುಗಳನ್ನೊರಸಿಕೊಂಡರು. ಅದು ಕಣ್ಣಿಗೆ ಬಿದ್ದುದರಿಂದ, "ಯಾಕಳುತ್ತಿದ್ದೀ? ನಿನಗೇನಾಯಿತು ಈಗ?" ಎಂದು ಅವರು ಸಿಟ್ಟಾದರು.

"ನನಗೆ ಏನೂ ಆಗಲಿಲ್ಲ. ಮೊನ್ನೆ ಜ್ವರ ಬಂದಾಗ ನಾನು ಕಣ್ಮುಚ್ಚುತಿದ್ದರೆ ಒಳ್ಳೆಯದಾಗುತಿತ್ತು. ಇದನ್ನೆಲ್ಲ ನೋಡಲು ದೇವರು ಇನ್ನೂ ಇಟ್ಟಿದ್ದಾನೆ"

"ಆಯ್ತೇನೀಗ?"

"ಆಗುವುದೇನು? ಮೋಹನನೂ ಹೋಗುತ್ತಾನಂತೆ!"

ಎದೆಗೆ ಚೂರಿ ನೆಟ್ಟಂತಾಯಿತು ಗೋವಿಂದರಾಯರಿಗೆ. ಅವರು ತಬ್ಬಿಬ್ಬಾದರು. ಮೋಹನನ ಕಡೆ ಅವರ ದೃಷ್ಟಿ ಹರಿಯಿತು. ಮುಖ

ಮುಂಟಪದ ದಂಡೆಯ ಮೇಲೆ ಅವನು ಕುಳಿತಿದ್ದ. ಪೈರಾಸ್ ಮಾತ್ರ ಉಟ್ಟಿದ್ದುದರಿಂದ ಕೈ ಮೈ ಎಲ್ಲ ಕಾಣುತಿತ್ತು. ದುಂಡು ದುಂಡು ಕೈಕಾಲು. ಹತ್ತು ಹದಿನಾರು ವರುಷದ ಎಳೆಯ ಹುಡುಗ. ಎಳೆ ಬಾಳೆಯ ದಿಂಡಿನಂತಿದ್ದ. ಎತ್ತಲೋ ದೃಷ್ಟಿ. ಏನೋ ವಿಚಾರ. ಯಾವ ವಿಚಾರ ಮಾಡುತಿದ್ದಾನೆ ಈತ? ಅವನ ಕೆದರಿದ ತಲೆಗೂದಲಿನ, ತಲೆ ಬುರುಡೆಯೊಳಗಿನ ಮಿದುಳಲ್ಲಿ ಏನು ನಡೆಯುತ್ತದೆ? ಅವನ ಮೋರೆ ನಿಸ್ತೇಜವೇಕಾಗಿದೆ? ಈ ಪ್ರಶ್ನೆಗಳು ಗೋವಿಂದರಾಯರ ತಲೆಯಲ್ಲಿ ಮಳೆಗಾಲದ ಮಿಂಚುಗಳಂತೆ ಮಿಂಚಿದುವು. ಹೆಂಡತಿಯ ಕಡೆ ನೋಡಿ, "ಎಲ್ಲಿ ಹೋಗುತ್ತಾನಂತೆ?" ಎಂದು ಕೇಳಿದರು.

"ಎಲ್ಲಾದರೂ. ಅವನಿಗೆ ಇಲ್ಲಿ ಈ ಮನೆಯಲ್ಲಿರಲು ಭಯವಾಗುತ್ತದೆಯಂತೆ."

"ಇಷ್ಟೇ ಏನು? ಅವನೊಬ್ಬನೇ ಇದ್ದಾನಾ ಈ ಮನೆಯಲ್ಲಿ? ನಾವಿದ್ದೇವಲ್ಲ. ನಾವಿರುವ ವರೆಗೆ ಭೀತಿ ಯಾತರದು?'' ಎಂದು ನುಡಿದು, "ಹೌದೋ ನಿನಗೆ ಅಷ್ಟು ಹೆದರಿಕೆಯೇನು? ಈಗ ದೊಡ್ಡವನಾಗಿದ್ದಿ?" ಎಂದು ಮಗನನ್ನುದ್ದೇಶಿಸಿ ಮಾತನಾಡಿದರು.

"ಇಲ್ಲ. ನಾನಿರುವುದಿಲ್ಲ."

"ಯಾಕೆ ಇರುವುದಿಲ್ಲ?''

"ಯಾಕೆ ಇರಬೇಕು? ಈ ಜ್ವರ, ಈ ಹಾವುಗಳ ಕಾಟ, ಈ ಬಡತನದ ಕಷ್ಟ ಯಾರಿಗೆ ಬೇಕು? ಯಾರ ಮನೆಯಲ್ಲಿ ಯಾಕೆ ಇರಬೇಕು? ಯಾರ ಯಾರ ಮನೆಯಲ್ಲಿ ಯಾರು ಯಾರು ಇರಬೇಕು? ನಿಮಗಾದರೆ ಬಿಟ್ಟಿದ್ದಲ್ಲ. ನನಗೇನು? ನಾನು ಯಾಕಿರಬೇಕು? ಅದಕ್ಕೇ ನಾನು ಹೊರಡುತ್ತೇನೆ''

ಮೋಹನನ ಒಂದೊಂದು ಮಾತು ಒಂದೊಂದು ಬಾಣದಂತೆ ಗೋವಿಂದರಾಯರ ಮೈ ಮನಸ್ಸುಗಳಿಗೆ ನೆಟ್ಟಿತು. ಒಂದೊಂದನ್ನೇ ಕಿತ್ತು ತಡವರಿಸಿಕೊಳ್ಳುವವರಂತೆ ಅವರು ಸಮಾಧಾನದಿಂದಲೇ ನುಡಿಸಿದರು.

"ನೀನು ಎಲ್ಲಿಗೆ ಹೋಗುತ್ತಿ?''

"ಎಲ್ಲಾದರೂ"

"ಎಲ್ಲಾದರೂ ಅಂದರೆ? 'ಎಲ್ಲಾದರೂ' ಎಂದು ಹರಿ ಹೇಳಿದ್ದರೆ ಅದ ಕ್ಕೊಂದು ಅರ್ಥವಿತ್ತು. ಹರಿಯಂತೆ ನೀನು ನಾಲ್ಕಕ್ಷರ ಕಲಿತಿಲ್ಲವಲ್ಲ.''

ಅವರ ಮಾತು ಪೂರ್ಣ ಮುಗಿಯುವುದರೊಳಗೇ ಮೋಹನ ನಿಲ್ಲಿಸಿ ನುಡಿದ. "ನೀವು ನನಗೆ ಕಲಿಸಲಿಲ್ಲವಲ್ಲ. ಶಾಲೆಗೆ ಕಳಿಸುತಿದ್ದರೆ ನಾನೂ ಕಲಿ ಯುತಿದ್ದೆ. ನನ್ನನ್ನು ಈ ಕಾಡಿಗೆ ಕರೆದುಕೊಂಡು ಬಂದು ಗೊಬ್ಬರ ಹೊರಲು ಹಚ್ಚಿದಿರಿ."

ಗೋವಿಂದರಾಯರು ತಲೆಗೆ ಕೈಯಿಟ್ಟುಕೊಂಡು, "ಹೌದು ನನ್ನ ತಪ್ಪಾಯ್ತು." ಎಂದು ಬಿಸುಸುಯ್ದರು.

ಮೋಹನ ಮಾತಿಗೆ ಮಾತು ಪೋಣಿಸಿದ. "ಅವರೆಲ್ಲ ನಿಮ್ಮ ಮಕ್ಕಳು! ನಾನು ನಿಮ್ಮ ಮಗನಾ? ಎಲ್ಲೋ ದಾರಿಯಲ್ಲಿ ಬಿದ್ದಿದ್ದವರಬೇಕು ನಾನು. ಎತ್ತಿ ಕೊಂಡು ಬಂದಿರಿ ಸಕಾಲಕ್ಕೆ. ಅದಕ್ಕೇ ನನಗೆ ಈ ಗತಿ ಬಂತು. ಅತ್ತ ವಿದ್ಯೆಯೂ ಇಲ್ಲ. ಇತ್ತ ಗದ್ದೆಯೂ ಇಲ್ಲ. ತ್ರಿಶಂಕು ಸ್ವರ್ಗ. ಕೈಯಲ್ಲಿ ಒಂದು ಗೆರಟೆ ಕೋಲು ಹಿಡಿದರೆ ಸರಿ ಇನ್ನು. ಅಲ್ಲಿಗೇ ಬಂದಿದೆ. ಸಾಬೂ ನಿಗೊಂದು ಮುಕ್ಕಾಲು ಬೇಕಾದರೆ ನಿಮ್ಮ ಹತ್ತಿರ ಬೇಡ ಬೇಕು ನಾನು"

"ಇಷ್ಟು ಮಾತನಾಡಿದವ ಅಪ್ಪಯ್ಯನಿಗೆ ನಾಲ್ಕು ಹೊಡೆದು ಬಿಡು ಅಂದರೆ ಹುಟ್ಟಿಸಿದ್ದಕ್ಕೆ ಸಾರ್ಥಕವಾಗುತ್ತದೆ." ಎಂದರು ಸೀತಮ್ಮ.

"ಅಂಥ ಮಗನನ್ನು ಹುಟ್ಟಿಸಿದಿರಿ ಏತಕ್ಕೆ?'' ಎಂದು, ಯಾವ ಮಾತ ನ್ನಾಡಬೇಕು ಆಡಬಾರದು ಎಂಬ ಸಾರಾಸಾರ ವಿಚಾರವಿಲ್ಲದ ಮೋಹನ ನುಡಿದು ಬಿಟ್ಟ.

"ಅವನಿಗೆ ಹುಡುಗ ಬುದ್ಧಿ. ನಿನಗೂ ಹುಡುಗಾಟಿಕೆಯಾ? ನೀನು ಸ್ವಲ್ಪ ಸುಮ್ಮಗಿರು ನೋಡೋಣ" ಎಂದು ಹೆಂಡತಿಯನ್ನು ಗೋವಿಂದ ರಾಯರು ತಡೆದರು.

ಇನ್ನು ಬುದ್ಧಿ ಬರುತ್ತದೆ ಕೊಳ್ಳಿಯಲ್ಲಿ! ವರುಷ ಹದಿನಾರು ದಾಟಿತು. ನಿಮಗೆ ಹೇಗೆ ಮಾತನಾಡುತಿದ್ದಾನೆ ನೋಡಿದಿರಾ? ರಾಜಾ ಇದ್ದಿರ ಬೇಕಿತ್ತು ಈಗ. ಅವನ ಹಲ್ಲೊಂದೂ ಒಂದೂ ಉಳಿಯುತಿದ್ದಿಲ್ಲ. ಅವನು ಮನೆಗೆ ಬಂದಾಗ ಇಲಿಯ ಹಾಗೆ ಒಳಗೇ ಇರುತಿದ್ದ. ಅವನು ರಸ್ತೆ ಹಿಡಿದನೆಂದು ಗೊತ್ತಾದ ಕೂಡಲೇ ಇಲಿ ಹೋಗಿ ಹೆಬ್ಬುಲಿಯಾಗುತ್ತದೆ.''

"ಥೂ, ನೀನು ಮಾತನಾಡಬೇಡ"

"ಇಲ್ಲ ನಾನು ಮಾತನಾಡುವದಿಲ್ಲ. ನನಗೇಕೆ? ನೀವು ಏನು ಬೇಕಾದರೂ ಮಾಡಿಕೊಳ್ಳಿ" ಎಂದು ಸೀತಮ್ಮನವರು ಉಸುರಿ ಒಳಗೆ ಹೊರಟು ಹೋದರು.

ಗೋವಿಂದರಾಯರು ಮೂಗಿಗೆ ಒಂದು ಚಿಟಿಕೆ ನಸ್ಯ ಏರಿಸಿ ಮತ್ತೆ ಶಾಂತಚಿತ್ತದಿಂದಲೇ ಮೋಹನನ ಮುಂದೆ ಮೋಹದ ಸಂಗತಿಗಳನ್ನು ತಿರುಹಿದರು.

"ಹೌದಾ ಮೋಹನಾ?"

ನಿರುತ್ತರ.

"ಮೋಹನಾ, ಮಾತನಾಡು. ಸಿಟ್ಟಾಗಬೇಡ. ಗಂಡ ಹೆಂಡತಿ ಸಿಟ್ಟು ಅಣ್ಣತಮ್ಮಂದಿರ ಸಿಟ್ಟು, ತಂದೆ ಮಕ್ಕಳೊಳಗಿನ ಸಿಟ್ಟು, ಇವೆಲ್ಲ ಒಂದು ಕ್ಷಣ ಮಾತ್ರವು. ನೀನು ಏನೆಂದರೂ ನನಗೆ ಸಿಟ್ಟಿಲ್ಲ. ಈಗ ಹೇಳಿದುದಕ್ಕೂ ಸಿಟ್ಟು ಮಾಡಲಾರೆ. ಏಕೆಂದರೆ, ನೀನು ನುಡಿದಂತೆ ನಿನಗೂ ನಾಲ್ಕಕ್ಷರ ಕಲಿಸದೇ ಇದ್ದುದು ನನ್ನ ತಪ್ಪೇ. ಆದರೆ, ಅವರ ಮೇಲೆ ಅಧಿಕ ಪ್ರೇಮವಿದ್ದುದರಿಂದ ನಾನು ಕಲಿಸಿದುದೂ ಅಲ್ಲ. ತಾತ್ಸಾರದಿಂದ ಶಾಲೆಗೆ ನಿನ್ನನ್ನು ಕಳಿಸದೆ ಇದ್ದುದೂ ಅಲ್ಲ. ಆಗಲಿಲ್ಲ. ನೀನು ಸಣ್ಣವನಿದ್ದಾಗಲೇ ಇತ್ತ ಬಂದು ಬಿಟ್ಟೆವು. ಇಲ್ಲಿ ಸಮೀಪ ಶಾಲೆಯಿರಲಿಲ್ಲ. ಪರವೂರಿನಲ್ಲಿರುವ ಶಾಲೆಗಳಿಗೆ ಕಳಿಸಲು ಅನುಕೂಲವಾಗಲಿಲ್ಲ. ಅಣ್ಣನ ಕೈ ಕೂಡಾ ಗಿಡ್ಡವಾಯಿತು ದಿನದಿಂದ ದಿನಕ್ಕೆ. ಹೀಗಾಗಿ ದಿನಗಳು ಕಳೆದುವು. ದೊಡ್ಡವನಾಗಲಿ. ಏನಾದರೂ ಒಂದು ದಾರಿಗೆ ಹಚ್ಚೋಣ ಎಂದು ಮನಸ್ಸಿನೊಳಗೇ ಮುಂಡಿಗೆ ತಿನ್ನುತಿದ್ದೆ. ಏನೋ ಪೂರ್ವ ಜನ್ಮದ ವಾಸನಾ ಫಲದಿಂದ ದೊಡ್ಡಣ್ಣ ಈ ಆಸ್ತಿ ಮಾಡಿದ. ಪೂರ್ವ ಜನ್ಮದ ಸುಕೃತವಲ್ಲದಿದ್ದರೆ ಇದು ಅವನ ಕೈಗೆ ಲಭಿಸಿವ್ವಾದರೂ ಹೇಗೆ? ನಾವು ಎಲ್ಲಿ ಹುಟ್ಟಿದವರು? ಎಲ್ಲಿ ಬೆಳೆದವರು? ಈ ಮಲೆನಾಡಿಗೆ ಇಷ್ಟರವರೆಗೆ ಯಾರು ಕಾಲಿಟ್ಟಿದ್ದಾರೆ? ಏನೋ ದೈವದಾಟ ಇದೆ ಇದರಲ್ಲಿ. ಅದೇ ಎಳೆದು ಕೊಂಡು ಬಂದಿತು ನಮ್ಮನ್ನೆಲ್ಲ. ನಾನಂತೂ ಮುದುಕನಾದೆ. ಇನ್ನು ಎಷ್ಟು ವರುಷ ಬದುಕುತ್ತೇನೆ ನಾನು? ತೆಂಗಿನ ಮರಗಳಲ್ಲಿ ಫಲ ಬಿಡುವ ಹೊತ್ತಿಗೆ, ಕಂಗುಗಳಲ್ಲಿ ಫಸಲು ಬರುವ ವೇಳೆಗೆ ನಾನು ಉಳಿಯುವುದೂ ಸಂಶಯ. ನನ

ಗಷ್ಟು ಭರವಸೆಯಿಲ್ಲ. ನಾನು ಕಣ್ಮುಚ್ಚಿದ ಮೇಲೆ ನೀನಾದರೂ ಇಲ್ಲಿ ಉಳಿದು ಅಣ್ಣನಿಗೆ ನೆರವಾಗಬಹುದೆಂದು ಒಂದು ಆಶೆಯನ್ನಿಟ್ಟು ಕೊಂಡಿದ್ದೆ. ಏಕೆಂದರೆ, ಶಿವರಾಮುನಂತೂ ಮೂಲ್ಕಿ ಗಟ್ಟಿಯಾಗಿ ಹಿಡಿದ. ಹರಿ ಪದೇಶಿ. ಗಾಂಧೀ ಪಾರ್ಟಿಯಲ್ಲಿ ಸೇರಿ ಸರ್ವಸ್ವವನ್ನೂ ತ್ಯಾಗ ಮಾಡಿದ್ದಾನೆ. ಅವನಿಗೆ ಯಾವುದರ ಮೇಲೆಯೂ ಆಶೆಯಿಲ್ಲ. ಜೀವದ ಮೇಲೆಯೇ ಅವನಿಗೆ ಆಶೆ ಯಿಲ್ಲದ ಬಳಿಕ ಆಸ್ತಿ, ಪಾಸ್ತಿ, ನೌಕರಿ, ದುಡ್ಡು ದುಗ್ಗಾಣಿ ಇವುಗಳನ್ನೆಲ್ಲ ಎಲ್ಲಿ ಲಕ್ಷಿಸುತ್ತಾನೆ? ಯಾರ ಲಕ್ಷವೂ ಇಲ್ಲ ಅವನಿಗೆ. ಅವನು ಇಲ್ಲಿ ಇರಲಾರ. ಇದ್ದರೂ ಬದುಕಲಾರ. ಅಷ್ಟು ನಿತ್ರಾಣಿ. ಆದುದರಿಂದ ನೀನು ಇಲ್ಲಿ ಉಳಿ ದರೆ ಅಣ್ಣನಿಗೊಂದು ಊರುಗೋಲಾಗಬಹುದೆಂದು ನನ್ನ ಕಲ್ಪನೆಯಾಗಿತ್ತು ಅದು ಹುಚ್ಚುಕಲ್ಪನೆಯೆಂದು ಇಂದು ಗೊತ್ತಾಯಿತು."

ಸ್ವಲ್ಪ ಹೊತ್ತು ಅವರು ತಡೆದು ಬೈರಾಸಿನಿಂದ ನೋರೆ ಮತ್ತು ಮೈಗಳನ್ನು ಒರಸಿಕೊಂಡರು. ಮೋಹನ ತುಟಿ ಬಿಚ್ಚಲಿಲ್ಲ. ತಂದೆಯೇ ಮಾತನಾಡಿದರು.

"ನೀನು ಇಂದು ಈ ರೀತಿ ನನ್ನ ಭ್ರಮನಿರಸನಗೊಳಿಸಿದುದರಿಂದ ಕೆಡುಕಾಗಲಿಲ್ಲ. ಹಿತವೇ ಆಯ್ತು. ದೇವರೇ ನಿನಗೆ ಆ ರೀತಿ ಬುದ್ಧಿಕೊಟ್ಟ ನಿನಗೆ ಬುದ್ಧಿ ಇದೆ. ನೀನು ಮೊದ್ದಲ್ಲ. ಈಗ ಇದು ಹುಡುಗ ಬುದ್ಧಿ. ನಿಜ. ನೀನು ಬೆಳೆದಂತೆ ನಿನ್ನ ಅನುಭವ ಬೆಳೆದಂತೆ ಆ ಬುದ್ಧಿ ಪರಿಪಕ್ವವಾಗುತ್ತದೆ. ಜೀವನದ ಅನುಭವವೇ ಬುದ್ಧಿ ಇಲ್ಲದವರಿಗೆ ಬುದ್ಧಿಗಲಿಸುತ್ತದೆ. ಅದಕ್ಕಿಂತ ದೊಡ್ಡ ಪಾಠ ಬೇರೊಂದಿಲ್ಲ. ಜೀವನವೇ ಒಂದು ಶಾಲೆ. ಅದಕ್ಕಿಂತ ಬೇರೊಂದು ಶ್ರೇಷ್ಠವಾದ ಶಾಲೆಯಿಲ್ಲ. ಶಾಲೆ ಕಾಲೇಜುಗಳಿಗೆ ತೆರಳಿ, ನಾಲ್ಕು ಇಂಗ್ಲೀಷ್ ಅಕ್ಷರಗಳನ್ನು ಓದಿದವರು ವಿದ್ಯಾವಂತರೆಂದು ತಿಳಿದೆಯಾ? ಬಿ. ಎ.; ಎಂ. ಎ; ಐ. ಸಿ. ಎಸ್ ಎಂದು ತಮ್ಮ ಹೆಸರುಗಳ ಮುಂದೆ ಡಿಗ್ರಿಗಳನ್ನು ಬರೆಯಿಕೊಂಡವರೆಲ್ಲರೂ ಜ್ಞಾನಿಗಳೆಂದು ಹೇಳಬಲ್ಲೆಯಾ? ಕಲಿತವರೇ ಹೆಚ್ಚಾಗಿ ದೇಶದ್ರೋಹಿಗಳಾಗಿ ಬ್ರಿಟಿಶರ ಗುಲಾಮಗಿರಿ ಮಾಡುತ್ತಿದ್ದಾರೆ. ನಮ್ಮನ್ನೂ ಗುಲಾಮರನ್ನಾಗಿ ಮಾಡಿದ್ದಾರೆ? ಗಾಂಧಿ ಮಹಾತ್ಮರನ್ನು ಯಾರು ಹಿಡಿ ದರು? ನಿನ್ನಣ್ಣ ಹರಿಯನ್ನೂ ಜೈಲಿನಲ್ಲಿಟ್ಟವರು ಯಾರು? ಮುಂಬಯಿ ಕಲಕತ್ತಾಗಳಲ್ಲಿ ಸ್ತ್ರೀಪುರುಷರ ಮೇಲೆ ಗುಂಡು ಹಾರಿಸಿದವರು ರಾಜಾ

ಹೇಳಿದ್ದುದನ್ನು ಕೇಳಿದ್ದೆಯಲ್ಲ. ಯಾರು ಹಾರಿಸಿದರು? ಎಲ್ಲ ನಮ್ಮವರೇ. ಇವರು ಕಲಿತವರು ನಿಜ. ಆದರೆ ಏನು ಕಲಿತವರು? ಸ್ವಜನ ದ್ರೋಹ, ಸ್ವದೇಶ ದ್ರೋಹ, ಬಂಧು ದ್ರೋಹ, ಬಂಧನವಲ್ಲಿಟ್ಟ ದ್ರೋಹಗಳನ್ನು ಕಲಿತವರು ಎಂದು ಕರೆಯುವುದು ಸೊಗಸು. ಇವರು ವಿದ್ಯಾವಂತರಲ್ಲ. ಪುಸ್ತಕದ ಹಾಳೆಗಳನ್ನು ಮಗುಚಿ ಹಾಕಿದ ಮಾತ್ರಕ್ಕೇ ಅದು ವಿದ್ಯೆಯಾಗಲಾರದು. ನಿನ್ನಲ್ಲೇ ಇದೆ ಅದು. ನಿನ್ನ ಎದೆಯಲ್ಲಿದೆ. ಪ್ರೀತಿ, ದಯೆ, ನಿನ್ನೆದೆಯಲ್ಲಿ ತುಂಬಿ ತುಳುಕಿದಾಗ ನೀನು ದೊಡ್ಡ ವಿದ್ಯಾವಂತನಾಗುತ್ತೀ. ಅವುಗಳಿಲ್ಲದ ವಿದ್ಯೆ ಮಣ್ಣುಮುದ್ದೆ."

ಮೋಹನ ಆಲಿಸುತಿದ್ದ.

"ಇದು ನನ್ನ ಆಸ್ತಿಯಲ್ಲ. ನಾನು ಏಕಿರಬೇಕು ಇಲ್ಲಿ" ಎಂಬ ಭಾವನೆ ನಿನ್ನದು. ಇನ್ನೂ ಕೆಲವು ದಿನಗಳು ಉರುಳಿದರೆ "ಅಣ್ಣನಿಗೆ ಆಸ್ತಿ ಮಾಡಿ ಕೊಟ್ಟರಿ. ನನಗೇನಿದೆ?" ಎಂದು ನೀನು ಜರೆಯಬಹುದು. ಆದರೆ ನಿನಗೂ ಒಂದು ದೊಡ್ಡ ಆಸ್ತಿಯಿದೆ. ನಿನಗೂ ಕೈಕಾಲುಗಳೆಲ್ಲವನ್ನೂ ದೇವರು ಸರಿಯಾಗಿ ಕೊಟ್ಟಿದ್ದಾನೆ. ಯಾವ ಅಂಗಕ್ಕೂ ಊನವಿಲ್ಲ. ಇದೇ ದೊಡ್ಡ ಆಸ್ತಿ. ಈ ಆಸ್ತಿಯಲ್ಲಿ ಬುದ್ಧಿಯ ಬೀಜ ಬಿತ್ತು. ದುಡಿ. ಬೆಳೆಸು. ಅಕ್ಕಿ ಬೆಳೆಸು. ಅನಾನಾಸ್ ಬೆಳೆಸು. ಒಂದು ಎಮ್ಮೆ ಕಟ್ಟಿ ಮೇಯಿಸು. ಎಮ್ಮೆಯ ಹಾಲನ್ನು ನಾಲ್ಕು ಮಕ್ಕಳಿಗೆ ನೀನು ಕೊಟ್ಟರೆ ಎಂ. ಎ. ಕಲಿತವರಿಗಿಂತ ಹೆಚ್ಚು ಜನಹಿತ ಕಾರ್ಯ ನೀನು ಸಾಧಿಸಿದಿಯೆಂದು ನಾನು ತಿಳಿಯುತ್ತೇನೆ. ದನ ಸಾಕಲು ದನದ ಸೆಗಣಿಯ ಗೊಬ್ಬರ ಮಾಡಲು, ಎತ್ತುಗಳನ್ನು ಗದ್ದೆಗಳಲ್ಲಿ ಕಟ್ಟಲು ಆ ಗದ್ದೆಗಳಲ್ಲಿ ಬಿತ್ತಿ ಬೆಳೆಸಿದ ಅಕ್ಕಿ ಕುಟ್ಟಲು ನೀನು ಕಲಿತರೆ ಅದೂ ಒಂದು ವಿದ್ಯೆಯೇ. ನೀನೂ ವಿದ್ಯೆಗಳಿಸಿದಿಯೆಂದು ನಾನು ಹೆಮ್ಮೆಪಡುತ್ತೇನೆ ಕೋಟಿ ವಿದ್ಯೆಗಳಿಗಿಂತ ಮೇಟಿವಿದ್ಯೆಯೇ ಮೇಲು. ನೀನು ಸಾವಿರಾರು ರೂಪಾಯಿ ತೆತ್ತರೂ ಈ ವಿದ್ಯೆ ನಿನಗೆ ಲಭಿಸಲಾರದು. ಇದು ಅಸಹ್ಯವಲ್ಲ. ನಮ್ಮ ಹಿರಿಯರು ಗೋಪಾಲಕರು. ಗೋವುಗಳನ್ನು ಪೂಜಿಸಿದರು. ಗೋವುಗಳನ್ನು ಪೂಜಿಸಿ ನಮ್ಮ ಹಿರಿಯರೇ ವೇದ ಉಪನಿಷತ್ತುಗಳ ಜ್ಞಾನ ಬೀರಿದರು. ಅವರು ಇಂದಿನ ಕಾಲೇಜುಗಳಿಗೆ ತೆರಳಿದ್ದಿರಲಿಲ್ಲ ತಿಳಿ. ನೀನು ತಿಳಿವೆಯೋ ಇಲ್ಲ. ಮೋ ನೀನಿನ್ನೂ ಎಳೆಬಾಳೆ. ನಾನಾಡಿದುದೆಲ್ಲ ಅರ್ಥವಾಗಲಿಕ್ಕಿಲ್ಲ; ಆದರೆ ತಿಳಿದು

ದನ್ನು ನೆನಪಿನಲ್ಲಿಟ್ಟುಕೋ. ಯಾವಾಗಲೂ ನಾನು ಹೇಳಲಾರೆ. ಹೇಳಲು ಬಹಳ ಕಾಲ ಬದುಕಲಾರೆ. ಆದರೆ, ನೀನು ದೊಡ್ಡವನಾದ ಬಳಿಕ, ಎಂದಾದ ರೊಂದು ದಿನ ನನ್ನ ಮಾತು ಸತ್ಯವೆಂದು ತೋರಬಹುದು ನಿನಗೆ''

ಇನ್ನೇನೇನು ಹೇಳುವವರಿದ್ದರೊ ಏನೋ! ಯಕ್ಷಗಾನ ಆಟದ ಮಧ್ಯೆ ಸ್ತ್ರೀ ವೇಷ ಬಂದಂತೆ ಬಂದು "ಸಾಕು ನಿಮ್ಮ ರಾಮಾಯಣ. ನೀವು ಹೇಳಿ ದುದನ್ನೆಲ್ಲ ಈ ಕಿವಿಯಿಂದ ಕೇಳಿ ಆ ಕಿವಿಯಿಂದ ಬಿಟ್ಟ.'' ಅವನ ಗುಣ ಸ್ವಭಾವ ನನಗೆ ನೀವು ಹೇಳಬೇಕಾ? ಏಳಿ,ಏಳಿ, ಊಟಕ್ಕೆ.'' ಎಂದು ಊಟಕ್ಕೆ ಎಬ್ಬಿಸಿದರು ಸೀತಮ್ಮ.

ಮಕ್ಕಳ ಸ್ವಭಾವ ತಾಯಿಗೆ ಹೊಳೆದಂತೆ ಇನ್ನಾರಿಗೆ ತಿಳಿದೀತು? ಮಗು ಹೊಟ್ಟೆಯಲ್ಲಿದ್ದಾಗಲೇ ಗೊತ್ತಾಗುತ್ತದೆ ಅವರಿಗೆ ಅದರ ಗುಣ ಹೊಟ್ಟೆಗೆ ಎರಡು ಮೂರು ತಿಂಗಳಾಗುವಾಗಲೇ ಅದು ಬೇಕು ಇದು ಬೇಕು ಎಂದು ಮಗು ಬಯಸುತ್ತದೆ. ಆ ಬಯಕೆಗಳ ಮೇಲಿಂದಲೇ ಮಗು ವಿನ ಶೀಲ ಊಹಿಸುವರು. ಹೊಟ್ಟೆಯಲ್ಲಿ ಅತ್ತಿತ್ತ ಕೂಸು ಸರಿದಾಗ ಅವರು ಏನನ್ನೋ ತಿಳಿಯುವರು.ಮೂರು ವರುಷದ ಮಗುವಿನ ಬುದ್ಧಿ ಪರಿಕಿಸುವರು ಏಳು ವರುಷ, ಹದಿನಾಲ್ಕು ವರುಷಗಳ ಮೆಟ್ಟಲುಗಳನ್ನೇರಿದಾಗ ಆಗುವ ಬದಲಾವಣೆಗಳನ್ನು ನಿರೀಕ್ಷಿಸುವರು. ಆ ವೇಳೆ ಅವರ ನಡೆ ನುಡಿಗಳಿಂದ ಹಾವ ಭಾವಗಳಿಂದ ಗುಣ ನಿರ್ಣಯಿಸುವರು. ಹಲಸಿನ ಬೀಜವನ್ನು ಸೆರ ಗಿನಲ್ಲಿ ಗಂಟು ಕಟ್ಟಿದಂತೆ ಹಣ್ಣನ್ನು ಅಶಕ್ಯ. ಕಟ್ಟಿ ಕೊಳ್ಳಲೆತ್ನಿಸುವುದ ರಲ್ಲೂ ಅರ್ಥವಿಲ್ಲ. ಅವರವರ ಸ್ವಬುದ್ಧಿಗೆ ತಿಳಿದಂತೆ ಮಾಡಲು ಬಿಟ್ಟು ಬಿಡುವುದೇ ಪರಮೋಚಿತವೆಂಬು ಸೀತಮ್ಮನವರ ಜೀವನದ ಅನಂತ ಅನು ಭವಗಳಲ್ಲೊಂದಾಗಿದೆ. ಆದುದರಿಂದಲೇ ಆ ರೀತಿ ಹೇಳಿದರು.

ಸೀತಮ್ಮನವರು ಹೇಳಿದಂತೆ ಗೋವಿಂದರಾಯರು ಮಾಡಿದ ಉಪದೇಶ ವೆಲ್ಲ ಬೋರ್ಗಲ್ಲಿನ ಮೇಲೆ ಹೊಯ್ದ ನೀರಿನಂತೆಯೇ ಆಯಿತು. ಒಂದು ದಿನ ರಾತ್ರಿ ಬಂಗಾಡಿ ಪೇಟೆಯಲ್ಲಿ ನಡೆದ ತಾಳ ಮದ್ದಲೆಗೆ ಅವರು ತೆರಳಿದ್ದರು. ಮುಂಜಾನೆ ಮನೆಗೆ ಮರಳಿದಾಗ ಸೀತಮ್ಮನವರು ಒಲೆಯ ಮುಂದೆ ತಲೆಯ ಮೇಲೆ ಎರಡೂ ಕೈಗಳನ್ನಿಟ್ಟುಕೊಂಡು ಅಳುತಿದ್ದರು.

"ಯಾಕೆ ಅಳುತ್ತಿದ್ದೀ. ನಿನ್ನ ಕಣ್ಣೀರನ್ನು ನೋಡಿ ನನಗೆ ಸಾಕಾಗಿದೆ. ನಿನ್ನ ಕಣ್ಣುಗಳಲ್ಲಿ ಎಷ್ಟು ನೀರಿಟ್ಟಿದ್ದಾನೆ ದೇವರು?" ಎಂದು ಗದರಿಸಿದರು.

"ಮೋಹನ ಹೋಗಿ ಬಿಟ್ಟ" ಎಂದು ಗದ್ಗದಿತ ಕಂಠದಿಂದ ಅವರು ತಿಳಿಸಿದರು.

"ಹೌದಾ? ನಿಜವಾ?"

"ಹೌದು. ನಿಜ. ಅವನ ಬಟ್ಟೆ ಬರೆ, ಸಣ್ಣ ಟ್ರಂಕ್ ಒಂದೂ ಇಲ್ಲ. ರಾತ್ರಿ ನನ್ನ ಸಮೀಪವೇ ಮಲಗಿದ್ದ. ಬೆಳಗು ಮುಂಜಾನೆ ದಾರಿ ಹಿಡಿದನೆಂದು ತೋರುತ್ತದೆ. ಮುಂಡಾಜೆಯ ವರೆಗೆ ಜೋರನನ್ನಾದರೂ ಅಟ್ಟಿರಿ"

ಗೋವಿಂದರಾಯರು ಅಡಿಗೆ ಮನೆಯ ಅಗಳಿಯ ಮೇಲೆ ಕುಳಿತರು. "ಯಾಕೆ ಕಳಿಸಬೇಕು ಜೋರನನ್ನು?" ಎಂದವರು ಪ್ರಶ್ನಿಸಿ ಅದಕ್ಕೆ ತಾವೇ ಉತ್ತರ ಕೊಟ್ಟರು. "ಅವನು ಸಿಗಲಿಕ್ಕಿಲ್ಲ. ಜೋರ ಕಂಡರೂ ಎಳೆದು ಕೊಂಡು ಬರಲಿಕ್ಕಾಗುತ್ತದೇನು? ಎಳೆದು ತಂದರೂ ಮನಸ್ಸಿಲ್ಲವೆಂದ ಮೇಲೆ ನಿಲ್ಲಲಾರ. ಪಕ್ಕಿಯ ರೆಕ್ಕೆ ಬಲಿತ ಮೇಲೆ ಗೂಡಿನಲ್ಲೇ ಇರಬೇಕೆಂದು ತಾಯಿ ಬಯಸಿದರೆ ಅದು ಸಾಧ್ಯವಾ ಹೇಳು? ಅವನು ಮೂರಾರು ವರುಷದ ಮಗುವಲ್ಲ. ಬಳೆತೊಟ್ಟ ಹೆಣ್ಣೂ ಅಲ್ಲ. ಹೆಣ್ಣಾದರೆ ಯಾರಾದರೂ ಎಳೆದಾರೆಂದು ಭೀತಿ! ಅವನ ಬಗ್ಗೆ ನಮಗೇನು ಭಯ? ಬಿಡು. ಬಿಡು ಚಿಂತೆ. ನಿನಗೆ ಮರುಳು".

"ಮಾಣಿಗೆ ನಾಲ್ಕು ಇಂಗ್ಲೀಷ್ ಅಕ್ಷರವೂ ಇಲ್ಲ. ಎಲ್ಲಿ ಹೋಗಿ ಏನು ಮಾಡುತ್ತಾನೆ?"

"ಇಂಗ್ಲೀಷ್ ಕಲಿತವರು ಉದ್ಧಾರ ಮಾಡಿದರು! ನಾಲ್ಕಕ್ಷರ ಇಂಗ್ಲೀಷ್ ಬಂದೊಡನೆಯೇ ಸರಸ್ವತಿ ಅವನಿಗೆ ಒಲಿಯಲಿಲ್ಲ. ಭಾಗ್ಯ ಲಕ್ಷ್ಮಿ ಬರಲಿಲ್ಲ. ಎದೆ ಸೀಳಿದರೆ ಸುಡು ತಿನ್ನಲಿಕ್ಕೆ ಒಂದಕ್ಷರವಿಲ್ಲದ ಎಷ್ಟು ಜನ ಪರವೂರಿಗೆ ತೆರಳಿ ಹೋಟ್ಲು ಇಟ್ಟು ಭಾಗ್ಯವಂತರಾಗಿಲ್ಲ! ಹರಿ ಊರಿಗೆ ಬಂದಾಗ ಏನೆಂದಿದ್ದ? "ಅಪ್ಪಯ್ಯಾ, ಇಂದಿನ ಕಾಲಕ್ಕೆ ಕಾಶಿ, ಕೈಲಾಸ ರಾಮೇಶ್ವರಗಳಿಗೆ ತೆರಳಿದರೂ ತಿಂಡಿ ತೀರ್ಥಕ್ಕೆ ಕಡಿಮೆಯಿಲ್ಲ. ಶಿವ, ಪಾರ್ವತಿ, ಗಜಾನನ ಟೀ ಕಾಫಿ ಕ್ಲಬ್‌ಗಳನ್ನು ಬದರಿಯಲ್ಲೂ ಕಂಡಿದ್ದಾರೆ. ಇಂದಿನ, ಕಾಲಕ್ಕೆ ಹೋಟ್ಲು ಬಿಜಿನೆಸ್ ಅಂದರೆ ಬಿಜಿನೆಸ್. ಅವರು ಗಳಿಸಿದ ಹಣ

ಅವರು ಮಾಡಿದ ಆಸ್ತಿ ಅಷ್ಟಿಷ್ಟಲ್ಲ. ಅವರನ್ನು ಕೈ ಹಿಡಿದವರಿಲ್ಲ. ಅಷ್ಟ ಮಠಗಳನ್ನು ಬಗಲಿಗೆ ಹಾಕಿಕೊಳ್ಳುವ ಹಾಗಿದ್ದಾರೆ ಒಬ್ಬೊಬ್ಬರು." ಎಂದು ಹೇಳಿದ್ದ. ನಿನಗೆ ನೆನಪಿದೆಯಾ? ಎಲ್ಲ ಅವನವನು ಹುಟ್ಟಿದ ಗಳಿಗೆ. ಶ್ರೀಕೃಷ್ಣ ಪರಮಾತ್ಮನ ಕೃಪೆ! ಒಳ್ಳೇದಾಗಿದ್ದರೆ ಅವನ ನಸೀಬ್. ನಾವು ಅದನ್ನೇ ಬಯಸೋಣ. ಕೆಟ್ಟದಾದರೆ ಮನೆಗೆ ಒಮ್ಮೆಯಾದರೂ ಬಾರದೆ ಇದ್ದಾನಾ?"

ಅವರೂ, ಈಗ ಬಂದಾನು ಮತ್ತೆ ಬಂದಾನು ಎಂದು ಆಶಿಸಿದರು ಸೀತಮ್ಮ. ಅಡಿಗೆ ಮನೆಯಲ್ಲಿ ಕುಳಿತಾಗ ಮುಖಮಂಟಪದಲ್ಲಿ ಸ್ವಲ್ಪ ಶಬ್ದವಾದರೆ ಬಂದು ಹಣಕುವರು. ರಸ್ತೆಯಲ್ಲಿ ಯಾರಾದರೂ ಮಾತನಾಡಿದುದು ಕಿವಿಗೆ ಬಿದ್ದರೆ ಮುಖಮಂಟಪಕ್ಕೆ ಬಂದು ಆಲಿಸುವರು. "ನಿಮ್ಮಲ್ಲಿ ಬಂದಿದ್ದಾನಾ? ನಿಮಗೇನಾದರೂ ಸುದ್ದಿ ಇದೆಯಾ?" ಎಂದು ಗುಲಾಬಿ, ಕಮಲೆಯರಿಗೆ ಪತ್ರ ಬರೆದರು. ರಾಜಾ ಬಂದಾಗ ಪ್ರಶ್ನಿಸಿದರು. ಶಿವರಾಯನಿಗೆ ಸುದ್ದಿ ಮುಟ್ಟಿಸಿದರು. ಆದರೆ ಮೋಹನನ ಪತ್ತೆಯಿಲ್ಲ. ಗೋವಿಂದರಾಯರು ತಮ್ಮ ದುಃಖ ನುಂಗಿಕೊಂಡರು. ಹಸಿ ಕಟ್ಟಿಗೆ ಒಲೆಗಿಟ್ಟಾಗ ಒಂದು ತುದಿಯಿಂದ ಒಸರುವ ರಸದಂತೆ ಸೀತಮ್ಮನವರ ಹೃದಯ ಬೆಂದು ಬಿಸಿ ನೀರು ಹೊರಸೂಸಿತು ಕಣ್ಣಿನಿಂದ. ರಾತ್ರಿ ನಿದ್ದೆಯೂ ಹತ್ತಲಿಲ್ಲ ಅವರಿಗೆ.

ನಿದ್ದೆ ಬಾರದ ಒಂದುರಾತ್ರಿ ಮುಖಮಂಟಪದಲ್ಲಿ ಮನುಷ್ಯರ ಕಾಲ ಸಪ್ಪಳ ಕೇಳಿಸಿತು ಅವರಿಗೆ. ಆ ಮೇಲೆ "ಅಮ್ಮಾ, ಅಮ್ಮಾ" ಎಂದು ಕರೆದಂತಾಯ್ತು. ಮಗನ ಧನಿಯನ್ನು ಗುರುತಿಸಿದರು ಸೀತಮ್ಮ. ಆದರೆ ಒಮ್ಮೆಯೇ ಬಾಗಿಲು ತೆರೆಯಲು ಭಯ. ಆದುದರಿಂದ "ಯಾರೋ ಬಂದಿದ್ದಾರೆ. ಕರೆಯುತಿದ್ದಾರೆ" ಎಂದು ಹೇಳಿ ಗಂಡನನ್ನು ಎಬ್ಬಿಸಿದರು. ಚಿಮಣಿ ದೀಪ ಹೊತ್ತಿಸಿ ಗೋವಿಂದರಾಯರು ಬಾಗಿಲಿನ ಬಳಿ ಬಂದು "ಯಾರು? ಯಾರು?" ಎಂದು ಎರಡು ಮೂರು ಸಲ ಕೇಳಿದರು.

"ಅಪ್ಪಯ್ಯಾ, ನಾನು. ಹರಿ"

"ಓಹೋ ನೀನೋ" ಎಂದು ಉದ್ಗರಿಸಿದ ಗೋವಿಂದರಾಯರು ಬಾಗಿಲು ತೆರೆದು, ಮುಖಮಂಟಪಕ್ಕೆ ಕಾಲಿಟ್ಟಾಗಲೇ "ಮಧ್ಯರಾತ್ರಿ ಸೂರ್ಯ ಮೂಡಿದಂತಾಯಿತಲ್ಲ" ಎಂದರು. ಇನ್ನೇನೋ ಹೇಳುವವರಿದ್ದರು. ಆದರೆ

ಹರಿಯ ದುಸ್ತು ಕಂಡು ಆಶ್ಚರ್ಯವಾಯಿತು ಅವರಿಗೆ. ಖಾಕಿ ಚಲ್ಲಣ, ಖಾಕಿ ಅಂಗಿ, ಹೇಟು ಬೂಟುಗಳನ್ನು ಹಾಕಿದ್ದ. ಅಲ್ಲದೆ ಅವನೊಬ್ಬನೂ ಅಲ್ಲ. ಇನ್ನಿಬ್ಬರು ಅದೇ ಡ್ರೆಸ್ ಹಾಕಿಕೊಂಡು ನಿಂತಿದ್ದರು.

"ಯಾರವರು?'' ಎಂದು ಕೇಳಿದರು ಅವನ ತಂದೆ.

"ಅವರು ಧಾರವಾಡದ ನನ್ನ ಮಿತ್ರರು. ಇವರು ಕುಲಕರ್ಣಿ. ಇದು ಅವರ ತಂಗಿ ಸುವಾಸಿನಿ''

"ತಂಗಿ ಸುವಾಸಿನಿ?'' ಎಂದು ತಬ್ಬಿಬ್ಬಾಗಿ ಕೇಳಿದರು ಅವರು. ಏಕೆಂದರೆ ತಂಗಿಯೆಂದರೆ ಪುಲ್ಲಿಂಗವಲ್ಲ. ಸುವಾಸಿನಿ ಎಂಬ ಹೆಸರೂ ಸ್ತ್ರೀಲಿಂಗವೇ. ಡ್ರೆಸ್ ಮಾತ್ರ ಗಂಡಸರದ್ದು.

" ಇದೇನು ವಿಚಿತ್ರ?" ಎಂಬ ಮಾತುಗಳು ಗೋವಿಂದರಾಯರ ಬಾಯಿಂದ ಜಗುಳಿದುವು.

" ಎಲ್ಲ ವಿಚಿತ್ರವೇ. ಈ ಡ್ರೆಸ್ ಹಾಕಿಕೊಳ್ಳದಿರುತಿದ್ದರೆ ಪೋಲೀಸರ ಕೈಗೆ ಬೀಳುತಿದ್ದೆವು. ಅವರ ಕಣ್ಣಿಗೆ ಮಣ್ಣೆರಚಿ ಬಂದೆವು. ಎಲ್ಲ ನಾಳೆ ಹೇಳುತ್ತೇನೆ ರಾಮಾಯಣ " ಎಂದು ಹರಿ ನುಡಿದ.

ಧಾರವಾಡ ಯಾವ ದೇಶ ? ಬಂಗಾಡಿ ಯಾವ ಊರು ? ಗುರುತಿಲ್ಲ. ಪರಿಚಯವಿಲ್ಲ. ಹೆಣ್ಣು ಹುಡುಗಿ ! ಈ ಕಣ್ಣು ಕಾಣದ ಕತ್ತಲೆಯಲ್ಲಿ ಪ್ರತ್ಯಕ್ಷವಾದುದನ್ನು ನೋಡಿ ಸೀತಮ್ಮನವರಿಗೆ ಅತ್ಯಂತ ಸೋಜಿಗವೆನಿಸಿತು. ತಮ್ಮ ಬಾಯಿಗೆ ಕೈಯಿಟ್ಟುಕೊಂಡು ಆ ಗಂಡು ಹುಡುಗಿಯನ್ನು ಮಿಕಿ ಮಿಕಿ ಮಿಕದಂತೆ ನೋಡುತಿದ್ದರು.

" ಸುವಾಸಿನೀ, ಒಳಗೆ ಹೋಗಿ ಸೀರೆ ಉಟ್ಟುಕೋ. ಇಲ್ಲೇನೂ ಗಾಬರಿಯಿಲ್ಲ. ನನ್ನ ಅಮ್ಮ, ಅಪ್ಪಯ್ಯ ಬೇರೆ ಯಾರಿಲ್ಲ ಇಲ್ಲಿ. ಇರುವುದೆಲ್ಲ ಹುಲಿ, ಕರಡಿ, ತೋಳ ಹಾವುಗಳೇ " ಎಂದ ಹರಿ.

"ಅಮ್ಮಾ! ಅಬ್ಬ! ಅಬ್ಬ!" ಎಂದು ಸುವಾಸಿನಿ ಅಲ್ಲೇ ನಿಂತುಕೊಂಡಳು.

"ಹೋಗು ಹೋಗು. ಅದೆಲ್ಲ ಮನೆಯೊಳಗಿಲ್ಲ. ಮನೆಯಲ್ಲೇನೂ ಹೆದರಿಕೆಯಿಲ್ಲ. ಇದು ನಿನ್ನ ಮನೆಯೆಂದೇ ತಿಳಿ" ಎಂದು ಮತ್ತೂ ತಿಳಿಸಿದ ಆ ಹುಡುಗಿಗೆ.

"ಬಾರಮ್ಮ" ಎಂದು ಕರೆದರು ತಾಯಿ.

ಸುವಾಸಿನಿ ತೊಟ್ಟ ಚಲ್ಲಣ ಬಿಚ್ಚಿ ಸೀರೆಯನ್ನುಟ್ಟುಕೊಂಡಾಗ, "ಇವಳು ಯಾವ ಊರಿನ ಚಿತ್ರಾಂಗದೆ?" ಎಂದು ಸೀತಮ್ಮನವರು ಯೋಚಿಸಿ ಕುತ್ತಿಗೆ ನೋಡಿದರು. ಎಲ್ಲ ಬೆಳಗಾದ ಮೇಲೆ ಗೊತ್ತಾಗುತ್ತದಲ್ಲ ಎಂದು ಅವರು ಸುಮ್ಮನಾದರು.

## ೧೧ನೆಯ ಅಧ್ಯಾಯ

ಆ ದಿನ ಬೇಗನೇ ಬೆಳಗಾಯಿತು. ಹಕ್ಕಿಗಳು ಚಿಲಿಪಿಲಿ ಉಲಿವ ನೊಡವಲೇ ಗೋವಿಂದರಾಯರೆದ್ದು ಚಾಪೆಯ ಮೇಲೆ ಕುಳಿತು, ಹರಿ ಒಮ್ಮೆ ಬಂದಾಗ ತಂದಿದ್ದ ಒಳ್ಳೆ ಕಂಬಳಿಯನ್ನು ಹೊದೆದುಕೊಂಡು, "ಭಯ ನಿವಾರಣವು ಶ್ರೀ ಹರಿಯ ನಾಮಾ। ಜಯ ಪಾಂಡುರಂಗ ವಿಠಲ ನಿನ್ನ ನಾಮಾ" ಎಂದು ಹರಿ ನಾಮ ಸ್ಮರಣೆಯನ್ನು ಸ್ಮರಿಸಿ ನುತಿಸಿದರು. ಉದಯರಾಗದ ಒಂದು ಸೊಲ್ಲು ಮುಗಿಯುವುದರೊಳಗೆ "ಹರಿ, ಹರೀ" ಎಂದು ಸೀತಮ್ಮನವರೂ ಎದ್ದರು. ಮೈ ಮೈ ಕಾಣುವ ನಸುಕಿನ ಎಳೆ ಬೆಳಕಿಗೇ ಬಿಸಿ ನೀರಿನ ಕೊಟ್ಟಿಗೆಗೆ ಬಂದು ಮೊದಲಿನ ರಾತ್ರಿಯೇ ನೀರು ತುಂಬಿಸಿಟ್ಟಿದ್ದ ಗುಡಾಣದ ಒಲೆಗೆ ಮಡಲಿನ ಒಲಿಗಳನ್ನು ತಳ್ಳಿ ಬೆಂಕಿ ಹಚ್ಚಿದರು. ಸೋಗೆಯ ದಂಡಿನ ಒಣಗಿದ ಕೊತ್ತಳಿಗೆಗಳನ್ನೂ ತುರುಕಿಸಿದರು. ಬೆಂಕಿ ಭಗ್ಗೆಂದು ಪ್ರಜ್ವಲಿಸಿದೊಡನೆಯೇ ದೊಡ್ಡ ಕೊಳ್ಳಿಯನ್ನು ಎಳೆದು ತಂದು ಒಲೆಗೆ ತೂರಿದರು. ಪ್ರಾತಃರ್ವಿಧಿ ಮುಗಿಸಿದಾಗಲೇ ಅವರ ಸ್ವರ ಕೇಳಿದ ಬಾಗೀರಥಿ "ಅಮ್ಮಾ, ಅಮ್ಮಾ'' ಎಂದು ಕರೆಯಿತು. "ಹೌದು ನಾನೆದ್ದುದು ನಿನಗೆ ಗೊತ್ತಾಯಿತು. ಸ್ವಲ್ಪ ತಡಿ. ಏನು ಅವಸರ ನಿನಗೆ?' ಎಂದು ಕೊಟ್ಟಿಗೆಯಿಂದಲೇ ನುಡಿದು ಮತ್ತೆ ಮನೆಗೆ ಬಂದರು. ರಾತ್ರಿ ಉಳಿದ, ಅನ್ನ ಹುಳಿ ಸಾರುಗಳನ್ನೆಲ್ಲ ಅಕ್ಕಚ್ಚಿಗೆ ಕೂಡಿಸಿ ಬಾಗೀರಥಿಯ ಮುಂದೆ ತಂದಿಟ್ಟರು. ಅದು ಗುಟುಕು ಗುಟುಕು ಎಳೆದು ಸುರಿದಾದ ಮೇಲೆ ಹಟ್ಟಿಯ ಅಟ್ಟದಿಂದ ಬೈ ಹುಲ್ಲನ್ನು ಎಳೆದು ಬೈಪಣೆಗೆ ಕೊಡಹಿದರು.

ಗೋಸೇವೆ ಮುಗಿದ ಬಳಿಕ ಪತಿ ಮಕ್ಕಳ ಸೇವೆಗೆ ಆರಂಭ. ಹಟ್ಟಿಯಿಂದ ಮರಳಿದಾಗಲೇ ಸೆಗಣಿ ಮುದ್ದೆ ಹಿಡಿದು ಕೊಂಡು ಬಂದು ಅಡಿಗೆ ಮನೆ ಶುದ್ಧ ಮಾಡುವುದೂ ಅವರ ಪದ್ಧತಿ. ಮುಂದೆ ಕಾಫಿಗೆ ಸಿದ್ಧತೆ. ಅವರಿಗಾಗಲೀ ಗೋವಿಂದರಾಯರಿಗಾಗಲೀ ಕಾಫಿ ಕುಡಿದರೇ ಸಾಕು. ವಯ

ಸ್ವಾದುದರಿಂದ ಮುಂಜಾನೆ ತಿಂಡಿ ತಿಂದರೆ ಇತ್ತೀಚೆಗೆ ಜೀರ್ಣವಾಗುವು
ದಿಲ್ಲ. ಆದರೆ ಮಕ್ಕಳಿಗೆ ತೀರ್ಥದೊಂದಿಗೆ ಪ್ರಸಾದ ಇಷ್ಟ. ಮಕ್ಕಳು
ಬಂದಾಗಲೂ ಅವರು ಕಾಫಿಯೊಂದಿಗೆ ಬಾಯಾಡಿಸಲು ಏನಾದರೂ ತಿಂಡಿ
ಮಾಡದೆ ಇಲ್ಲ. ಆದರಲ್ಲೂ ಈಗ ಹರಿ ಅಪರೂಪಕ್ಕೆ ಬಂದಿದ್ದಾನೆ. ದೂರದ
ಮಿತ್ರರನ್ನು ಸಂಗಡ ಕಟ್ಟಿಕೊಂಡು ಬಂದಿದ್ದಾನೆ ಬೇರೆ. ತಮ್ಮ ಬಡತನ
ವೇನಿದ್ದರೂ ಅತಿಥಿಗಳು ಬಂದಾಗ ಅದನ್ನು ಮುಚ್ಚಿಕೊಳ್ಳದಿದ್ದರೆ ಗೌರವಕ್ಕೆ
ಕಡಿಮೆ. ಆದುದರಿಂದ ಅವರು ಏಳುವುದರೊಳಗಾಗಿ ದೋಸೆಯನ್ನಾದರೂ
ಮಾಡಿ ಬಿಡಬೇಕೆಂದು ಸೀತಮ್ಮನವರು ಬೇಗನೇ ಎದ್ದಿದ್ದಾರೆ. ದೋಸೆ
ಯೊಂದಿಗೆ ಅವಲಕ್ಕಿಗೆ ಬೆಲ್ಲ, ಹೆರೆದ ತೆಂಗಿನ ಹೂ ಬೆರಸಿ ಒಂದೊಂದು ಮುಷ್ಟಿ
ಹಾಕಿದರಾಯಿತು ಎಂದು ಅವರು ಭಾವಿಸಿದರು. ಮೊಸರಿಗೂ ಕಡೆಗೋಲು
ಹಾಕದಿದ್ದರಾಯಿತು ಎಂದು ಅವರು ನಿರ್ಧರಿಸಿದರು. ಒಲೆಯ ಬಳಿಯಲ್ಲೇ
ಬಳಕ್ಕೆ ಕಟ್ಟಿದ್ದ ಕೆಲವು ಚೋಕು ಮೈಸೂರು, ಕದಳಿ, ಬೂದಿ ಬಾಳೆ ಗೊನೆ
ಗಳೂ ಅವರ ದೃಷ್ಟಿಗೆ ಬಿದ್ದವು. ಮೇಲಿನವು ಇನ್ನೂ ಕಸುಕಾಯಿ. ಕೆಳ
ಗಿನ ಪಣಿಯೆಗಳಲ್ಲಿ ಕೆಲವಕ್ಕೆ ಹಳದಿ ಬಣ್ಣ ಬಂದಿದೆ. "ಎರಡೆರಡು ಕೊಟ್ಟ"
ಎಂದವರು ಮನಸ್ಸಿನೊಳಗೇ ಅಂದು ಕೊಂಡರು.

ಸೀತಮ್ಮನವರು ಚಾಪೆ ಬಿಟ್ಟ ಮೇಲೆ ಇಷ್ಟೇ ಹೊತ್ತಿಗೆ ಕಾಫಿ ಸಿದ್ಧ
ವೆಂದು ಗೋವಿಂದರಾಯರಿಗೆ ಚೆನ್ನಾಗಿ ಗೊತ್ತು. ಅಷ್ಟರೊಳಗಾಗಿ ಅವರ
ಉದಯ ರಾಗ ಮುಗಿಯುತ್ತದೆ. ಕೊಟ್ಟಿಗೆಗೆ ತೆರಳಿ ಮಾವಿನೆಲೆಯಿಂದ
ಹಲ್ಲುಜ್ಜಿ, ಬಿಸಿ ನೀರಿನಿಂದ ಬಾಯಿ ಮುಕ್ಕಳಿಸಿ, ಕೈಕಾಲು ತೊಳೆದು ಕೊಂಡು
"ಆಯ್ತೇನೇ. ಆಯ್ತೇನೇ. ಈ ಹೊತ್ತು ಬೆಳಗಿನ ಜಾವಕ್ಕೇ ಹಸಿವಾಗಿ ಬಿಟ್ಟಿತು
ನೋಡು. "ಅದು ತಿಂದರೆ ನಿಮಗೆ ಆಗಲಿಕ್ಕಿಲ್ಲ; ಇದು ತಿಂದರೆ ಅಜೀರ್ಣ
ವಾದೀತು" ಎಂದು ಹೇಳಿ ಸುಮ್ಮನೆ ಹೆದರಿಸುತ್ತೀ. ಹಪ್ಪಳ ಗಿಪ್ಪಳ ಏನಾ
ದರೂ ಉಂಟೋ?' ಎಂದು ಮಾತನಾಡುತ್ತ ಮಾತನಾಡುತ್ತ ಅಡಿಗೆ ಮನೆಗೇ
ಬಂದು ಒಲೆಯ ಹತ್ತಿರ ಕುಳಿತು ಒಲೆಯ ಶಾಖಕ್ಕೆ ಕೈಯೊಡುವರು. ಕಾಫಿ
ಸೋಸುವ ವರೆಗೂ ಅವರಿಗೆ ಪುರುಸೊತ್ತಿಲ್ಲ. ಒಂದೆರಡು ಹಪ್ಪಳ ಸುಟ್ಟು
ಕೊಟ್ಟರೇ ಅವರಿಗೆ ಸಮಾಧಾನ. ಏನಿಲ್ಲದಿದ್ದರೆ ಕೊನೆಗೆ ಒಂದು ಗೆಣಸನ್ನಾ
ದರೂ ಕೆಂಡಕ್ಕೆ ಹಾಕದೆ ಉಪಾಯವಿಲ್ಲ. ಒಂದು ಚೂರು ತಿಂದ ಮೇಲೆ

ಒಂದು ಗುಟುಕು ಕಾಫಿ ಕುಡಿಯಲೇ ಬೇಕು. ಇಲ್ಲದಿದ್ದರೆ ಗಂಟಲಲ್ಲಿ ಇಳಿ
ಯುವುದಿಲ್ಲ ಎಂದೆನ್ನುವರು. ತಿನ್ನುವ ವಸ್ತು ಕೈಯಲ್ಲಿ ಉಳಿದು ಲೋಟ
ಬರಿದಾಗುವಂತಿಲ್ಲ. "ಈ ಹೊತ್ತು ಕಾಫಿ ಸ್ವಲ್ಪ ಒಂತು ನನ್ನ ಪಾಲಿಗೆ''
ಎಂದು ಉಳಿದ ಕಾಫಿಯ ಪಾತ್ರೆಯನ್ನು ನೋಡುವರು. "ನಿಮಗೊಂದು
ಗುಡಾಣ ಕಾಫಿ ಬೇಕು'' ಎಂದು ಸೀತಮ್ಮನವರು ತಮ್ಮ ಪಾಲಿನದನ್ನೂ
ಸ್ವಲ್ಪ ಸುರಿಯುವರು. ಕಾಫಿಯೂ ಪಡ್ಪೋಶಿಯಾದರೆ ಅವರಿಗೆ ಖುಷಿ
ಯಾಗುವಂತಿಲ್ಲ. ಸ್ವಲ್ಪ ಪುಡಿ ಕಡಿಮೆಯಾದರೆ, "ಇದು ಕಾಪಿಯಲ್ಲ ಪಾಪಿ''
ಎಂದು ಹೆಸರಿಡುವರು. ಕೈ ತಪ್ಪಿ ಪುಡಿ ಬಹಳ ಬಿದ್ದ ದಿನ, "ಹಾಂ,
ಈ ಸ್ಟ್ರಾಂಗ್ ಕಾಫಿ ಕುಡಿದರೆ ಉರಿ ಮೂತ್ರವೇ ಸರಿ'' ಎಂದು ಆಕ್ಷೇಪಿಸಿ
"ಹಾಲಿಗೆ ಆಸೆ ಮಾಡಿದೆಯಾ?'' ಎಂದು ಹಾಲಿನಾಶೆ ತೋರಿಸುವರು.
"ನೀವು ತೀರ ಸಣ್ಣ ಮಕ್ಕಳ ಹಾಗೆ ಮಾಡುತ್ತೀರಿ. ನಾನಾದುದರಿಂದ
ಆಯ್ತು. ಇನ್ನು ಯಾರಾದರೂ ನಿಮ್ಮ ಕೈ ಹಿಡಿಯುತಿದ್ದರೆ ಪಡ್ಚ. ಪಡ್ಚ
ವಾಗುತಿದ್ದಳು. ಎಂಟೇ ದಿನಗಳಲ್ಲಿ ಅವಳ ರೂಪು ಉಳಿಯುತಿದ್ದಿಲ್ಲ'' ಎಂದು
ಸೀತಮ್ಮನವರು ನುಡಿದು ಅವರ ಲೋಟಕ್ಕೆ ಹಾಲು ಬಗ್ಗಿಸುವರು.

ಇದೆಲ್ಲ ಅವರಿಬ್ಬರೇ ಇರುವಾಗ ಚಂದ. ಮಂದಿ ಮುಂದೆ, ಮಕ್ಕಳ
ಮುಂದೆ, ಮಕ್ಕಳಾಟಿಕೆ ಮರುಳು ಬುದ್ಧಿ ತೋರಿಸಿದರೆ ಅವರು ನಕ್ಕಾರು.
ಸೀತಮ್ಮನವರು ಮಕ್ಕಳ ಮೂಲಕ ಹೇಳಿ ಕಳಿಸಿದಾಗಲೇ ರಾಯರು ಇಟ್ಟ
ಮಣೆಯ ಮೇಲೆ ಒಂದು ಕಾಲು ಆಟ್ಟಿ ಕಟ್ಟಿ ಕುಳಿತು ಬಿಡುವರು. ಅವರು
ಕರೆ ಕಳಿಸಲು ಹೊತ್ತಾಗಬಾರದೆಂದು ಮಕ್ಕಳನ್ನು ಬೇಗನೇ ಎಬ್ಬಿಸಿ ಬಿಡು
ವರು. ಎಬ್ಬಿಸಲು ಬೆಳಗು ಮುಂಜಾನೆ ಉದಯ ರಾಗವನ್ನೇ ಸ್ವಲ್ಪ ಗಟ್ಟಿ
ಯಾಗಿ ಎಳೆದು ಬಿಟ್ಟರೆ ಸರಿ. ಅವರಂತೆ ಇಂದು ಕೂಡಾ, "ನಿದ್ರೆ ಸಾಲದೆ
ಮಗನೆ। ನಿದ್ರೆ ಸಾಲದೆ ಮಗನೆ। ನಿದ್ರೆ ಸಾಲದೆ ಮಗನಿಗೆ॥ ಪದ್ಮಸಖನುದಿ
ಸಿದನು ಪದ್ಮಂಗಳರಳಿದುವು ॥ ಪದ್ಮನಾಭನೆ ಏಳು ಪದ್ಮಭವ ನಿನ್ನ ಪದ।
ಪದ್ಮ ದರುನಶಕೆ ಬಂದಿಳಿದನಂಬರದಿಂದ। ಪದ್ಮಲನೆ ಏಳು ಹರಿಯೇ" ಎಂದು
ಮಲಗಿ ನಿದ್ದೆ ಹೋಗಿದ್ದ ಮಗನನ್ನು ಎಬ್ಬಿಸಿದರು. ಹರಿಯೊಂದಿಗೆ ಕುಂಭ
ಕರ್ಣಯವರೂ ಎದ್ದು ಕಣ್ಣುಗಳನ್ನೊರಸಿಕೊಂಡರು. ಸುವಾಸಿನಿಯೂ
ಎದ್ದು ಸೀರೆ ಸರಿಪಡಿಸಿಕೊಂಡು ಅಡಿಗೆ ಮನೆಗೆ ಬಂದಳು.

"ಬಾರಮ್ಮ, ನಿದ್ದೆ ಸರಿ ಬಿದ್ದಿತಾ ನಿನಗೆ? ' ಎಂದು ಕರೆದು ಮಾತ ನಾಡಿಸಿದರು ದೋಸೆ ಹೊಯ್ಯುತ್ತಿದ್ದ ಸೀತಮ್ಮ.

"ಹೊ, ಒಳ್ಳೇ ನಿದ್ದೆ ಬಂತು''

"ಹೌದು. ನಡೆದು ಎಲ್ಲರೂ ಬಳಲಿದ್ದೀರಿ. ರಾತ್ರಿ ಊಟ ಕೂಡಾ ಸೊನ್ನೆಯೆಂದು ಕಾಣುತ್ತದೆ. ಮಲಗಿದ ಮೇಲೆ ನನಗೆ ಹೊಳೆಯಿತು. ನಿಮಗೆಲ್ಲ ನಿದ್ದೆ ಬಂದುದರಿಂದ ಮತ್ತೆ ಎಚ್ಚರಿಸಲಿಲ್ಲ. ಬೇಗನೇ ಕಾಫಿ ಕುಡಿದರಾಯ್ತೆಂದು ಬಿಟ್ಟೆ. ಬಾ. ಹಲ್ಲುಜ್ಜಿಕೋ'' ಎಂದು ಬಿಸಿ ನೀರಿನ ಕೊಟ್ಟಿಗೆಗೆ ಕರೆದುಕೊಂಡು ಬಂದರು.

ಕುಲಕರ್ಣಿಯವರೊಂದಿಗೆ ಬಂದು ಅಲ್ಲಿ ಹಲ್ಲು ತಿಕ್ಕುತಿದ್ದ ಹರಿ, "ಸುವಾಸಿನೀ, ನಮ್ಮಪ್ಪಯ್ಯ ಹಲ್ಲುಜ್ಜಲು ದೇಶೀ ಬ್ರಶ್ ತಯಾರಿಸಿದ್ದಾರೆ. ನಿನಗೊಂದು ಬೇಕ? '' ಎಂದು ಕೈ ಹಿಡಿಕೆಯೊಳಗಿದ್ದ ಗಾಂಧೀ ಬ್ರಶ್, ತೋರಿಸಿದ.

ಸುವಾಸಿನಿ ನೋಡಿ "ನನಗೆ ಗೊತ್ತಾಗಲಿಲ್ಲ'' ಎಂದಳು.

"ನಿನಗೆ ಹೇಗೆ ಗೊತ್ತಾದೀತು? ಧಾರವಾಡದಲ್ಲಿ ಗೇರು ಬೀಜದ ಮರವನ್ನೇ ಕಂಡಿರಲಿಕ್ಕಿಲ್ಲ. ಇಕೋ, ಆ ಮರವೇ ಗೇರು ಮರ'' ವೆಂದು ಕೈ ನೀಡಿ ಅಗಳಿನಲ್ಲಿದ್ದ ಮರಗಳನ್ನು ತೋರಿಸಿದ. ಆ ಮೇಲೆ ಗುಡಾಣದ ಬಳಿ ಬಿದ್ದಿದ್ದ ಅದರ ಎಲೆಗಳನ್ನು ತೋರಿಸಿ, "ಇದು ಅದರ ಎಲೆ. ಇದನ್ನು ಹೀಗೆ ಮಡಚಿ ಬ್ರಶ್ ಮಾಡಬೇಕು. ಇದರ ಬೆಲೆ ಮೊದಲು ಕಾಸಿದ್ದರೆ ಈಗ ಯುದ್ಧಕಾಲವಾದುದರಿಂದ ಒಂದಾಣೆ. ನಿಮಗೆ ಸ್ಯಾಂಪಲ್ ಫ್ರೀ'' ಎಂದು ಹೇಳಿ ಅಣ್ಣ ತಂಗಿಗೊಂದೊಂದು ಕೊಟ್ಟ.

"ಇನ್ನೂ ನಿನ್ನ ಕುಶಾಲ್ ಬಿಟ್ಟಿಲ್ಲ'' ಎಂದರು ಸೀತಮ್ಮ.

"ಅಯ್ಯೋ, ಅದನ್ನು ಅವರು ಕೊಟ್ಟರುಂಟು. ಜೈಲಿನಲ್ಲೂ ನಗಿಸುತಿದ್ದರು. ಇಲ್ಲದಿದ್ದರೆ ನಮಗೆ ಹೊತ್ತೇ ಹೋಗುತಿದ್ದಿಲ್ಲ'' ಎಂದು ಕುಲಕರ್ಣಿಯವರು ಕೂಡಿಸಿದರು.

"ನೀವು ಹೋಗಿದ್ದಿರಾ ಜೈಲಿಗೆ?"

"ಹೌದು. ನಾನೂ ನಿಮ್ಮ ಮಗನೂ ಒಟ್ಟಿಗಿದ್ದೆವು."

"ಅಮ್ಮಾ, ಅವರು ಮಾತ್ರವಲ್ಲ. ಸುವಾಸಿನಿ ಕೂಡಾ ಇದ್ದಳು ಜೈಲಿನಲ್ಲಿ"

"ಹೌದಾ? ಹೌದಾ? ನಿಜವಾ?" ಎಂದು ಅತಿ ಆಶ್ಚರ್ಯದಿಂದ ಕೇಳಿದ ಸೀತಮ್ಮ ಮತ್ತೆ ಸುವಾಸಿನಿಯನ್ನು ಕಣ್ತುಂಬ ನೋಡಿದರು. ಹೌದು ನಿಜ ಎಂದು ಯಾರೂ ಹೇಳುವ ಅವಶ್ಯಕತೆಯಿರಲಿಲ್ಲ. ರಾತ್ರಿ ಸೀರೆ ಉಡುವಾಗಲೇ "ಇದು ಗಾಂಧಿ, ಸೀರೆ" ಎಂದು ಹೇಳಿದ್ದಳು ಸುವಾಸಿನಿ. ತೊಟ್ಟ ರವಕೆಗೂ ಖಾದಿ ಬಟ್ಟೆ. ಕಿವಿಗೆ ಬೆಂಡೋಲೆ, ಕೊರಳಿಗೆ ಒಂದು ಎಳೆಯ ಚೈನ್, ಕೈಗೆ ಗಾಜಿನ ಬಳೆಗಳನ್ನೂ ಅವಸರ ಅವಸರದಿಂದ ರಾತ್ರಿ ಇಟ್ಟುಕೊಂಡುದುದನ್ನು ಮಸುಕು ದೀಪದ ಬೆಳಕಿನಲ್ಲೇ ಸೀತಮ್ಮ ಕಂಡಿದ್ದರು. "ಇವಳು ಸಾಮಾನ್ಯ ಹುಡುಗಿಯಲ್ಲ. ಬಹಳ ಧೈರ್ಯಶಾಲಿನಿ" ಎಂದು ಮನಸ್ಸಿನಲ್ಲಿ ಅಂದುಕೊಂಡು " ಹೆಂಗಸರಿಗೆ ಪ್ರತ್ಯೇಕ ಜೈಲಿದೆಯಂತೆ ನಿಜವಾ?'' ಎಂದು ಗೂಡಾರ್ಥದ ಪ್ರಶ್ನೆ ಕೇಳಿದರು.

" ಹೌದ್ರೀ. ಸ್ತ್ರೀಯರಿಗೆ ಪ್ರತ್ಯೇಕ ಜೈಲೇ. ಗಂಡಸರನ್ನೂ ಹೆಂಗಸರನ್ನೂ ಒಟ್ಟಿಗಿಟ್ಟರೆ ಜೈಲಲ್ಲಿ ತೊಟ್ಟಿಲನ್ನೂ ಕಟ್ಟಬೇಕಾದೀತು '' ಎಂದು ಕುಲಕರ್ಣಿಯವರು ಸಹಜ ಅಂದರು.

ಸೀತಮ್ಮನವರಿಗೆ ನಗು ಬಂದಿತು. "ನೀವೂ ನನ್ನ ಮಗನಂತೆ ಬಹಳ ಕುಶಾಲ್ ಬಾಯಿ'' ಎಂದು ಹೇಳಿ ಅವರು ಹೊರಟು ಹೋದರು. ಅವರು ಮನೆಯೊಳಗೆ ಮರೆಯಾದ ಮೇಲೆ ಸುವಾಸಿನಿ, "ಅಣ್ಣ, ಹಾಗೆಲ್ಲ ನುಡಿದರೆ ಅವರಿಗೆ ಬೇಸರವಾದೀತು. ವಯೋವೃದ್ಧರ ಮಧ್ಯೆ ವಿನೋದ ಬೇಡ" ಎಂದು ಮುನಿಸು ತೋರಿಸಿದಳು.

"ಬಿಡು ನಿನ್ನ ಒಣ ಉಪದೇಶ. ನಮ್ಮ ತಂದೆಯವರ ವಿನೋದ ಕೇಳಿದರೆ ನೀನೇನನ್ನುತ್ತೀಯೊ! ನಕ್ಕುನಗಿಸುತ್ತಾರೆ'' ಎಂದು ಹರಿ ಉಸುರಿದ.

ಅಷ್ಟರಲ್ಲಿ ತೋಟದೊಳಗಿನಿಂದ ಬಂದ ಗೋವಿಂದರಾಯರು ಹೂಗಳಿಂದ ತುಂಬಿದ್ದ ಹರಿವಾಣವನ್ನು ಸುವಾಸಿನಿಗೊಪ್ಪಿಸಿ, " ಕಟ್ಟಿ ಮುಡಿದುಕೋ ಮಗಳೇ. ಬೇಕಾದಷ್ಟಿವೆ ಇನ್ನೂ. ಕೊಯ್ದು ಕೊಯ್ದು ಪೂರೈಸುವುದಿಲ್ಲ. ಇಲ್ಲಿ

ಯಾರೂ ಮುಡಿಯುವವರಿಲ್ಲ. ಇವನ ತಾಯಿಗೆ ಅದರಲ್ಲೆಲ್ಲ ಇಷ್ಟವಿಲ್ಲ. ನಿನಗೆ ತೃಪ್ತಿಯಾಗುವ ವರೆಗೆ ಮುಡಿದುಕೋ'' ಎಂದು ನುಡಿದರು.

"ಎಷ್ಟು ಹೂವು? ಎಷ್ಟು ಚಂದದ ಹೂಗಳು! ನಾನು ಇಂಥ ಹೂಗಳನ್ನು ಎಂದೂ ನೋಡಿಲ್ಲ.'' ಎಂದು ಸುವಾಸಿನಿ ಹರಿವಾಣದಿಂದ ಒಂದೊಂದೇ ಹೂಗಳನ್ನು ತೆಗೆದು "ಇದು ಯಾವ ಹೂ? ಇದರ ಹೆಸರೇನು!'' ಎಂದು ಹರಿಗೆ ಪ್ರಶ್ನಿಸಿ ತಿಳಿದುಕೊಂಡಳು.

"ಮಾತಿನಲ್ಲೇ ವೇಳೆಗಳೆಯಬೇಡಿರಿ. ಬನ್ನಿ. ಬನ್ನಿ. ಕಾಫಿ ತಣ್ಣಗಾಯ್ತು.'' ಎಂದು ಸೀತಮ್ಮನವರು ಕರೆದುದರಿಂದ ಎಲ್ಲರೂ ಮನೆಯೊಳಗೆ ನುಸುಳಿದರು.

ಪಡಸಾಲೆಯಲ್ಲಿ ಒಬ್ಬೊಬ್ಬರಿಗೊಂದೊಂದರಂತೆ ಮಣೆ, ಲೋಟ, ಸೀಳಿದ ಬಾಳೆಯ ಎಲೆಗಳನ್ನಿಟ್ಟು ಸಜ್ಜುಗೊಳಿಸಿದ್ದರು ಸೀತಮ್ಮ. ಎಲ್ಲರೂ ಕುಳಿತ ಮೇಲೆ ದೋಸೆ ತಂದು ಬಡಿಸಿದರು. ಸುವಾಸಿನಿ ನಿಂತುಕೊಂಡುದುದನ್ನು ಕಂಡು "ನೀನೂ ಕುಳಿತುಕೊಳ್ಳಮ್ಮಾ'' ಎಂದು ಸೀತಮ್ಮನವರು ತಿಳಿಸಿದಾಗ "ಅವರದೆಲ್ಲ ಆಗಲಿ'' ಎಂದುತ್ತರವಿತ್ತಳು. "ಕುಳಿತುಕೋ. ಮತ್ತೆ ತೋಟ ಹೊಳೆಗಳನ್ನೆಲ್ಲ ನೋಡಿ ಬರೋಣ'' ಎಂದು ಹರಿ ಕರೆದ ಮೇಲೆಯೇ ಮಣೆ ಸರಿಸಿ ಕುಳಿತಳು. "ನಮ್ಮ ದೇಶದ ತಿಂಡಿ ತೀರ್ಥ ನಿಮಗೆ ರುಚಿಸುತ್ತದೋ ಇಲ್ಲವೋ?'' ಎಂದು ಗೋವಿಂದರಾಯರು ಉಪಚರಿಸಿದರು. "ನಾವೇನು ರಾಜನ ಹೊಟ್ಟೆಯಲ್ಲಿ ಹುಟ್ಟಿ ಬಂದಿಲ್ಲ. ನಾವೂ ನಿಮ್ಮಂತೆಯೇ. ಜೈಲಿನಲ್ಲಿ ಇಷ್ಟೂ ಸಿಗುತ್ತಿದ್ದಿಲ್ಲ.'' ಎಂದು ಕುಲಕರ್ಣಿಯವರು ಮರ್ಯಾದೆಯ ಮಾತುಗಳನ್ನಾಡಿದರು.

ಜೈಲಿನ ಮಾತು ಬಂದುದರಿಂದ ಗೋವಿಂದರಾಯರ ಕುತೂಹಲ ಕೆರಳಿ, "ಜೈಲಿನಲ್ಲಿ ಏನೇನು ಕೊಡುತ್ತಿದ್ದರು?'' ಎಂದು ಪ್ರಶ್ನಿಸಿದರು.

"ಅಯ್ಯೋ ಜೈಲಿನ ಕಷ್ಟ ದೊಡ್ಡದು. ಮುಂಜಾನೆ ಜೋಳದ ಸಜ್ಜಿಗೆಯ ಗಂಜಿ. ಮಧ್ಯಾಹ್ನ ಒಣಗಿದ ಎರಡು ರೊಟ್ಟಿ. ಅರ್ಧ ಕಪ್ ಬಾಜಿ. ರಾತ್ರಿಗೂ ಅಷ್ಟೆ. ಆದಿತ್ಯವಾರಕ್ಕೊಮ್ಮೆ ಗೋದಿಯ ಚಪಾತಿ, ಅರ್ಧ ಮುಷ್ಟಿ ಬೆಲ್ಲ.''

"ಅನ್ನವಿಲ್ಲ?"

"ಹಲ್ಲಿಲ್ಲದವರಿಗೆ, ಜಪ್ತು ಬಂದವರಿಗೆ ಅನ್ನ

“ ಮಜ್ಜಿಗೆ ಇಲ್ಲ ? ”

“ ಮಜ್ಜಿಗೆ ಕನಸಿನಲ್ಲೇ ಸರಿ.

“ಹೇಗಿದ್ದಿರಪ್ಪಾ ಅಷ್ಟು ಕಾಲ ಅದನ್ನು ಕುಡಿದು? ಅದಕ್ಕೇ ಹರಿ ಇಷ್ಟು ಬಡವಾಗಿದ್ದಾನೆ” ಎಂದು ಸೀತಮ್ಮನವರು ನೊಂದು ನುಡಿದರು.

“ ಜೈಲಿನಿಂದ ಬಂದಾಗ ಇದಕ್ಕಿಂತಲೂ ಕಡೆ ಇದ್ದೆ. ಇವರ ಮನೆಗೆ ಬಂದ ಮೇಲೆ ಬಿಡಲೇ ಇಲ್ಲ. ಇವರ ತಾಯಿ ತಂದೆ ಬಹಳ ಒಳ್ಳೆಯವರು. ಎಷ್ಟು ದಿನ ಇದ್ದರೂ ಅವರಿಗೆ ತೃಪ್ತಿಯಿರಲಿಲ್ಲ. ಹೊರಡುತ್ತೇನೆಂದಾಗ ಅಳು ಬಚ್ಚಿಡುತ್ತಿದ್ದರು. ” ಎಂದು ಹರಿ ವರ್ಣಿಸಿದ. ಸುವಾಸಿನಿಯ ಮೋರೆ ತಾವರೆಯಷ್ಟು ಅಗಲವಾಯಿತು.

“ಅವರನ್ನೂ ನಾಲ್ಕು ದಿನದ ಮಟ್ಟಿಗೆ ಕರೆದುಕೊಂಡು ಬರಬಹುದಿತ್ತಲ್ಲ ಮಗನೇ. ಧರ್ಮಸ್ಥಳ, ಉಡುಪಿ ನೋಡುತ್ತಿದ್ದರು” ಎಂದು ಗೋವಿಂದರಾಯರು ವಿಷಾದಪಟ್ಟರು.

“ ನಿಮ್ಮೆಲ್ಲರ ಗುರುತು ಪರಿಚಯವಾಯಿತಲ್ಲ. ಇನ್ನೊಮ್ಮೆ ಬಂದಾಗ ಮರೆಯುವುದಿಲ್ಲ” ಎಂದು ಕುಲಕರ್ಣಿಯವರು ಭರವಸೆಕೊಟ್ಟರು.

ಮಾತಿನಲ್ಲೇ ಒಂದೊಂದು ತುತ್ತು ಬಾಯಿಗೆ ಹೋಯಿತು. ಒಂದೊಂದೇ ದೋಸೆ ತಂದು ಹಾಕಿದರು ಸೀತಮ್ಮ. ಒಮ್ಮೆ ಸಿಹಿ ಅವಲಕ್ಕಿ, ಮತ್ತೊಮ್ಮೆ ಉಪ್ಪಿನ ಕಾಯಿರಸ, ಕೊನೆಗೆ ಮೊಸರನ್ನು, ಸುರಿಯುತ್ತ ಬಂದರು. ಬೇಡ ಬೇಡವೆಂದರೆ ಕೇಳಲಾರರು. “ಏನು ನಿಮಗೆ ದಾಕ್ಷಿಣ್ಯವಾ?” ಎಂದು ಸೀತಮ್ಮನವರೊತ್ತರಿಸೆ, “ನಮ್ಮ ಹಳ್ಳಿಯಲ್ಲಿ ರೇಶನಿಲ್ಲ. ನೀವು ಏನೂ ಗಾಬರಿಯಾಗಬೇಡಿರಿ” ಎಂದು ಗೋವಿಂದರಾಯರು ನುಡಿದು “ನಿಮ್ಮಲ್ಲೂ ರೇಶನ್ ಇದೆಯಾ?” ಎಂದು ಕೇಳಿದರು.

‘ಎಲ್ಲ ಕಡೆ ರೇಶನ್ ಇದೆ ಪಟ್ಟಣಗಳಲ್ಲಿ”

‘ಕೊಡುವ ಅಕ್ಕಿ ಸಾಲುತ್ತದಾ?”

‘ಎಲ್ಲಿಗೆ ಸಾಕಾಗುತ್ತದೆ? ಮಕ್ಕಳಿಗೂ ಹೊಟ್ಟೆ ತುಂಬುವುದಿಲ್ಲ. ಬ್ಲೇಕ್ ಮಾರ್ಕೆಟ್ಟೇ ಗತಿ.”

“ಅಲ್ಲಿಯೂ ಬ್ಲೇಕ್ ಮಾರ್ಕೆಟ್ಟಿದೆಯಾ?”

ಇದೇನೂ ಎಂದು ಕೇಳುತ್ತೀರಾ? ಎಲ್ಲಿ ರೇಶನ್, ಕಂಟ್ರೋಲ್‌ಗಳಿವೆಯೋ ಅಲ್ಲಿ ಕಳ್ಳಸೇಟಿ ಉಂಟೇ ಉಂಟು. ಯಾರು ಮಾಡದವರು ಬ್ಲೇಕ್ ಮಾರ್ಕೇಟ್? ರಾತ್ರಿ ಬೆಳಗಾಗುವುದರೊಳಗೆ ಕುಬೇರರಾಗಲು ಅವಕಾಶ ದೊರೆತರೆ ಯಾರು ಬಿಡುತ್ತಾರೆ? ಹಳ್ಳಿ ರೈತರಿಂದ ಹಿಡಿದು ಲಕ್ಷಾಧೀಶರವರೆಗೆ ಅದೇ ಕೆಲಸದಲ್ಲಿ ಉದ್ಯುಕ್ತರಾಗಿದ್ದಾರೆ.''

"ಕೆಟ್ಟು ಹೋಯ್ತು! ಕೆಟ್ಟು ಹೋಯ್ತಪ್ಪಾ ನಮ್ಮ ದೇಶ! ಯುದ್ಧ ಕಾಲದಲ್ಲಿ ನಮ್ಮ ಜನ ನೀತಿಗೆಟ್ಟರು. ನಮ್ಮ ಉದ್ಧಾರ ಹೇಗಾದೀತೋ, ಆ ಪರಮಾತ್ಮನೇ ಬಲ್ಲ. ಸ್ವರಾಜ್ಯ ದೊರೆತ ಮೇಲೆ ಕಾಂಗ್ರೆಸ್ಸಿನವರು ಏನಾದರೂ ಸುಧಾರಿಸಿದರೆ ಸುಧಾರಿಸಬೇಕು. ಇಲ್ಲದಿದ್ದರೆ ನಮ್ಮ ದೇಶಕ್ಕೆ ಇದಕ್ಕಿಂತಲೂ ಅಧೋಗತಿಯೇ ಸರಿ".

"ಅಪ್ಪಯ್ಯ, ಕಾಂಗ್ರೆಸ್ಸಿನವರೇನು ಪರಿಶುದ್ಧರಾಗಿಯೇ ಉಳಿದಿಲ್ಲ ಅವರಿಗೂ ರೋಗ ತಾಗಿದೆ'' ಎಂದು ನಡುವೆ ಮಗ ಬಾಯಿ ಹಾಕಿದ.

"ಹೌದಾ ಮಗನೇ? ಹೌದಾ?"

"ಹೌದು. ಅವನ್ನು ಹೇಳಲಳವಲ್ಲ. ಮೇಲೆ ಉಗುಳಿದರೆ ನಮ್ಮ ಮೋರೆಗೇ ಬೀಳುತ್ತದೆ. ಗಾಂಧೀಜಿ ಕೇಳಿದರೆ ಎದೆಯೊಡೆದುಕೊಂಡಾರು. ಚಳವಳಿ ಆರಂಭವಾದ ಕೂಡಲೇ ಅನೇಕ ಕಾಂಗ್ರೆಸ್ಸಿಗರೂ ರೈಲ್ವೆ ಸ್ಟೇಶನ್ ಸುಟ್ಟರು. ಟಪ್ಪಾಲು ಬಸ್ ನಿಲ್ಲಿಸಿ ಚೀಲಗಳನ್ನು ಒಡೆದರು. ಆಗ ದೊರೆತ ಹಣವನ್ನೆಲ್ಲ ಕೆಲವರು ಬಗಲಿಗೆ ಹಾಕಿಕೊಂಡು ಹಂಚಿಕೊಂಡರೆಂದು ಜನ ಅನ್ನುತ್ತಿದ್ದಾರೆ. ಕೆಲವರು ಮುಂಬಯಿ, ದಿಲ್ಲಿ,ಅಹ್ಮದಾಬಾದ್‌ಗಳ ದೊಡ್ಡ ದೊಡ್ಡ ಶೇಟ್‌ಗಳಿಂದ ಚಳವಳಿ ನೆವಹೇಳಿ ಹತ್ತು ಸಾವಿರ ೨೦ ಸಾವಿರ ನಿಧಿ ತಂದು ಅದರ ಬಹ್ವಂಶವನ್ನು ತಿಂದು ತೇಗಿದುದೂ ಇದೆ. ಇನ್ನು ಬ್ಲೇಕ್ ಮಾರ್ಕೆಟಿನ ವಿಷಯ! ಅದನ್ನು ಮಾಡದ ಕಾಂಗ್ರೆಸ್ ವ್ಯಾಪಾರಿಗಳೇ ಇಲ್ಲ."

"ಬೇಲಿಯೇ ಹೊಲ ಮೇಯಲು ಆರಂಭಿಸಿದರೆ ಇನ್ನೇನು ಗತಿ? ನಾಳೆ ಸ್ವರಾಜ್ಯ ದೊರೆತ ಮೇಲೆ ಇವರು ಆಳುವ ಬಗೆ ಹೇಗೆ?"

"ಅಪ್ಪಯ್ಯ, ಸ್ವರಾಜ್ಯ ಲಭಿಸಿದ ಮೇಲೆ ಸ್ವಲ್ಪಕಾಲದ ವರೆಗೆ ಪರಿಸ್ಥಿತಿ ಭೀಕರ ಸ್ವರೂಪ ತಾಳಲುಂಟು. ಕಾಂಗ್ರೆಸ್ಸಿನವರೇ ತಂತಮ್ಮೊಳಗೆ ಅಧಿಕಾರಕ್ಕಾಗಿ ಬಡಿದಾಡಲುಂಟು. ಒಬ್ಬನನ್ನು ಮತ್ತೊಬ್ಬ ಕಡೆಗಣಿಸುತ್ತಾನೆ.

ಬ್ಲೇಕ್ ಮಾರ್ಕೆಟ್ ಮಾಡುವವರಂತೂ ಗಾಂಧಿ ಟೊಪ್ಪಿಗೆ ಇಟ್ಟುಕೊಂಡು ಹಗಲು ದರೋಡೆ ಮಾಡಲುಂಟು. ಇದೊಂದಲ್ಲ. ಇದರಂತೆ ಪಾಕಿಸ್ತಾನ ಪ್ರಶ್ನೆ, ಸಂಸ್ಥಾನಿಕರ ಪ್ರಶ್ನೆ, ಜಾತಿ-ಜಾತಿ ದ್ವೇಷ ಮೊದಲಾದ ನೂರಾರು ಸಮಸ್ಯೆಗಳಿವೆ. ಬಹಳ ಕಷ್ಟಗಳು ಬರಲಿವೆ."

"ಈ ಸಮಸ್ಯೆಗಳನ್ನು ಹೇಗೆ ನಿವಾರಿಸುತ್ತೀರಿ?"

"ನಿವಾರಿಸುತ್ತಾರೆ. ನಿವಾರಿಸದೆ ಗತ್ಯಂತರವಿಲ್ಲ. ನಿವಾರಿಸಲೇ ಬೇಕು ಕಷ್ಟಗಳಿವೆಯೆಂದು ಬಿಟ್ಟುಬಿಡಲಿಕ್ಕಾಗುವುದಿಲ್ಲ. ಸ್ವಲ್ಪಕಾಲದ ವರೆಗೆ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. "ಸ್ವಲ್ಪ ಸಮಯದ ವರೆಗೆ ಅನಾಯಕತ್ವವಾದರೂ ಚಿಂತಿಲ್ಲ. ಸ್ವರಾಜ್ಯ ಬೇಕು ನಮಗೆ" ಎಂದು ಗಾಂಧೀಜಿ ಹಿಂದೊಮ್ಮೆ ಹೇಳಿದ್ದರು. ಬರಲಿ. ಬರುವುದೆಲ್ಲ ಬರಲಿ. ಗೋವಿಂದನ ದಯೆಯೊಂದಿರಲಿ"

"ಗೋವಿಂದನ ದಯೆಯೊಂದಿರಲಿ" ಎಂದಾಗ ಸುವಾಸಿನಿಗೆ ನಗು ಬಂದಿತು. ಮತ್ತೆ ಎಲ್ಲರೂ ನಕ್ಕು ಕೈತೊಳೆಯಲೆದ್ದರು. ಬಿಸಿನೀರಿನ ಕೊಟ್ಟಿಗೆಗೆ ತೆರಳಿದವರು ಅಲ್ಲಿಂದಲೇ ಕೃಷಿ ಪರಾಂಬರಿಸಲಾರಂಭಿಸಿದರು. ಗೋವಿಂದ ರಾಯರು ಕಸಿಗಿಡಗಳನ್ನು ತೋರಿಸಿ, "ಇದು ಮುಂಡಪ್ಪ, ಇದು ನೀಲಂ, ಇದು ತಳಿಂಬರಂ, ಇದು ಗಿಳಿಮೂಗು, ಇದು ಬಹಳ ರುಚಿ, ಈ ತೋತಾಪುರಿ ಉಪ್ಪಿನಕಾಯಿಗೆ ಬಹಳ ಪಸಂದ" ಎಂದು ಒಂದೊಂದನ್ನೇ ತಿಳಿಸಿದರು. ಅಲ್ಲಿಂದ ಕಂಗಿನ ತೋಟದೊಳಗೆ ಸುಳಿದರು. ಒಂದೊಂದೇ ಸೋಗೆ ಕಳಚಿ ಬಿದ್ದು ಬೆಳೆದ ಕಂಗುಗಳು ಮನುಷ್ಯನಿಗಿಂತ ಎತ್ತರವಾಗಿದ್ದುವು. ಒಂದೆರಡು ಕಂಗುಗಳಲ್ಲಿ ಹಿಂಗಾರ ಒಡೆದು ಅಕ್ಕಿಯ ಕಣಗಳಂತೆ ಅವರ ಹುಸಿ ಹೂಗಳು ನೆಲಕ್ಕೆ ಬಿದ್ದಿದ್ದುವು. ಒಂದು ತಾಳೆಯ ಮರಕ್ಕೂ ಕೊಂಬು ಬಂದಿತ್ತು. ಅದರ ಬುಡದಲ್ಲಿ ಬಿದ್ದಿದ್ದ ಹೂಗಳನ್ನು ಸುವಾಸಿನಿ ಹೆಕ್ಕಿ ಕೊಳ್ಳಲು ಬಗ್ಗಿದಳು ಅವನ್ನು ಕಂಡ ಗೋವಿಂದರಾಯರು, "ಸುವಾಸಿನೀ, ಏನು ಹೆಕ್ಕುತಿದ್ದೀ? ನನ್ನ ತೋಟಕ್ಕೆ ಬಂದ ಕೂಡಲೇ ನಿನ್ನ ಕೈಬೆರಳುಗಳ ಉಗುರುಗಳು ಉದುರಿಬಿದ್ದುವೋ ಏನು?" ಎಂದು ಹೇಳಿ ಎಲ್ಲರನ್ನೂ ನಗಿಸಿದರು. ಮತ್ತೊಮ್ಮೆ "ಅಹಾ, ತೋಟದಲ್ಲಿ ಏನು ಸುವಾಸನೆ! ಎಂಥ ಗಮ್ಮನೆ ಪರಿಮಳ. ಇದು ತೋಟವಲ್ಲ ನಂದವನ" ಎಂದು ಕುಲಕರ್ಣಿಯವರೆಂದು

ದನ್ನು ಆಲಿಸಿ, "ಇದು ಸುವಾಸಿನಿಯ ಮಲ್ಲಿಗೆ. ಅವಳು ಕಾಲಿಟ್ಟುದುದೇ ತಡ, ತೋಟವೆಲ್ಲ ಸುವಾಸನೆಯಿಂದ ತುಂಬಿತು." ಎಂದು ಹೇಳಿ ಅವರನ್ನು ಆಹ್ಲಾದಗೊಳಿಸಿದರು. ತಾಳೆಯ ಗರಿಗಳಲ್ಲಿ ಚೀಂ ಚೀಂ ಅರಚುತ್ತಿದ್ದ ಹಕ್ಕಿಗಳ ಕಡೆ ಕೈ ನೀಡಿ 'ಇದು ತಾಳೆಯ ಗುಬ್ಬಿ" ಎಂದರು. ಕೆಂಪು ಬಣ್ಣದ ಕಾಗೆಗಿಂತ ದೊಡ್ಡ ಪಕ್ಷಿ ಹಾರಿದೊಡನೆಯೇ, "ಇದು ಕುಪ್ಪುಳು ಹಕ್ಕಿ. ಕುಳ್ ಕುಳ್" ಎಂದು ಕೂಗುತ್ತದೆಯೆಂದರು. ಹೊಳೆಯ ದಡಕ್ಕೆ ಕರೆದು ಕೊಂಡು ಬಂದು ಮಳೆಗಾಲದ ಅವತಾರವನ್ನು ವಿವರಿಸಿದರು. ಬೇಸಿಗೆಗೆ ಕಟ್ಟ ಕಟ್ಟುವ ಕತೆಯನ್ನು ಹೇಳಿದರು. ನೇತ್ರಾವತಿ ದಂಡೆಯ ಬಳಿಯಿದ್ದ ಒಂದು ಬಂಡೆಗಲ್ಲನ್ನು ಏರಿ, "ಇಕೊಳ್ಳಿ. ಹರಿ ಇಲ್ಲಿದ್ದಾಗ ಇದರಲ್ಲೇ ಕುಳಿತು ಓದುತ್ತಿದ್ದ. ಅದನ್ನು ಕಂಡೊಡನೆಯೇ ಅವನ ನೆನಪಾಗುತ್ತದೆ ನನಗೆ. ಅದಕ್ಕೆ ಹರಿ ಶಿಲೆಯೆಂದೇ ಹೆಸರಿಟ್ಟಿದ್ದೇನೆ." ಎಂದು ತಿಳಿಸಿದರು. ಸುವಾಸಿನಿ ಹರಿ ಕಡೆ ನೋಡಿ ಮುಗುಳು ನಕ್ಕಳು. ಅಲ್ಲಿಂದ ಹೊರಳಿ ಮನೆಗೆ ಬಂದ ಮೇಲೂ ಗೋವಿಂದರಾಯರು ಸುಮ್ಮಗಿರಲಿಲ್ಲ. "ಹೊಳೆಗೆ ಕಟ್ಟಿದ್ದ ಕಟ್ಟ ನೋಡಿ ಬರೋಣ" ವೆಂದರು. ಕುಲಕರ್ಣಿಯವರು ಒಲ್ಲೆನ್ನದೆ ಹೊರಟರು. ಹರಿಗೆ ಅದು ಹೊಸತಲ್ಲ. ಆದುದರಿಂದ ಅವನು ಮನೆಯಲ್ಲೇ ಉಳಿದ. ಸುವಾಸಿನಿ ಹೂಗಳನ್ನು ಹೆಣೆಯುತ್ತ ಕುಳಿತಳು.

ಕಟ್ಟ ಕಾಣಲು ಹೋದವರು ಮರಳಿದಾಗ ಮಧ್ಯಾಹ್ನದ ಊಟ ಸಿದ್ಧವಾಗಿತ್ತು. ಊಟ ತೀರಿಸಿ ಮಲಗಿದವರು ಕಾಫಿ ಹೊತ್ತಿಗೇ ಎದ್ದರು. ಮತ್ತೆ ಅತ್ತಿತ್ತ ತಿರುಗಿದಾಗ ಸಂಜೆಯೂ ಆಯ್ತು. ಕತ್ತಲಾದೊಡನೆಯೇ ದೇವರಿಗೆ ದೀಪ ಹಚ್ಚಿ ಶಂಖ ಊದುವುದು ಸೀತಮ್ಮನವರ ನಿತ್ಯಕ್ರಮ. ಶಂಖದ ಧ್ವನಿ ಕೇಳಿ ಗೋವಿಂದರಾಯರೂ ಬಂದು ಮಣೆಯ ಮೇಲೆ ಕುಳಿತು ಧ್ಯಾನ ಮಗ್ನರಾಗುವರು. ಇಂದು ಸುವಾಸಿನಿ, ಹರಿ, ಕುಲಕರ್ಣಿಯವರೂ ಬಂದು ಕುಳಿತು ಗಾಂಧೀಜಿಯವರಿಗೆ ಬಹಳ ಪ್ರಿಯವಾಗಿದ್ದ "ಯಂ ಬ್ರಹ್ಮಾವರುಣೇಂದ್ರ ಮರುತಃ ಸ್ತುನ್ವಂತಿ ದಿವ್ಯೈಃ ಸ್ತವೈಃ...."ಸಾಯಂ ಪ್ರಾರ್ಥನೆಯನ್ನು ಆರಂಭಿಸಿ, ಭಗವದ್ಗೀತೆಯ ಎರಡನೇ ಅಧ್ಯಾಯದ ಕೊನೆಯ ಭಾಗವನ್ನು ಆರಿಸಿಕೊಂಡು "....ಸ್ಥಿತ ಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ...." ಇಂದ "ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ...."ಗೆ

ಶಾಂತ್ಯಗೊಳಿಸಿದರು. ಅವರೊಂದಿಗೆ ಗೋವಿಂದರಾಯರೂ ಕೂಡಿಕೊಂಡುದುದ ರಿಂದ ಕುಲಕರ್ಣಿಯವರಿಗೆ ಬಹಳ ಆಶ್ಚರ್ಯವಾಯಿತು. ಶ್ಲೋಕ ಮುಗಿದ ಮೇಲೆ, "ನಮ್ಮ ಜೈಲಿನ ಪ್ರಾರ್ಥನೆ ನಿಮಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದರು. ಗೋವಿಂದರಾಯರು ಮುಗುಳು ನಕ್ಕು, "ಮಳೆಗಾಲಕ್ಕೆ ನಮಗೆ ಇದೂ ಒಂದು ಜೈಲೇ. ಹೊತ್ತೂ ಹೋಗುತ್ತಿದ್ದಿಲ್ಲ. ಆಗ ಗೀತೆ ಯನ್ನೂ ಓದಲು ಆರಂಭಿಸಿದೆ. ಈಗ ಆದಿಯಿಂದ ಅತ್ಯಂದ ವರೆಗೆ ಬಾಯಿಗೆ ಬರುತ್ತದೆ" ಎಂದು ನುಡಿದು, "ನೀವು ಸೆರೆಮನೆಯಲ್ಲಿ ಪ್ರಾರ್ಥನೆ ಸಲ್ಲಿಸುತಿ ದ್ದುದನ್ನು ಕೇಳಿ ನನಗೆ ಪರಮಾನಂದವಾಯಿತು. ಇನ್ನೂ ಒಂದೆರಡು ಹಾಡು ಹೇಳಿ. ನಾನು ಕೇಳುತ್ತೇನೆ. ದೇವರ ನಾಮ ಕೇಳಿದಷ್ಟು ಇನ್ನೂ ಕೇಳಬೇಕೇ ದಾಸೆಯಾಗುತ್ತದೆ ನನಗೆ" ಎಂದರು.

ಕುಲಕರ್ಣಿಯವರು, 'ರಘುಪತಿ ರಾಘವ ರಾಜಾರಾಂ। ಪತಿತ ಪಾವನ ಸೀತಾರಾಮ॥" ಪದ ಹಾಡಿದರು. "ಶ್ರೀ ರಾಘವಂ ದಶರಥಾತ್ಮಜ ಮಪ್ರ ಮೇಯಂ" ಚಿಟುಕು ಶ್ಲೋಕದಲ್ಲಿ ರಾಮಾಯಣ ಕಥಾ ವಿಸ್ತಾರವನ್ನು ಅರು ಹಿದ ಹರಿ. "ನೀನೂ ಒಂದು ಹೇಳು ಮಗಳೇ. ನಿನ್ನ ಕಂಠ ಬಹಳ ಮಧುರ ವಾಗಿದೆ" ಎಂದು ಸುವಾಸಿನಿಯ ಕಡೆ ನೋಡಿ ಗೋವಿಂದರಾಯರು ನುಡಿದರು. ಸುವಾಸಿನಿ ಬೆಡಗು ಬಿನ್ನಾಣಗಳನ್ನು ಮಾಡಿ ಮುದುಡಿಕೊಳ್ಳದೆ ಒಂದು ಹಿಂದೀ ಹಾಡನ್ನು ಹಾಡಿದಳು. ಗೋವಿಂದರಾಯರಿಗೆ ಪೂರ್ಣ ತಿಳಿಯಲಿಲ್ಲ. ಆದುದ ರಿಂದ ಹರಿ ಅರ್ಥ ವಿವರಿಸಿದ.

"ರಾಧೆ ಶ್ರೀ ಕೃಷ್ಣ ಪರಮಾತ್ಮನ ವಿರಹವನ್ನು ತಾಳಲಾರದೆ ಭಾವ ಪರವಶಳಾಗಿ ಅವನಿಗೆ ಮೊರೆ ಇಡುತ್ತಿದ್ದಾಳೆ. ಕೃಷ್ಣಾ, ಏ ಕೃಷ್ಣಾ, ನೀನೆಲ್ಲಿ ರುವೆ? ಎಲ್ಲಿ ಹೋಗಿರುವಿ? ನಿನ್ನ ಕೊಳಲಿನ ಮಂಜುಳ ಗಾನ. ಕಿವಿ ಯಲ್ಲಿ ಇನ್ನೂ ಪ್ರತಿಧ್ವನಿಸುತ್ತದೆ. ಎನ್ನ ಹೃದಯದ ವೀಣೆ ಇನ್ನೂ ಮಿಡಿ ಯುತ್ತಿದೆ. ದುಃಖದ ತಾನಗಳೇ ಏಕೆಂದು ನನ್ನನ್ನು ಪರಿಕಿಸುತ್ತೀಯಾ? ನಿನ್ನ ವಿರಹಕ್ಕಿಂತ ಅತಿಶಯವಾದ ದುಃಖವೇ ಇನ್ನೊಂದಿಲ್ಲ. ಅದು ಮರಣಕ್ಕಿಂತಲೂ ಭೀಕರವಾದುದು. ನಿನ್ನನ್ನಗಲಿ ಬದುಕಲಾರೆ. ನೀನಿಲ್ಲದ ಈ ಪ್ರಾಣ ತೃಣ ಸಮಾನ. ನಿನ್ನ ದರುಶನದಿಂದ ನನ್ನ ಎದೆ ಕಮಲದಂತೆ ಅರಳುತ್ತದೆ.

ಇನ್ನು ತಡೆಯುಬೇಡ. ಇದೋ, ಇಲ್ಲದಿದ್ದರೆ ಈ ಕಮಲದ ಹೂಗಳಿಂದ ತುಂಬಿರುವ ಈ ಕೊಳದಲ್ಲೇ ಈ ಹೂವು ಮುಳುಗಿ ಬಿಡುತ್ತದೆ. ''

ಗೋವಿಂದರಾಯರು ರಾಧೆಯ ಈ ಭಕ್ತಿಗೆ ಮೆಚ್ಚಿ ತಾವೂ ಭಕ್ತಿಭಾವ ಪರವಶರಾದರು. ಸ್ವಲ್ಪ ಹೊತ್ತು ಮುಚ್ಚಿದ ಕಣ್ಣೆವೆಗಳನ್ನು ತೆರೆಯಲಿಲ್ಲ. "ಇನ್ನೊಂದು ಹಾಡಮ್ಮಾ'' ಎಂದು ಕಣ್ಣುಗಳನ್ನು ತೆರೆಯದೆನೇ ಅವರು ಬೇಡಿಕೊಂಡರು. ಸುವಾಸಿನಿ ಮಾತ್ರ ಸ್ವಲ್ಪ ಮೋರೆ ತಿರುಗಿಸಿದಳು. ಹಾಗೆ ತಿರುಗಿಸಿದಾಗ ಮೆಲ್ಲಗೆ ಸೆರಗಿನಿಂದ ಕಣ್ಣುಗಳನ್ನೊರಸಿ ಕೊಂಡುದುದನ್ನು ಸೀತಮ್ಮನವರು ಕಂಡರು. ಆಗ ಮಿಂಚಿನಂತೆ ಏನೋ ಒಂದು ವಿಚಾರ ಅವರ ಮನಸ್ಸಿನ ಮೇಲೆ ಬೆಳಕು ಬೀರಿತು. "ಸಾಕು. ಇನ್ನು ಊಟಕ್ಕೇಳಿ'' ಎಂದು ಅವರು ಎಲ್ಲರನ್ನೂ ಎಬ್ಬಿಸಿದರು.

ಸೀತಮ್ಮನವರಿಗೆ ಹೊಳೆದ ಆ ಒಂದು ಭಾವವನ್ನು ಅವರು ಹೊರಗೆಡವಲಿಲ್ಲ. ತಮ್ಮ ಎದೆಯ ಗೂಡಿನೊಳಗೇ ರಹಸ್ಯವಾಗಿಟ್ಟುಕೊಂಡರು. ಅವರ ನಡೆನುಡಿಯಲ್ಲಿ ಯಾವ ವ್ಯತ್ಯಾಸವೂ ತೋರಿ ಬರಲಿಲ್ಲ. ಆದರೆ ಸುವಾಸಿನಿಯ ನಡೆನುಡಿಯ ಕಡೆ ಬಹಳ ಸೂಕ್ಷ್ಮ ದೃಷ್ಟಿ ಬಿದ್ದಿತು. ದಿನಗಳೆದಂತೆ ಅವರಿಗೆ ಒಂದೊಂದು ಹೆಚ್ಚು ಅರ್ಥವಾಗತೊಡಗಿತು. ಒಂದಕ್ಕೊನ್ನೊಂದರ ಸಂಬಂಧವನ್ನೂ ಅವರು ಹೆಣೆದರು. ಹರಿಯ ಧನಿ ಕೇಳಿದೊಡನೆಯೇ ಅವಳು ಮುಗುಳು ನಗುವಳು. ಅವನು ಬಂದಾಗ ಮೋರೆ ಅರಳುವುದು. ಅವನು ಮನೆಯಲ್ಲಿಲ್ಲದಿದ್ದರೆ ಮೊಗ ಸಪ್ಪಗೆಯಾಗುತ್ತದೆ. ಅವರೆಲ್ಲರ ಊಟವಾದ ಮೇಲೆಯೇ ತನ್ನೊಂದಿಗೆ ಊಟಕ್ಕೆ ಕುಳಿತುಕೊಳ್ಳುವಳು. ಅಣ್ಣನಿಗೆ ಚಾಪೆ ಹಾಸಿದಾಗ ಹರಿಗೂ ಹಾಸಿಕೊಡುವಳು. ಹರಿಯೂ 'ಸುವಾಸಿನೀ, ಸುವಾಸಿನೀ'' ಎಂದು ದಿನಕ್ಕೆ ನೂರು ಸಲ ಕರೆಯುತ್ತಾನೆ. "ತಣ್ಣೀರು ಕುಡಿಯಬೇಡ. ಜ್ವರ ಬಂದರೆ ನಾನು ಜವಾಬ್ದಾರನಲ್ಲ'' ಎಂದು ಪದೇ ಪದೇ ಎಚ್ಚರಿಸುತ್ತಾನೆ. ಅವಳ ಕಡೆ ನೋಡಿದಾಗ ಅವನ ದೃಷ್ಟಿಯಲ್ಲೂ ಬಹಳ ಅಂತಃಕರುಣ ತುಂಬಿರುತ್ತದೆ. ಅವಳ ಮಾತನ್ನು ಮೀರ ಅಲಕ್ಷಿಸಲಾರ. ಒಂದು ದಿನ ಅದು ಸೀತಮ್ಮನವರಿಗೆ ಚೆನ್ನಾಗಿ ಮನವರಿಕೆಯಾಯಿತು. "ಅವರೆಲ್ಲ ಎಣ್ಣೆ ಹಚ್ಚಿಕೊಂಡರು. ನೀನು ಅಭ್ಯಂಗನ ಮಾಡು. ತಲೆ ಜಟಾಧರನಂತಾಗಿದೆ'' ಎಂದು ಎಣ್ಣೆ ತಂದು ಕೊಟ್ಟರೆ, ಬೇಡಮ್ಮ. ನಾಳೆ ನೋಡೋಣ. ಈ

ಹೊತ್ತು ಅವಳಿಲ್ಲಿ ಸ್ನಾನ ಮಾಡಲಿ'' ಎಂದ. ಸೀತಮ್ಮನವರು ಸುವಾಸಿನಿಯ ಕೈಯಲ್ಲಿ ಕೊಟ್ಟು "ನೀನಾದರೂ ಹೇಳಮ್ಮಾ. ನನ್ನ ಮಾತು ಕೇಳುವುದಿಲ್ಲ" ಎಂದು ಕಳಿಸಿದರು. ಆ ಮೇಲೆ ಸದ್ದಿಲ್ಲದೆ ತಲೆಗೆ ಹಾಕಿ ತಿಕ್ಕಿ ಕೊಂಡ. ಇಷ್ಟಾ ದರೂ ಸೀತಮ್ಮನವರಿಗೆ ಉಚಿತವಾಗಲಿಲ್ಲ. ಏಕೆಂದರೆ ಅವರಿಬ್ಬರೇ ಇದ್ದಾಗ ಒಮ್ಮೆಯಾದರೂ ಗುಸು ಗುಸು ಮಾತನಾಡಲಿಲ್ಲ. ಒಬ್ಬರನ್ನೊಬ್ಬರು ಕದ್ದು ಮುಚ್ಚಿ ನೋಡಲು, ಭೆಟ್ಟಿಯಾಗಲು ಬಯಸಿ ನಡೆದುದಿಲ್ಲ. ಯಾರು ಇರಲಿ, ಇಲ್ಲದಿರಲಿ ಗಟ್ಟಿಯಾಗಿಯೇ ಮಾತನಾಡುವರು. ಕುಶಾಲ್ ಆಡು ವರು. ಹರಟೆ ಹೊಡೆಯುವರು. ಗುಟ್ಟು ಗುಪ್ತ ವ್ಯವಹಾರವೇ ಇರಲಿಲ್ಲ. ಆವನ್ನು ನೆನೆದಾಗ "ಇಗಲಿಕ್ಕಿಲ್ಲ" ಎಂದೊಮ್ಮೆ ಮನಸ್ಸಿನೊಳಗೆ ಅಂದು ಕೊಳ್ಳುವರು. ಆದರೂ ಪರೀಕ್ಷೆ ಮಾಡಬೇಕೆಂದು ನಿರ್ಧರಿಸಿ ಒಂದು ದಿನ ಸುವಾಸಿನಿಯೊಬ್ಬಳೇ ಇದ್ದಾಗ, " ಸುವಾಸಿನೀ, ನೀವು ಊರಿಗೆ ಹೋದ ಮೇಲೆ ನಮ್ಮ ಹರಿಯ ಲಗ್ನಕ್ಕೆ ಅಗತ್ಯ ಬರಬೇಕು. ಎಂಟು ದಿವಸಗಳ ಮೊದಲೇ ಪತ್ರ ಹಾಕುತ್ತೇವೆ. ಮಂಗಳೂರಿನ ಒಂದು ಹೆಣ್ಣು ನೋಡಿದ್ದಾರೆ. ಜಾತಕಗಳೆಲ್ಲ ಕೂಡಿ ಬರುತ್ತವೆ. ಐದು ಸಾವಿರ ರೂಪಾಯಿ ವರದಕ್ಷಿಣೆ ಯನ್ನೂ ಕೊಡುತ್ತಾರಂತೆ. " ಎಂದು ಒರೆಗಲ್ಲಿಗೆ ನಾಣ್ಯವನ್ನು ತಿಕ್ಕಿದರು.

ಈ ಒಂದೊಂದು ಮಾತು ಒಂದೊಂದು ಬಾಣದಂತೆ ನೆಟ್ಟಿತು ಸುವಾ ಸಿನಿಯ ಎದೆಗೆ. ಸಹಿಸಲಾರದ ವೇದನೆಯಾದುದುದನ್ನು ಅವಳ ಕಳೆಗುಂದಿದ ಮೋರೆಯ ಭಾವದಿಂದಲೇ ಸೀತಮ್ಮನವರು ಅರ್ಥಮಾಡಿಕೊಂಡರು. ಸುವಾ ಸಿನಿ ಏನೋ ನೆವ ಹೇಳಿ ಎದ್ದು ಅಡಿಗೆ ಮನೆಯಿಂದ ಪಡಸಾಲೆಗೆ ಬಂದಳು. ಅಲ್ಲಿಂದ ಮುಖಮಂಟಪಕ್ಕೆ ಕಾಲಿಟ್ಟಳು. ಅಲ್ಲಿಯೂ ನಿಲ್ಲದೆ ಅಂಗಳಕ್ಕೆ, ಅಂಗಳದಿಂದ ತೋಟಕ್ಕೆ, ತೋಟದಿಂದ ಹೊಳೆಯ ದಂಡೆಯಲ್ಲಿದ್ದ 'ಹರಿಶಿಲೆ' ಗೆ ಬಂದು ದೊಪ್ಪನೆ ಕುಸಿದು ಕುಳಿತಳು. ಮನೆಗೆ ಬಂದ ಹರಿ ಸುವಾಸಿನಿಯನ್ನು ಕಾಣದೆ " ಎಲ್ಲಿ? " ಎಂದು ಕೇಳಿದ " ಈಗ ಇದ್ದಳು. ಹೊಳೆ ಕಡೆಗೆ ತಿರಳಿ ದಳೋ ಏನೋ! ನೋಡು'' ಎಂದರು ಸೀತಮ್ಮ "ಒಬ್ಬಳೇ ಹಾಗೆಲ್ಲ ಹೋಗಲು ಬಿಡಬಾರದು. ಎಲ್ಲಾದರೂ ಹಾವಿದ್ದೀತು." ಎಂದ ಹರಿ. " ಸುವಾಸಿನೀ, ಸುವಾಸಿನೀ'' ಎಂದು ಕರೆಯುತ್ತ ಬಂದ. ಶಿಲೆಯ ಮೇಲೆ ಅವಳು ಕುಳಿತಿ ದ್ದುದು ಹರಿಗೆ ಕಾಣುತ್ತದೆ! ಅವನ ಧ್ವನಿ ಅವಳು ಕೇಳಬಲ್ಲಳು! ಆದರೂ

ಓಗೊಡಲಿಲ್ಲ. ಹತ್ತಿರ ಬಂದರೂ ಹೊರಳಿ ನೋಡಲಿಲ್ಲ. ಹರಿ ಎದುರಿಗೆ ಬಂದು "ಏನು ಸುವಾಸಿನೀ ? ಏನಾಯ್ತು ? " ಎಂದು ಧೈನ್ಯದಿಂದ ಕೇಳಿದ.

ಅವಳ ಕಣ್ಣಿನಿಂದ ಕೆಲವು ಹನಿಗಳು 'ಹರಿಶಿಲೆ'ಯ ಮೇಲೆ ಉರುಳಿದುವು.

"ಯಾಕೆ ಸುವಾಸಿನೀ ? ಏನಾಯ್ತು?"

"ನನ್ನನ್ನು ಇನ್ನು ಮುಂದೆ ಸುವಾಸಿನೀ ಎಂದು ಕರೆಯಬೇಡಿ ಅವರು ಇವರು ಎಂದೆನ್ನಬೇಕು."

"ಯಾಕೆ?"

"ಯಾಕೆಂದರೆ ಸುವಾಸಿನಿ ಜೀವದಿಂದಿಲ್ಲ"

"ಏನಾಯ್ತು ಜೀವಕ್ಕೆ?"

"ಆಗುವುದೇನು? ಆಗುವುದಾಯಿತು. ನಿಮಗೇಕೆ ನನ್ನ ವಿಚಾರ? ನನ್ನ ಮಟ್ಟಿಗೆ ನಾನು. ನಿಮ್ಮ ಮಟ್ಟಿಗೆ ನೀವು. ನಿಮಗೆ ಮಂಗಳೂರಿನ ಹುಡುಗಿ ನೋಡಿದ್ದಾರಂತೆ. ಐದು ಸಾವಿರ ವರದಕ್ಷಿಣೆ ಕೊಡುತ್ತಾರಂತೆ. ಬೇಗನೇ ಮದುವೆ ಮಾಡಿ ಬಿಡುತ್ತಾರಂತೆ. ನೀವು ಸುಖದಿಂದಿರ್ರಿ.''

ಹರಿ ನಕ್ಕು ನುಡಿದ. "ಓಹೋ' ಇಷ್ಟಕ್ಕೇ ನೀನು ಸಿಟಗೊಂಡು ಇಲ್ಲಿಯವರೆಗೆ ಬಂದಿಯೇನು? ಓಹೋಹೋ, ಈಗ ನನಗೆ ಅರ್ಥವಾಯಿತು".

"ಸಿಟಗೊಂಡಲ್ಲ ಸಿಟ್ಟುಗೊಂಡು. ಈ ನದಿಯಲ್ಲಿ ಹಾರಿ ಬಿಡಲಾ ಎಂದೆನ್ನಿಸುತ್ತದೆ ನನಗೆ"

"ಹಾರು. ಅಗತ್ಯವಾಗಿ ಹಾರು. ಇಲ್ಲೇ ಹಾರಬೇಡ. ನೀರು ಆಳವಿಲ್ಲ. ಇಲ್ಲಿಲ್ಲಿ ಹಾರಿದರೆ ಮತ್ತೆ ನಮಗೆಲ್ಲ ಪಚೀತಿ ಬರಲುಂಟು. ಪೋಲೀಸರು ಬಂದು ಮತ್ತೆ ಬೇಟೆಯಾಡಲುಂಟು. ನಾನೊಂದು ಆಳವಾದ ಗುಂಡಿ ತೋರಿಸುತ್ತೇನೆ. ಅಲ್ಲಿ ಹಾರಿದರೆ ಗುಳುಂ, ಗುಳುಂ, ಗುಳುಂ! ಪತ್ತೆಯೇ ಸಿಗುವುದಿಲ್ಲ. ಬಾ, ಬಾ" ಎಂದು ಹರಿ ಸುವಾಸಿನಿಯ ಕೈಹಿಡಿದ. ಅವಳು ಕೈ ಕೊಸರಿಕೊಳ್ಳಲು ಅವಳ ಬಳಿಯೇ ಬಂದು ಕುಳಿತು, "ಸುವಾಸಿನೀ, ನೀನಿನ್ನೂ ನನ್ನನ್ನು ತಿಳಿದು ಕೊಳ್ಳಲಿಲ್ಲ'' ಎಂದುಸುರಿದ.

"ಏನೆಂದು ತಿಳಿದು ಕೊಳ್ಳಲಿ? ನೀವು ಒಮ್ಮೆ ಕೂಡಾ ಒಂದು ಮಾತನ್ನಾಡಿಲ್ಲ."

"ಇಲ್ಲ ಆಡುವ ಅಗತ್ಯವೂ ಇಲ್ಲ. ಹೃದಯವನ್ನು ಮುಕ್ತೊಂದು. ಹೃದಯವೇ ಅರಿಯಲು ಸಾಧ್ಯ''

" ಅರಿತಿದ್ದೆ. ಆದರೆ ನಿಮ್ಮ ತಾಯಿ ಇಂದು ಹೇಳಿದ ಸುದ್ದಿ ಕೇಳಿ ಸಂಶಯ ಹುಟ್ಟಿತು''

"ಇನ್ನೂ ಉಂಟಾ ಸಂಶಯ? "

ಸುವಾಸಿನಿ ಲಜ್ಜೆಯಿಂದ ತಲೆ ತಗ್ಗಿಸಿದಳು. ಹರಿ ಅವಳ ಕೈ ಹಿಡಿದಾಗ ಅವಳು ಹಿಂದಕ್ಕೆ ಸೆಳೆದುಕೊಳ್ಳಲಿಲ್ಲ. ಒತ್ತೊತ್ತಿಗೆ ಕುಳಿತಿದ್ದುದರಿಂದ ಅವರ ಮೊಗಗಳೂ ಹತ್ತಿರ ಬಂದುವು. ತೋಟದೊಳಗಿನಿಂದ ಸುವಾಸನೆ ತೇಲಾಡಿ ಬಂತು ಗಾಳಿಯಲ್ಲಿ. ತೆಂಗು ಕಂಗಿನ ಗರಿಗಳು ಚವರಿ ಬೀಸಿದುವು. ಹೊಳೆ ಸಾಲಿನ ಮರಗಳ ತುತ್ತ ತುದಿಯಲ್ಲಿ ಕುಳಿತ ಕೋಗಿಲೆ "ಕೂಹು ಕೂಹು" ಎಂದು ತನ್ನ ಸವಿಗೊರಲನ್ನು ತೆರೆಯಿತು. "ಸುವಾಸಿನೀ ಸುವಾಸಿನೀ" ಎಂದು ಕರೆಯುತ್ತ ಕುಲಕರ್ಣಿಯವರು ಅಲ್ಲಿಗೆ ಬಂದರು.

"ಸುವಾಸಿನಿ ಈಗ ಒಂದು ಆಳವಾದ ಹೊಳೆಯ ಗುಂಡಿಗೆ ಹಾರಿ ಬಿಡುತಿದ್ದಳು" ಎಂದು ಹರಿ ತಿಳಿಸಿದ.

"ಹೌದೇನು? ನೀವು ಹಿಡಿದಿರೋ ಇಲ್ಲೋ?"

"ಇಲ್ಲ. ಅದಕ್ಕಿಂತಲೂ ಆಳವಾದ ಎದೆಗುಂಡಿಗೆಗೇ ನೆಗೆದಳು" ಎಂದು ಹರಿ ಪ್ರಾರಂಭಿಸಿದ. ಬಹಳ ಹೊತ್ತಿನ ವರೆಗೆ ಆ ಶಿಲೆ ಕಲ್ಲಿನಲ್ಲಿ ಒತ್ತೊತ್ತಿಗೆ ಕುಳಿತು ಮೂವರೂ ಮಾತನಾಡಿದರು.

ಬಹಳ ಹೊತ್ತಿನ ವರೆಗೆ ಅವರು ಬಾರದಿದ್ದುದನ್ನು ಕಂಡ ಸೀತಮ್ಮನವರು "ಹೌದ್ರಿ, ಇಲ್ಲಿ ಬನ್ನಿ. ಒಂದು ಮಾತಿದೆ" ಎಂದು ಗೋವಿಂದರಾಯರನ್ನು ಕರೆದರು. ನಸ್ಯ ಏರಿಸುತ್ತ " ಏನದು? ಏನದು, ಅಷ್ಟು ರಹಸ್ಯ," ಎಂದು ಕೇಳುತ್ತ ಅವರು ಅಡಿಗೆ ಮನೆಗೆ ಬಂದು ಕುಳಿತರು. "ಹರಿ ಮತ್ತು ಸುವಾಸಿನಿ ಗಂಡ ಹೆಂಡತಿಯು ಹಾಗಿದ್ದಾರೆ" ಎಂದು ಪ್ರಸ್ತಾವನೆ ಓದಿದರು ಸೀತಮ್ಮ.

"ಹೌದಾ?"

"ಖರೆ''

"ನನಗೇನೂ ಕಾಣಲಿಲ್ಲ. ಹರಿ ಬಹಳ ಫ್ರೀ ಆಗಿ ಮಾತನಾಡುತ್ತಾನೆಂತ ತಿಳಿದು ನಿನ್ನ ಸಂಶಯವಾ? ಅವನ ಸ್ವಭಾವವೇ ಹಾಗೆ. ಸುಭಾಷಿಣಿ ಬಂದಾಗಲೂ ಅವನು ಹರಟೆ ಹೊಡೆಯುತಿದ್ದ. ಗುಲಾಬಿ ಕಮಲೆಯರು ಬಂದಾಗ ಅವರ ಜುಟ್ಟು ಹಿಡಿದು ಎಳೆದಿದ್ದ. ಅವನು ಬೋಳೆ ಎಂದರೆ ಬೋಳೆ. ಅದಕ್ಕೇ ಅನ್ನುತಿದ್ದಿಯಾ? "

"ಅಲ್ಲ. ಮೇಲಿಂದ ಮೇಲೆ ಹಾಗೆಯೇ ತೋರುತ್ತದೆ. ಆದರೆ ಬಹಳ ಸೂಕ್ಷ್ಮ ದೃಷ್ಟಿಯಿಂದ ಕಂಡರೆ ಗೊತ್ತಾಗುತ್ತದೆ" ಎಂದು ಸೀತಮ್ಮನವರು ಕೆಲವು ಉದಾಹರಣೆಗಳನ್ನು ಕೊಟ್ಟರು.

"ಚಲೋ ಆಯ್ತು ಬಿಡು. "ಹರಿ ಜೈಲಿಗೆ ಹೋದ ಮೇಲೆ ಅವನಿಗೆ ಯಾರು ಹೆಣ್ಣು ಕೊಡುತ್ತಾರೆ?'' ಎಂದು ಅಳುತಿದ್ದಿ. ಇನ್ನೇನೂ ನೀನು ದುಃಖ ಪಡುವ ಕಾರಣವಿಲ್ಲ. ನೋಡು"

"ಯಾವ ಊರು? ಯಾವ ದೇಶ?"

"ಯಾವ ಊರಾದರೇನು? ಹೆಣ್ಣು ತರಲು ಯಾವ ದೇಶವಾದರೇನು? ಧಾರವಾಡವಲ್ಲ, ನನಗೆ ವಯಸ್ಸಿರುತಿದ್ದರೆ ಲಂಡನಿಗೆ ತೆರಳಿ ಒಂದು ಲೇಡಿಯನ್ನೇ ಕಟ್ಟಿಕೊಂಡು ಬರುತ್ತಿದ್ದೆ".

"ನಿಮಗೆ ಬರೇ ತಮಾಷೆ"

"ಹೌದು. ಮತ್ತೆ ಇದಕ್ಕೆ ದುಃಖ ಪಡಬೇಕಾ? ನಿನಗೆ ಮರುಳು".

"ಹೌದು ಮರುಳು ನನಗೆ! ನಮ್ಮ ಹೆಣ್ಮಕ್ಕಳು ಹೇಗಿದ್ದಾರೆ. ತೊಳೆದು ಕೈ ಹಿಡಿಯಬೇಕು. ಸುಭಾಷಿಣಿ ಬಂದರೆ ರಾತ್ರಿ ದೀಪ ಹಚ್ಚುವುದೇ ಬೇಡ. ಸುಗುಣ ಸ್ವಲ್ಪ ಗಿಡ್ಡವಿದ್ದರೂ ಮದಿವಾಳ್ ಪಕ್ಕಿ. ಸುವಾಸಿನಿ ಹಾಗಿಲ್ಲ"

"ಏನಾಗಿದೆ ಅವಳಿಗೆ?"

"ಹರಿ ಹೇಗಿದ್ದಾನೆ? ಅವಳು ಹೇಗಿದ್ದಾಳೆ?"

"ಓಹೋಹೋ. ನಿನ್ನ ಮಾತಿನ ಅರ್ಥ ಈಗ ಆಯಿತು ನನಗೆ. ಹರಿ ಹುಡುಗನಾ? ಅವನು ತಪ್ಪಿ ಹುಟ್ಟಿದ. ಹುಡುಗಿಯೇ ಆಗಬೇಕಿತ್ತು ಅವನು. ಕೊನೆಯ ಗಳಿಗೆಯಲ್ಲಿ ಹುಡುಗನಾದ."

ಸೀತಮ್ಮನವರು ನಕ್ಕರು.

ಗೋವಿಂದರಾಯರು ಅಲ್ಲಿಗೇ ನಿಲ್ಲಿಸಲಿಲ್ಲ. "ಕೆಲವರು ಹೆಣ್ಣಿನ ಮೈ ಬಣ್ಣಕ್ಕೆ ಮರುಳಾಗುವರು. ಮಣ್ಣು ಬೇಕು ಕೆಲವರಿಗೆ. ಐದಲ್ಲ ಹತ್ತು ಸಾವಿರ ವರದಕ್ಷಿಣೆ ಬೇಡುವವರೂ ಇದ್ದಾರೆ. ಅವರಿಗೆ ಅಷ್ಟು ದೊರೆತರೆ ಸಾಕು. ಅದೇ ಪರಬ್ರಹ್ಮವೆಂದು ತಿಳಿದು ಬಿಡುವರು. ಅಷ್ಟರಿಂದಲೇ ಅವರ ಮೈ ಮನಸ್ಸನ್ನು ಸೂರೆಗೊಳ್ಳಲು ಸಾಧ್ಯ. ಅವರ ದೃಷ್ಟಿ ಇವುಗಳಾಚೆ ನಿಲುಕಲಾರದು. ಮನಸ್ಸು ಉನ್ನತ ಸೋಪಾನಕ್ಕೆ ಏರುವುದಿಲ್ಲ. ಕುದುರೆ ಮುಖದ ಕೋಡುಗಲ್ಲನ್ನು ಅವರು ಹತ್ತಲಾರರು. ಅಂತಃಕರಣದ ಹೊಂದಿಕೆ, ಭಾವ ಸಾಮರಸ್ಯಗಳಿಗೆ ಅವರು ಬೆಲೆ ಕೊಡುವುದಿಲ್ಲ. ಆದರೆ ಬೆಲೆ ಕೊಡುವ ಜೀವಗಳೂ ಉಂಟು. ಹರಿ–ಸುವಾಸಿನಿಯರು ಹಾಗಿರುವರೆಂದು ತೋರುತ್ತದೆ. ಒಲಿದವರು ಒಬ್ಬರನ್ನೊಬ್ಬರು ಮದುವೆಯಾಗುವುದು ಧರ್ಮ. ನಾವು [illegible] ಸರಿಯಲ್ಲ."

"ನಾನೆಲ್ಲಿ ವಿಘ್ನ ತಂದೆ? ಇದ್ದುದನ್ನು ಹೇಳಿದರೆ ನನ್ನ ಮೇಲೆಯೇ ತಿರುಗಿ ಬಿದ್ದಿರಲ್ಲ. ಅಗತ್ಯ ಮಾಡಿಕೊಳ್ಳಲಿ. ಇಂದೇ ನನ್ನ ಕಣ್ಣೆದುರಿಗೇ ಆಗಲಿ'' ಎಂದು ಸೀತಮ್ಮನವರು ಆಡುತಿದ್ದಾಗಲೇ ಹೊರಗೆ ತೆರಳಿದ್ದ ಮೂವರೂ ಮರಳಿದರು.

ಮುಖಮಂಟಪದಿಂದಲೇ ಗೋವಿಂದರಾಯರು ಸುವಾಸಿನಿಯನ್ನು ಕರೆದರು. "ಏ ಸುವಾಸಿನೀ, ಇಲ್ಲ ಬಾ ಮಗಳೇ. ಹರಿಯ ಕೋಟಿನ ಕಿಸೆಯಲ್ಲಿದ್ದ ಫೌಂಟನ್ ಪೆನ್ ತಾ. ಒಂದು ಬಿಳಿ ಹಾಳೆಯನ್ನು ಇದ್ದರೆ ಕೊಡು'' ಎಂದು ನುಡಿದರು. ಅವಳು ಕೊಡಲು ಬಂದಾಗ ಕೈಹಿಡಿದು ಕುಳ್ಳಿರಿಸಿ, ಹೇಳಿದರು. "ನಮ್ಮ ಹರಿಗೆ ಮಂಗಳೂರಿನ ಹೆಣ್ಣನ್ನು ನೋಡಿದೆ. ಅವರು ಐದು ಸಾವಿರ ವರದಕ್ಷಿಣೆ ಕೊಡುವರಂತೆ! ಐದು ಕೊಡುವವರಿಗೆ ಇನ್ನೈದು ಸಾವಿರ ಕೊಟ್ಟರೇನು ಧಾಡಿ? ಅವರ ಅಪ್ಪನ ಮನೆ ಗಂಟೇನು ವೆಚ್ಚವಾಗುತ್ತದೆ? ಬ್ಲೇಕ್ ಮಾರ್ಕೇಟ್ ಮಾಡಿ ಮಾಡಿ ಹಣ ಗಳಿಸಿದ್ದಾರೆ ಲಕ್ಷಾಂತರ. ಕೊಡಲಿ ಒಂದು ಮೋಟಾರ್ ಕಾರ್. ಮದುವೆಯ ದಿನ ಒಂದು ಕ್ಷಣ ಮಾತ್ರ ಮದುಮಕ್ಕಳನ್ನು ಮೋಟಾರಿನಲ್ಲಿ ಮೆರವಣಿಗೆ ಮಾಡಿದರೆ ಸಾಲದು? ನಮ್ಮ ಕಂಡಿಶನ್‌ಗೆ ಒಪ್ಪದಿದ್ದರೆ ನಿಮ್ಮ ಹುಡುಗಿ ಬೇಡ. ಊರಿನೊಳಗಿರುವುದು ನಿಮ್ಮದೊಂದೇ ಹುಡುಗಿಯಲ್ಲ. ಈ ಊರಲ್ಲದಿದ್ದರೆ

ಮತ್ತೊಂದು. ಈ ಹುಡುಗಿಯಲ್ಲದಿದ್ದರೆ ಮಗುದೋಂದು. ಏನು ಊರು ಉರುಟಾಗಿ ಹೋಯ್ತೆಂದು ತಿಳಿದಿರಾ? ನಿಮ್ಮ ಅಪ್ಪನಂತಹ ಹುಡುಗಿಯನ್ನು ನೋಡುತ್ತೇನೆ ಮಗನಿಗೆ'' ಎಂದು ಬರೆದು ಬಿಡುತ್ತೇನೆ. ನೋಡು ಇದಕ್ಕೆ ನೀನೇನನ್ನುತ್ತೀ? ತಕ್ಷಣ, ತಕ್ಷಣ ಹೇಳಿ ಬಿಡು ''

ಅವರ ಮಾತಿಗೆ ಏನು ಉತ್ತರ ಕೊಡಬೇಕೆಂದೇ ಸುವಾಸಿನಿಗೆ ಅರ್ಥವಾಗಲಿಲ್ಲ. ಇನ್ನಷ್ಟು ಸೋಜಿಗದಿಂದ ಅವಳು ಮೋರೆಗೆ ಕೈಯಿಟ್ಟು ಕೊಂಡು ಕುಳಿತಳು. ಅವರ ತಂದೆಯು ಹೆಸರು ಕೇಳಿ ಗೋವಿಂದರಾಯರು ಪತ್ರ ಆರಂಭಿಸಿದುದರಿಂದ ಸುವಾಸಿನಿಗೆ ಮತ್ತೂ ಆಶ್ಚರ್ಯ. ಒಂದೊಂದು ಸಾಲು ಬರೆದಂತೆ ಅವಳ ಕೆನ್ನೆ ಕೆಂಪೇರ ತೊಡಗಿತು. ಮುಚ್ಚಿದ್ದ ತುಟಿಗಳು ಬಿಚ್ಚಿ ಅಗಲವಾದುವು. ಪೂರ್ಣ ಮುಗಿವ ವರೆಗೂ ಅವರು ಅವಳನ್ನು ಹೋಗಗೊಡಲಿಲ್ಲ. ಪತ್ರ ಮುಗಿಸಿ " ಓದು ಗಟ್ಟಿಯಾಗಿ ಓದು " ಎಂದು ಅವಳ ಕೈಯಲ್ಲಿಟ್ಟರು. ಮದುವೆಗೆ ಸಮ್ಮತಿ ಸೂಚಿಸಿ ಸುವಾಸಿನಿಯ ತಂದೆಗೆ ಗೋವಿಂದರಾಯರು ಪತ್ರ ಬರೆದಿದ್ದರು. ಒಕ್ಕಣೆ ಕೇಳಿದ ಕುಲ ಕರ್ಣಿಯವರಿಗೆ ಅತ್ಯಂತ ಹರುಷವಾಯಿತು. " ನಿಮಗೆ ನಾವು ಋಣಿಗಳು" ಎಂದು ಅವರು ಕೈ ಜೋಡಿಸಿದರು. ಹರಿ ಅಡಿಗೆ ಮನೆಗೆ ತೆರಳಿದ. ಸುವಾಸಿನಿ ಪತ್ರವನ್ನು ಗೋವಿಂದರಾಯರ ಕೈಗಳಲ್ಲಿಟ್ಟು ನಮಸ್ಕಾರ ಮಾಡಿದಳು. " ಮಗಳೇ ಸುಮಂಗಲೀ ಭವ'' ಎಂದು ಅವರು ಕೈಗಳಿಂದ ತಲೆಯನ್ನು ಪೂಸಿದರು. ಸೀತಮ್ಮನವರಿಗೆ ನಮಸ್ಕಾರ ಮಾಡಿದಾಗ ಅವರು ತೋಳುಗಳಿಂದ ಸುವಾಸಿನಿಯನ್ನು ಸೆಳೆದುಕೊಂಡು, " ಚಲೋದಾಗಿ ಇರ್ರಿ. ನೀವು ಚಲೋದಾಗಿದ್ದರೆ ಅದೇ ನಮಗೆ ಆನಂದ. ಮತ್ತೇನನ್ನೂ ನಾವು ಅಪೇಕ್ಷಿಸುವುದಿಲ್ಲ.'' ವೆಂದು ಅವಳ ಬೆನ್ನಿನ ಮೇಲೆ ಕೈಯ್ಯಾಡಿಸಿದರು. ಅಲ್ಲೇ ಕುಳಿತಿದ್ದ ಹರಿ ಹಿಂದಿನಿಂದ ಬಂದು ಸುವಾಸಿನಿಯ ಜಡೆ ಹಿಡಿದೆಳೆದು, " ನಿನ್ನನ್ನು ಮದುವೆ ಆಗುವವರು ಯಾರು? ನಾನೋ ನನ್ನ ತಾಯಿಯೋ? ಮಾಡು. ನನಗೆ ಸಮಸ್ಕಾರ ಮಾಡು'' ಎಂದ.

" ಈಗ ನಿಮಗೆ ನಮಸ್ಕಾರವಿಲ್ಲ. ಏಕೆ, ಈಗಲೇ ಗಂಡನ ಹಕ್ಕು ಸ್ಥಾಪಿಸಲು ಹೊರಟರೇನು ಮತ್ತೆ? ಲಗ್ನದ ವರೆಗೆ ಅದು ಸಾಧ್ಯವಿಲ್ಲ. ಊಹುಂ" ಎಂದು ಕಡೆಗಣ್ಣಿನ ನೋಟದಿಂದಲೇ ಅವನನ್ನು ತಿವಿದಳು.

" ಹಾಂ, ಆಯ್ತು. ಪಚೀತಿ ಆಯ್ತು. ಸ್ವರಾಜ್ಯ ಲಭಿಸುವ ವರೆಗೆ ನಾನು ಲಗ್ನವಾಗುವಂತಿಲ್ಲ. ಅಷ್ಟರ ವರೆಗೆ ಒಂದು ನಮಸ್ಕಾರವೂ ಇಲ್ಲ ನನಗೆ. ಎಂಥಾ ಗಂಡ ನಾನು? ಗಂಡನಲ್ಲ ಗುಂಡ! ಗೂಂಡಾ!"

ಅವನ ವಿನೋದದ ಮಾತು ಕೇಳಿ ಸೀತಮ್ಮನವರಿಗೆ ನಗುವನ್ನು ತಡೆಯಲಾಗಲಿಲ್ಲ. ಅವರಿಗೆ ಬಹಳ ತಮಾಷೆ ಕಂಡಿತು. ಸುವಾಸಿನಿ ನಮಸ್ಕರಿಸುವಂತೆ ಮಾಡಿ ಅವರೂ ತಮಾಷೆ ಕಂಡರು. ನಮಸ್ಕರಿಸಿದಾಗ ಹರಿ, "ನಾನು ನಿನ್ನನ್ನು ಹೇಗೆ ಆಶೀರ್ವದಿಸಬೇಕು? ಅಷ್ಟ ಪುತ್ರೀ ಸೌಭಾಗ್ಯ ವತೀ ಭವ ಎಂದು ಹೇಳಿ ಬಿಡಲಾ?" ಎಂದು ನಗಿಸಿದ.

ಉತ್ತರ ಕೊಡದೆ ಸುವಾಸಿನಿ ಅಲ್ಲಿಂದೆದ್ದು ಪಡಸಾಲೆಗೆ ಓಡಿದಳು. ಒಂದೆರಡು ದಿನಗಳ ಮೇಲೆ ಗುಡ್ಡ ಬೆಟ್ಟ ಘೋರಾರಣ್ಯಗಳ ಮಧ್ಯೆ ಹಾದು ಹೋಗುತ್ತಿರುವ ಎಳ್ನೀರ್ ಘಟ್ಟದ ಒಳದಾರಿ ಹಿಡಿದು ಅವರೆಲ್ಲರೂ ಹೊರಟು ಹೋದರು.

ಅವರು ಹೋದ ಒಂದೆರಡು ದಿನಗಳಲ್ಲೇ ಗೋವಿಂದರಾಯರ ಮನೆಗೆ ಮೂವರು ಪೋಲೀಸರು ಬಂದರು. ಅವರ ರಾಕ್ಷಸ ಸ್ವರೂಪ ಕಂಡೇ ಸೀತಮ್ಮನವರ ಕೈಕಾಲುಗಳು ನಡುಗಿದುವು. ಗೋವಿಂದರಾಯರೂ ಮನೆ ಯಲ್ಲಿರಲಿಲ್ಲ. ತೋಟಕ್ಕೆ ನೀರು ಬಿಡುತ್ತ ಕುಳಿತಿದ್ದರು. ಅಲ್ಲಿಗೆ ಓಡಿ ಬಂದ ಸೀತಮ್ಮನವರು, "ಹೌದ್ರಿ, ಪೋಲೀಸರು ಬಂದರು! ಪೋಲೀಸರು!" ಎಂದು ಹೆದರಿದ ಇಳಿಧನಿಯಲ್ಲಿ ನುಡಿದರು. "ನನಗೆ ಕಿವಿ ಕೇಳಿಸುವುದಿಲ್ಲ ಸರಿ. ಗಟ್ಟಿಯಾಗಿ ಹೇಳು. ಯಾರು ಬಂದರು?" ಎಂದು ಕಿವಿಗೆ ಅಂಗೈ ಆನಿಸಿ ಕೇಳಿದರು ಅವರು.

" ಪೋಲೀಸರು! "

" ಯಾರು ಪೋಲಿಗಳು? "

" ಅಲ್ಲ. ಪೋಲೀಸರು!"

" ಓಹೋ, ಕೇಳಿತು. ಈಗ ಕೇಳಿತು. ಪೋಲೀಸರು ಬಂದರಾ? ಇಷ್ಟೇ ಏನು? ಇಷ್ಟಕ್ಕೇಕೆ ಗಾಬರಿ ನಿನಗೆ? "

" ಗಾಬರಿಯಾಗದೆ ಮತ್ತೆ? ಅವರ ಕೆಂಪು ಮುಂಡಾಸೇನು! ಕೋವಿ ಗಳೇನು! ಬಿಚ್ಚುಗತ್ತಿಗಳೇನು! ನನ್ನ ಕಾಲು ಥರಥರ"

" ಥೂ, ನಿನಗೆ ಮರುಳು! ಇದಕ್ಕೆಲ್ಲ ಹೆದರಬೇಕೇಕೆ? ಕತ್ತಿ ತಂದಿದ್ದರೆ ಕಾಡು ಕಡಿಯಲಾಯಿತು. ಅವರು ಕೋವಿ ತಂದುದೂ ಒಳ್ಳೇದೇ. ಇಂದು ರಾತ್ರಿ ಹಂದಿ ಹೊಡೆಯಲು ಹೇಳಿಬಿಡುತ್ತೇನೆ"

" ನೀವು ಬರಬೇಕಂತೆ "

"ಬರಬೇಕು ಎಂದು ಆಜ್ಞಾಪಿಸಲು ನಾನೇನು ಅವರ ಗುಲಾಮನೇ? ಬರುತ್ತಾರೆ ಈಗ ಎಂದು ಹೇಳಿ ಹೋಗು. ಬಿಸಿಲಿಗೆ ಬಂದಿದ್ದಾರೆ. ಬೆವರು ಒರಸಿಕೊಂಡು ಸ್ವಲ್ಪ ವಿಶ್ರಾಂತಿ ತೆಗೆದು ಕೊಳ್ಳಲಿ. ಬಿಸಿನೀರು ಬೇಕಾಗಿದ್ದರೆ ಕೊಡು! ಈಗ ಬರುತ್ತೇನೆ. ನಾನು ಕಾಡಿಗೆ ಓಡಿ ಹೋಗುವುದಿಲ್ಲ! ಸ್ವಲ್ಪ ತಡೆದು ಬರುತ್ತೇನೆ" ಎಂದುಹೆಂಡತಿಯನ್ನು ಕಳಿಸಿದರು.

ಸ್ವಲ್ಪ ತಡವಾದ ಮೇಲೆ ಒಬ್ಬ ಪೋಲೀಸನೇ ಬಂದು, "ಏನು? ಹೇಳಿ ಕಳಿಸಿದರೂ ಬರಲಿಲ್ಲ? '' ಎಂದು ಅಹಂಕಾರ ತೋರಿಸಿದ.

" ಯಾಕೆ ಬರಬೇಕು? ಪೋಲೀಸನೆಂದರೆ ದೊಡ್ಡ ಕಲೆಕ್ಟರನೇನು? "

" ಕಲೆಕ್ಟರೇ. ಕಲೆಕ್ಟರರ ಅಧಿಕಾರವೂ ಇದೆ ಈಗ ನಮಗೆ ''

" ಕಲೆಕ್ಟರನ ಅಧಿಕಾರವಲ್ಲ, ನಿಮಗೆ ಎಲ್ಲ ಅಧಿಕಾರವಿದೆ. ಇಲ್ಲದ ಅಧಿಕಾರ ಯಾವುದು? ನಿಮ್ಮದೇ ರಾಜ್ಯ. " ಪೋಲೀಸರ ರಾಜ್ಯವೇ ನಡೆದಿದೆ.'' ಎಂದು ನನ್ನ ಮಗ ಹರಿ ಹೇಳಿಯೇ ಬಿಟ್ಟಿದ್ದಾನೆ " ಎಂದು ಹೇಳುತ್ತ ಮುಖಮಂಟಪಕ್ಕೆ ಬಂದರು.

" ನಿಮ್ಮ ಅಧಿಕ ಪ್ರಸಂಗ ಬೇಡ. ನಾವು ನಿಮ್ಮ ಹರಿಯನ್ನೇ ಹುಡುಕಲು ಬಂದದ್ದು. ಎಲ್ಲಿದ್ದಾರೆ ಅವರು? ''

" ಎಲ್ಲಿದ್ದಾರೆಂದು ನನ್ನನ್ನೇ ಕೇಳುತಿದ್ದೀರಲ್ಲ. ನಿಮ್ಮ ಸರಕಾರವಿದೆ ನಿಮ್ಮ ಸೈನ್ಯವಿದೆ. ನಿಮ್ಮ ಪೋಲೀಸ್ ಪಡೆಯಿದೆ. ನಿಮ್ಮ ಸಿ. ಐ. ಡಿ. ಗಳಿದ್ದಾರೆ. ನಿಮ್ಮ ತಾಳಕ್ಕೆ ಸರಿಯಾಗಿ ತಲೆಕುಟ್ಟುವ ರಾವ್‌ಸಾಹೇಬ್, ರಾವ್ ಬಹದ್ದೂರ್, ಖಾನ್ ಬಹದ್ದೂರುಗಳಿದ್ದಾರೆ. ನಿಮಗೆ ಗೊತ್ತು. ನಿಮ್ಮನ್ನೇ ನಾನು ಕೇಳಬೇಕೆಂದಿದ್ದೇನೆ. ಏನು ಮಾಡಿದಿರಿ? ಎಲ್ಲಾದರೂ ಗುಂಡು ಹೊಡೆದು ರಸ್ತೆಯ ಬದಿಯ ಗಟಾರ್‌ಗೆ ಎಸೆದಿರಾ? ಎದೆಗೆ ತಿವಿದು ಈ ಕಾಡಿನಲ್ಲೇ ಎಲ್ಲಾದರೂ ಎಸೆದು ಬಂದಿರಾ ? ಕಲ್ಲು ಕಟ್ಟಿ ಬಾವಿಗೆ ಹೊತ್ತು ಹಾಕಿದಿರಾ? ಕೈಕಾಲು ಮುರಿದಿರಾ? ಏನು ಸಮಾಚಾರ?

ಅವನ ಸುಗ್ಗಿಯಿಲ್ಲದೆ ಬಹಳ ಕಾಲವಾಯ್ತು. ಮುಪ್ಪಿನ ಕಾಲಕ್ಕೆ ಇದೊಂದು ಚಿಂತೆ ನನಗೆ. ಅದನ್ನು ಹೇಳಿ ದುಃಖ ನಿವಾರಿಸುವುದನ್ನು ಬಿಟ್ಟು ನನ್ನನ್ನೇ ಕೇಳುತಿದ್ದೀರಿ. ಆಶ್ಚರ್ಯ. ಮತ್ತೆ ತಾಯಿ ಗರ್ಭದೊಳಗೆ ಹೊಕ್ಕಿಕೊಂಡನೆಂದು ಭಾವಿಸಿ ಇಲ್ಲಿ ಹುಡುಕಲು ಬಂದಿರೇನು ಮತ್ತೆ?"

"ತಾಯಿ ಗರ್ಭದೊಳಗೆ ಹೊಕ್ಕೊಂಡರೂ ನಾವು ಬಿಡುವುದಿಲ್ಲ" ಎಂದೊಬ್ಬ ದರ್ಪದಿಂದ ನುಡಿದ.

"ನೀವು ಯಾಕೆ ಬಿಟ್ಟೀರಿ? ನಿಮಗೆ ತಾಯಿ, ತಂದೆ ಅಣ್ಣ ತಮ್ಮ ಬಂಧು ಬಳಗ, ತಮ್ಮ ಮಂದಿ, ತಮ್ಮ ಜನ ಎಂಬ ಭಾವನೆಯೇ ಇಲ್ಲ. ಅದೆಂದೋ ಗೊತ್ತು ನಮಗೆ."

"ಈ ಮುದುಕ ಭಾರೀ ಮಾತನಾಡುತಿದ್ದಾನಲ್ಲಾ!" ಎಂದು ಒಬ್ಬ ಪೋಲೀಸಿನವನು ಮತ್ತೊಬ್ಬನ ಮೋರೆ ನೋಡಿ ನುಡಿದ:

"ನಿಮ್ಮ ಸರಕಾರ! ನಮ್ಮ ಸರಕಾರ! ಎಂದು ಬಹಳ ಉದ್ದ ನಾಲಿಗೆ ಳೆಯುತಿದ್ದೀರ? ಇದೇನು ನಿಮ್ಮ ಸರಕಾರವಲ್ಲವೇನು?" ಎಂದ. ಇನ್ನೊಬ್ಬ

"ಇಲ್ಲ"

"ಯಾಕಿಲ್ಲ? ನಾವು ನಿಮ್ಮವರಲ್ಲವೇನು?"

"ಅಲ್ಲ. ನಮ್ಮವರಾದರೆ ಇಷ್ಟು ದೌರ್ಜನ್ಯ ತೋರಿಸುತಿದ್ದಿರಾ? ನಮ್ಮ ದೇಶದಲ್ಲಿ ಹುಟ್ಟಿರಬಹುದು. ನಮ್ಮ ಗಾಳಿ, ನಮ್ಮ ಆಹಾರ ನೀವು ಸೇವಿಸುತ್ತಿರಬಹುದು. ನಮ್ಮ ಬಣ್ಣ ನಿಮಗೆ ಬಂದಿರಬಹುದು. ಆದರೆ ನೀವು ನಮ್ಮವರಲ್ಲ. ನೀವು ಬಣ್ಣ ಬದಲಾಯಿಸಿದವರು. ಎಲ್ಲಿಂದಲೋ ಬಂದ ವಿಲಾಯತಿ ಅಣ್ಣಂದಿರ ಅಣ್ಣ ತಮ್ಮಂದಿರು!"

"ಯಾಕಪ್ಪಾ ಒಣ ಚರ್ಚೆ?" ಎಂದು ಒಬ್ಬ ಪೋಲೀಸಿನವ ಮತ್ತೊಬ್ಬನಿಗೆ ಛೀ ಹಾಕಿದ.

"ಅದೆಲ್ಲ ಹೋಗಲಿ. ನೀವು ಸತ್ಯ ಹೇಳಿ. ನಿಮಗೆ ನಾವು ಏನೂ ಮಾಡುವುದಿಲ್ಲ. ನಿಮ್ಮ ಮೂರನೇ ಮಗ ಹರಿ ಇಲ್ಲಿ ಬಂದಿದ್ದರಂತೆ. ಇಂದಬೆಟ್ಟು, ನಾವೂರು, ಮಿತ್ತಬಾಗಿಲ್, ಬಂಗಾಡಿಗಳಲ್ಲೆಲ್ಲ ತಿರುಗಿ "ಲೆವಿ" ಅಕ್ಕಿ ಸರಕಾರಕ್ಕೆ ಕೊಡಬಾರದೆಂದು ರೈತರಿಗೆ ದುರ್ಬೋಧನೆ ಮಾಡಿದ್ದರಂತೆ

ಸರಕಾರಕ್ಕೆ ಅದರ ರಿಪೋರ್ಟು ಬಂದಿದೆ. ಅರೆಸ್ಟು ಮಾಡಲು ನಮಗೆ ಆರ್ಡರಿದೆ. ಎಲ್ಲಿದ್ದಾರೆ ಅವರು?"

"ನನಗೇನು ಗೊತ್ತು?"

"ನೀವು ಹೀಗೆಲ್ಲ ಮಾತನಾಡಬೇಡಿ. ನಾವು ಕೊನೆಗೆ ನೀವೇ ಇದಕೆ ಕಾರಣರೆಂದು ನಿಮ್ಮನ್ನೇ ಅರೆಸ್ಟು ಮಾಡಿ ಒಯ್ಯಲುಂಟು."

"ಅಗತ್ಯ. ಈಗಲೇ ಮಾಡಿ. ಧೋತರ ಅಂಗಿ ಕೋಟು ಹಾಕಿಕೊಂಡು ಬರಲು ಪುರುಸೊತ್ತು ಕೊಡುತ್ತೀರಾ? ಅಥವಾ ಇದೇ ಬೈರಾಸಿನಿಂದಲೇ ಬರಲಾ?"

ಪೋಲೀಸರು ಮೌನದಿಂದ ಇದ್ದರು.

"ಯಾಕೆ ಮೌನ ತಾಳಿದಿರಿ? ಅರೆಸ್ಟು ಮಾಡಿ. ಬೇಕಾದರೆ ಈ ಹೊತ್ತು ಇಲ್ಲೇ ಇರಿ. ನನ್ನೊಂದಿಗೆ ಬನ್ನಿ. ನಾನು ಹಳ್ಳಿಗಳಿಗೆ ತೆರಳಿ ನಿಮ್ಮ ಇದಿರೇ ಅಕ್ಕಿ ಮುಡಿ ಒಂದನ್ನೂ ಈ ಬ್ರಿಟಿಶ್ ಸರಕಾರಕ್ಕೆ ಕೊಡಬೇಡಿರೆಂದು "ದುರ್ಬೋಧನೆ" ಮಾಡುತ್ತೇನೆ ರೈತರಿಗೆ! ಯಾಕೆ ಕೊಡಬೇಕು ರೈತರು ಅಕ್ಕಿ? ಯಾರಿಗೆ ಯಾರು ಕೊಡಬೇಕು? ಯಾಕೆ ಕೊಡಬೇಕು? ಕೊಡಲು ಏನು ಉಪಕಾರ ಮಾಡಿದೆ ನಿಮ್ಮ ಸರಕಾರ ನಮ್ಮ ರೈತರಿಗೆ? ಯಾವ ಸರಕಾರ ನಮ್ಮ ಸುಖದುಃಖ ಕೇಳುತ್ತದೆ? ಒಂದು ವರುಷ ನೇಜಿಗೆ ಬಂಬೂಚು ರೋಗ ಬಂತು. ಕಾಡು ಪ್ರಾಣಿಗಳು ಬಂದು ಪೈರನ್ನು ನಾಶ ಮಾಡುವುದಂತೂ ತಪ್ಪಿದ್ದಲ್ಲ. ಒಂದು ಕೋವಿ ಲೈಸನ್ಸು ಕೊಡಬೇಕೆಂದರೆ ಕೊಡುವಂತಿಲ್ಲ. ಕೊಡಬೇಕಾದರೆ ನೂರು ಸಲ ಹೋಗಿ ಬರಬೇಕು. ಲಂಚ ಕೊಡಬೇಕು ನಿಮಗೆ. ಕೋವಿ ದೊರೆತರೂ ರೈತನ ಕಷ್ಟವೇನೂ ನೀಗಲಿಲ್ಲ ಅಲ್ಲಿಗೇ. ಆಚೆ ವರುಷ ನೇತ್ರಾವತಿಗೆ ನೆರೆ ಬಂದು ಗದ್ದೆ ಹೊಳೆ ಏಕ ಪ್ರಕಾರವಾಯಿತು. ನೆಟ್ಟ ನೇಜಿ ನಾಶವಾಗಿ ಗದ್ದೆಗಳಲ್ಲಿ ಉಸುಕು ತುಂಬಿತು. ಈ ವರುಷ ಚೋರನ ಎತ್ತು ಹುಲಿ ಬಾಯಿಗೆ ತುತ್ತಾಯಿತು. ತುಕ್ರನ ಹೆಂಡತಿ ಹಡೆದು ಪ್ರಾಣ ಬಿಟ್ಟಳು. ಅಹ್ಮದ್ ಬ್ಯಾರಿಗೆ ಮಲೇರಿಯಾ ಗಡ್ಡೆಯೇ ಆಗಿದೆ. ಜ್ವರ ಬಂದು ಬಂದು ಬ್ಯಾರಿ ಹಾಸಿಗೆಯಿಂದ ಏಳುವುದೇ ಇಲ್ಲ. ಯಾರು ಕೇಳುತ್ತಾರೆ ಅವರನ್ನು? ನೆರೆ ಹಾವಳಿಗೀಡಾದವರಿಗೆ ನಿಮ್ಮ ಸರಕಾರ ಏನಾದರೂ ಪರಿಹಾರ ಕೊಟ್ಟಿತೇ? ಎತ್ತು ಕಳಕೊಂಡವನಿಗೆ ಎತ್ತು ಕೊಡು

ತ್ತೀರಾ? ನರಳುವವರಿಗೆ ಒಂದು ಆಸ್ಪತ್ರೆಯುಂಟಾ ಈ ಊರಿಗೆ? ವರುಷೇ ವರುಷೇ ಈ ಬಂಗಾಡಿಯಲ್ಲಿ ಜನಸಂಖ್ಯೆ ಕರಗುತ್ತಾ ಹೋಗುತ್ತಿದೆ. ಹೊರತು ಏರುವುದಿಲ್ಲ. ಸತ್ತವರಂತೂ ಸತ್ತರು. ಇದ್ದವರೂ ಈ ಅವಾಂತರಗಳಿಂದ ಸತ್ತವರಂತೆಯೇ ಇದ್ದಾರೆ. ಅದರ ಮೇಲೆ ನಿಮ್ಮ ದರ್ಪ! ನಿಮ್ಮ ಕಾಯಿದೆ! ನಿಮ್ಮ ಕಾನೂನ! ನಿಮ್ಮ ಸರಕಾರ! ನಿಮಗೆ ಲೆವಿ ಕೊಡಬೇಕು ಅಕ್ಕಿ ಮುಡಿ! ನಿಮಗೆ ನಮ್ಮ ಸುಖದುಃಖ ಏನು ಗೊತ್ತಾಗುತ್ತದೆ.? ತಿಂಗಳಾದ ಕೂಡಲೇ ಬರುತ್ತದೆ ಕಾಗದದ ಚೂರು. ಚೆಲ್ಲುತ್ತೀರಿ ನೀರಿನ ಹಾಗೆ. ಕಡಿಮೆ ಬಿದ್ದರೆ ಹೆದರಿಸಿ ಬೆದರಿಸಿ ತರುವ ವಿದ್ಯೆಯೂ ಗೊತ್ತುಂಟು! ನೋಡೋಣ, ಈ ಅರಣ್ಯದಲ್ಲಿ ಮನೆ ಮಾಡಿ ಈ ಕಷ್ಟಗಳಿಗೆಲ್ಲ ಎದೆಗೊಟ್ಟು ನಿಂತು ಒಂದು ವರುಷ ಬೇಸಾಯ ಮಾಡಿ. ಆಗ ಯಾರಾದರೂ ಬಂದು "ಅಕ್ಕಿ ಮುಡಿ ಹೊರಳಿಸು" ಎಂದರೆ ನೀವು ಅರ್ಧ ಬೆಲೆಗೆ ಹೊರಳಿಸುತ್ತೀರಾ ನೋಡೋಣ"

ಗೋವಿಂದರಾಯರ ಆವೇಶದ ಮಾತು ಕೇಳಿ ಪೋಲೀಸರು ಸ್ತಬ್ಧರಾಗಿ ಹೋದರು. ಸೂರ್ಯ ನೆತ್ತಿಯಿಂದ ಇಳಿಯ ತೊಡಗಿದ್ದುದರಿಂದ ಅವರ ದರ್ಪವೂ ಸ್ವಲ್ಪ ಇಳಿಯಿತು.

"ಹೌದು ಸ್ವಾಮೀ. ನೀವು ಹೇಳುವುದೆಲ್ಲ ನಿಜ. ಆದರೆ ಏನು ಮಾಡೋಣ. ಈ ಒಂದು ಹೊಟ್ಟೆ ಇದೆಯಲ್ಲ. ಅದರ ಕರ್ಮಕ್ಕೆ ಈ ಕೆಲ್ಸ ಮಾಡುತಿದ್ದೇವೆ" ಎಂದೊಬ್ಬ ಉಸುರಿದ.

ಗೋವಿಂದರಾಯರು ತಮ್ಮ ಹೊಟ್ಟೆಯನ್ನು ಮುಟ್ಟಿಕೊಂಡು ಹೇಳಿದರು. "ಹೌದು. ಹೊಟ್ಟೆಯ ಕರ್ಮ. ಆದರೆ ಅದು ನಿಮಗೆ ಮಾತ್ರವಲ್ಲ, ನನಗೂ ಇದೆ. ನನ್ನ ಮಕ್ಕಳಿಗಿದೆ. ನನ್ನ ಊರಿನವರಿಗಿದೆ. ನಮ್ಮ ದೇಶದ ಎಲ್ಲ ಜನಕ್ಕಿದೆ. ಜನರಿಗೆ ಮಾತ್ರವಲ್ಲ, ಪಶು ಪಕ್ಷಿ, ಕ್ರಿಮಿ ಕೀಟ, ಹಾವು ಹೆಬ್ಬಾವು ಮೊದಲಾದ ಸಮಸ್ತ ಜಂತುಗಳಿಗಿದೆ. ಅವೂ ಒಂದಲ್ಲವಿದ್ದರಿನ್ನೊಂದು ವಿಧಾನದಿಂದಹೊಟ್ಟೆ ತುಂಬಿಸಿಕೊಳ್ಳುತ್ತವೆ. ಒಂದನ್ನು ಇನ್ನೊಂದು ನುಂಗುತ್ತದೆ. ಹುಲಿ ದನದ ಗಂಟಲು ಮುರಿದು ರಕ್ತ ಹೀರುತ್ತದೆ. ಹೆಬ್ಬಾವು ಇಡೀ ಜೀವವನ್ನೇ ಗುಳುಂ ಎಂದು ನುಂಗಿಬಿಡುತ್ತದೆ. ಮನುಷ್ಯರು ಈ ಹುಲಿ ಹೆಬ್ಬಾವುಗಳಿಗೆ ಸಮವಾ? ಮನುಷ್ಯನಿಗೆ ದೇವರು ಬುದ್ಧಿ ಕೊಟ್ಟಿದ್ದಾನಲ್ಲಾ ಸದಸದ್ವಿವೇಕವನ್ನಿತ್ತಿದ್ದಾನಲ್ಲಾ. ಅದನ್ನು ಈ ರೀತಿ ದುರುಪಯೋಗ

ಗೊಳಿಸುವುದಾ? ಹೊಟ್ಟೆಯ ಹೆಸರಿನಲ್ಲಿ ನಿಶ್ಶಸ್ತ್ರಸ್ತ್ರೀಪುರುಷರ ಮೇಲೆ ಗುಂಡು ಹಾರಿಸುವುದೇನು? ನಿಮ್ಮ ಬಿಚ್ಚುಗತ್ತಿಗಳಿಂದ ಅವರ ಕೋಮಲ ಎದೆಗಳಿಗೆ ಗಂಟಲುಗಳಿಗೆ ತಿವಿಯುವುದೇನು? ಗಂಟಲು ಮುರಿವ ವನ್ಯಹುಲಿಗಳಿಗಿಂತಲೂ ಮನುಷ್ಯ ಕ್ರೂರನಾದನಲ್ಲಾ. ಹುಲಿಗಳೂ ಮನುಷ್ಯರ ಗಂಟಲು ಮುರಿಯು ವುದು ವಿರಳ. ಹಾಗಿರುವಾಗ, ಹುಲಿಗಳಿಗಿಂತಲೂ ಕಡೆಯಾಗಿ ಹೊಟ್ಟೆಯ ಹೆಸರಿನಿಂದ ನೀವು ಮನುಷ್ಯತ್ವವನ್ನೇ ಕಳೆದುಕೊಂಡಿರಲ್ಲ !''

ಪೋಲಿಸರ ಮೋರೆ ಚಿಕ್ಕದಾದುವು! ''

ಗೋವಿಂದರಾಯರು ಅಲ್ಲಿಗೇ ನಿಲ್ಲಿಸಲಿಲ್ಲ. 'ಮನುಷ್ಯತ್ವ ಕಳೆದುಕೊಂಡ ವನು ಏನನ್ನೂ ಮಾಡುತ್ತಾನೆ. ಯಾವ ಪಾಪಕೃತ್ಯಕ್ಕೂ ಅವನು ಹೇಸುವು ದಿಲ್ಲ. ಈ ಹೊತ್ತು ಮಂದಿ ಮಕ್ಕಳ ತಲೆ ಒಡೆಯುತ್ತೀರಿ. ಎಷ್ಟೋ ವೀರ ರನ್ನು ತಿಂದು ತೇಗಿದಿರಿ. ಎಷ್ಟೋ ತಾಯಂದಿರು ಮಕ್ಕಳ ಸಾವಿಗಾಗಿ ಸಾವು ಬರುವವರೆಗೂ ರೋಧಿಸುವಂತೆ ಮಾಡಿದಿರಿ. ಮನೆಯಿಂದ ಹೊರಟವರು ಮತ್ತೊಮ್ಮೆ ಬಂದು ಹೆತ್ತವರ ಮೊಗ ನೋಡಲಿಲ್ಲ. ಗಂಡಂದಿರನ್ನು ಕಳೆದು ಕೊಂಡ ಸತಿಯರೆಷ್ಟೋ. ಸೆರೆಮನೆಗಳಲ್ಲಿ ಇನ್ನೂ ಸಾವಿನ ಬದುಕು ದೂಡು ತ್ತಿರುವ ಭಕ್ತಬಂಧಿಗಳೂ ಬಹಳ ಮಂದಿ ಇದ್ದಾರೆ. ಇಷ್ಟೂ ನಿಮ್ಮ ಕೈಯಿಂದಾ ಯಿತು. ನಿಮ್ಮ ಪಾಷಾಣ ಹೃದಯಗಳಿಗೆ ಇವರೆಲ್ಲ ಬಲಿಯಾದರು. ನೀವು ಮನುಷ್ಯರಲ್ಲ. ನೀವು ಮಾನವರಲ್ಲ. ನೀವು ಈ ಕಲಿಯುಗದ ದಾನವರು.''

ಪೋಲೀಸರು ತುಟಿ ಬಿಚ್ಚಲಿಲ್ಲ.!

"ದಾನವರನ್ನೂ ದಹಿಸುವ ಅನಂತ ಶಾಶ್ವತ ಶಕ್ತಿಯೊಂದಿದೆ ಎಂಬು ದನ್ನು ಮರೆಯದಿರಿ. ಅದಕ್ಕೆ ಈ ತಾಮಸಿಕ ಶಕ್ತಿಯನ್ನು ನಿರ್ನಾಮ ಮಾಡುವ ಪ್ರಚಂಡ ಬಲವಿದೆ. ಅದು ಭೂಕಂಪದಷ್ಟು ಆಕಸ್ಮಿಕ. ಸಿಡಿಲಿನಂತೆ ಭೀಕರ. ಮಿಂಚಿನಷ್ಟು ವೇಗ, ಗಾಳಿಯಷ್ಟು ವ್ಯಾಪಕ. ಅದಕ್ಕೆ ನಿಮ್ಮ ಬಾಣ ಬಂದೂಕು, ಬಾಂಬುಗಳು ಈಡಲ್ಲ. ಮನುಷ್ಯರು ಅಳಿದರೂ ಆ ಶಕ್ತಿಗೆ ಅಳಿ ಯಿಲ್ಲ. ಅಳಿದವರ ಜಡ ದೇಹಗಳು ಮಣ್ಣುಪಾಲಾದುವು ಎಂದು ನೀವು ತಿಳಿದಿರ ಬಹುದು. ಆದರೆ ಮಹಾಪುರುಷರ ಮೈಮಣ್ಣೇ ಹೊಸ ಧಾನ್ಯಗಳಿಗೆ ಸಾರ ಸರ್ವಸ್ವವನ್ನು ನೀಡುತ್ತದೆ. ಅದನ್ನು ತಿಂದ ಜನ ಹೊಸ ಚೈತನ್ಯದಿಂದ ಮುಂದೆ ಬರುವರು. ಆಕಾಶದಲ್ಲಿ ಚಲಿಸುತ್ತಿರುವ ನಮ್ಮ ಮಹಾಪುರುಷರ

ಮಹಾ ಆತ್ಮಗಳು ಹಕ್ಕಿಗಳ ಸವಿಗೊರಲಿನ ಮೂಲಕ ನಿದ್ದೆ ಹೋದವರನ್ನು ಬಡಿದೆಬ್ಬಿಸುವುವು. ಗಾಳಿಯಲ್ಲಿ ಅವರ ಮಾತು ಅಲೆ ಅಲೆಯಾಗಿ ತೇಲಿ ಬಂದು ನಮ್ಮ ಜನರನ್ನು ಪ್ರೇರೇಪಿಸುವುದು. ಸೂರ್ಯನ ಪ್ರಚಂಡ ಶಕ್ತಿ ನಮ್ಮ ಜನರ ರಕುತವನ್ನು ಒಮ್ಮೊಮ್ಮೆ ಕುದಿಸದೇ ಇರಲಾರದು. ಆಗ ನೀವು ಒಬ್ಬನನ್ನು ಕೊಂದರೆ ಮತ್ತೊಬ್ಬ ಎದೆಗೊಡುವ. ನನ್ನನ್ನು ನೀವು ಹಿಡಿದರೆ ನನ್ನ ಮಕ್ಕಳು ಬಿಡಲಾರರು. ಒಂದು ತಲೆಗಲ್ಲ ಈ ಹೋರಾಟ. ಸ್ವರಾಜ್ಯದೊರೆಯು ದಿದ್ದರೆ ತಲತಲಾಂತರಗಳ ವರೆಗೆ ಸಾಗುವುದು ನಿಶ್ಚಯ. ತಲೆತಲಾಂತರಗ ಳಿಂದಲೂ ಇದು ನಡೆಯುತ್ತ ಬಂದಿದೆ. ಗಾಂಧೀ ತಲೆ ಇದ್ದಾಗಲೇ ಲಭಿಸಿದರೆ ಪುಣ್ಯ. ಇಲ್ಲದಿದ್ದರೆ ಅದು ಅಲ್ಲಿಗೇ ನಿಲ್ಲುವುದಿಲ್ಲ. ಸ್ವಾತಂತ್ರ್ಯ ದೊರೆಯುವಾ ಗಲೇ ನಿಲ್ಲುವುದು. ಆಗಲಾದರೂ ನಮ್ಮ ಕಂಬನಿ ಸುರಿದಲ್ಲಿ ಹೂಗಳ ಗಿಡಗಳೇ ಚಿಗುರುವುವು. ಆಗ ಬಾಗಿದ ತಲೆಗಳು ತಲೆ ಎತ್ತಿ ನಡೆಯುವುವು. ನಮ್ಮ ದೇಶದ ಶೀಲಕ್ಕೆ ಬಂದ ಕುಂದು ಮಾಯವಾಗುವುದು. ನಾವು ಮಕ್ಕಳಿದ್ದಾಗ ಯುವಕರಿದ್ದಾಗ, ಪುರುಷರಾದಾಗ, ಹಣ್ಣು ಹಣ್ಣು ಮುದುಕರಾದಾಗ ಸಹಿಸಿದ ಅನಂತ ಕಷ್ಟಗಳು ನಮ್ಮ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕ ಳಿಗೆ ಇದಿರಾಗಲಿಕ್ಕಿಲ್ಲ. ಆಗ ನೀವೆಲ್ಲಿರುತ್ತೀರಿ? ನಿಮ್ಮ ಮಕ್ಕಳೆಲ್ಲಿರುತ್ತಾರೆ? ಈಗ ನಿಮಗೆ ಹೊಟ್ಟೆಗೆ ಕೊಡುತ್ತಿರುವ ಬ್ರಿಟಿಶರ ಗತಿಯೇನಾಗುತ್ತದೆ?"

ಪೋಲೀಸರೊಬ್ಬರೂ ಉಸಿರೆತ್ತಲಿಲ್ಲ.

"ಬ್ರಿಟಿಶರು ಗಂಟು ಮೂಟೆ ಕಟ್ಟಿ ಹೊರಡಲೇ ಬೇಕು. ಆಗ ನಿಮ್ಮ ಗತಿಏನು? ನಿಮ್ಮ ಹೆಂಡತಿ ಮಕ್ಕಳ ಸ್ಥಿತಿಏನು? "ಅವರ ತಲೆಯನ್ನು ಒಡೆಯಿರಿ ಅವರ ಮಕ್ಕಳ ಕರುಳು ಬಗಿಯಿರಿ! ಅವರ ಸ್ತ್ರೀಯರನ್ನು ಎಳೆಯಿರಿ! ಅವರ ಮನೆಗಳನ್ನು ಸುಡಿರಿ. ಇವನೇ ನನ್ನ ಕಾಲುಮುರಿದವನು! ಅವನ ಕಾಲು ಕಡಿ ಯಿರಿ! ಇವನು ನನ್ನ ತಲೆಗೂದಲನ್ನು ಹಿಚುಕಿದವನು! ಅವನ ಗೋಣು ಹಿಚುಕಿರಿ. ಸತ್ತ ಅವರ ವಿರೂಪ ಹೆಣಗಳನ್ನು ಅರಬೀ ಸಮುದ್ರಕ್ಕೆ ಎಸೆ ಯಿರಿ! ಅವರನ್ನು ಸಂಬಿದವರ ಕಳೇಬರಗಳ ಮೇಲೆ ಕಾಲುಗಳನಿಟ್ಟು ಕೊಂಡು ಬ್ರಿಟಿಶರು ಅರಬಿ ಸಮುದ್ರ ದಾಟಿ ಹೋಗಲಿ!" ಎಂದು ಉದ್ರಿಕ್ತ ನಮ್ಮ ಜನಾಂಗ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಲೆತ್ನಿಸಿದರೆ ನೀವು ಮಾಡುವುದಾದರೂ ಏನು? ಯಾರು ರಕ್ಷಿಸುವವರು ನಿಮ್ಮನ್ನು? ಈ ಒಣ

ಕಟ್ಟಿಗೆ ಈ ಕಬ್ಬಿಣದ ತುಂಡು ನಿಮ್ಮನ್ನು ಪಾಲಿಸುತ್ತದೆಯೆಂದು ತಿಳಿದಿರಾ?''

ಪೋಲೀಸರು ಅತ್ಯಂತ ಆಶ್ಚರ್ಯದಿಂದಲೂ ಗಾಬರಿಯಿಂದಲೂ ಅವರನ್ನು ನೋಡತೊಡಗಿದರು. ಗೋವಿಂದರಾಯರು ಒಂದು ಚಿಟಿಕೆ ನಸ್ಯ ಏರಿಸಿ ನುಡಿದರು.

"ಪರದೇಶಗಳಲ್ಲಾದರೆ ಆ ರೀತಿ ಮಾಡದೆ ಬಿಡಲಾರರು. ನಿಮ್ಮನ್ನೆಲ್ಲ ಜೀವಂತ ಸುಟ್ಟಾರು. ಆದರೆ ಆ ಮುಯ್ಯಿ ತೀರಿಸಿಕೊಳ್ಳುವ ಕಾಲ ನಮ್ಮ ದೇಶಕ್ಕೆ ಬರುವುದು ಬೇಡ. ನಮ್ಮ ಜನರ ಸಂಸ್ಕೃತಿಗೆ ಅದು ಹೇಳಿದುದಲ್ಲ ಅನ್ಯಾಯ ಬಗೆದವರಿಗೆ ಕೇಡು ಮಾಡುವುದು ನಮ್ಮ ಧರ್ಮವಲ್ಲ. ಗಾಂಧಿ ಮಹಾರಾಯ ಅದನ್ನೇ ಹೇಳುತಿದ್ದಾನೆ. ಗಾಂಧೀ ಜವಾಹರಲಾಲರಂತಹ ಮಹಾ ಪುರುಷರು ಬದುಕಿರುವುದರಿಂದಲೇ ನೀವು ಬದುಕಿರುವಿರಿ. ಅವರು ಬದುಕಿರುವಾಗಲೇ ನಮ್ಮ ಬದುಕು ನಮ್ಮ ಕೈಗೆ ಬಂದರೆ ನೀವೂ ಬದುಕಿದಿರಿ. ಸ್ವರಾಜ್ಯ ಲಭಿಸಿದರೂ ನಿಮ್ಮ ಒಂದು ಕೂದಲನ್ನು ಕೊಂಕಿಸಲು ಅವರು ಬಿಡಲಿಕ್ಕಿಲ್ಲ. ಆದುದರಿಂದ ಈ ಕ್ಷಣಿಕ ಹೊಟ್ಟೆ ತೃಪ್ತಿಗಾಗಿ ಮಾಡಬಾರದು ದನ್ನು ಮಾಡುವುದು ತರವಲ್ಲ. ಅಹಂಕಾರ, ದರ್ಪ ಇವೆಲ್ಲ ಎಷ್ಟು ದಿನದ ಬಾಳ್ವೆಗೆ?''

ಅವರು ಮಾತು ನಿಲ್ಲಿಸಿದ ಮೇಲೆ ಮುದುಕ ಪೋಲೀಸಿನವನೊಬ್ಬ ಕೈ ಜೋಡಿಸಿದ. "ಸ್ವಾಮೀ, ತಪ್ಪಾಯಿತು. ನೀವು ದೊಡ್ಡವರು. ತಿಳಿಯದೇ ಮಾತನಾಡಿದೆವು. ನಮಗೂ ಈ ಚಾಕರಿ ಸಾಕಾಗಿದೆ. ಏನಾದರೂ ಕೆಲಸ ತೋರಿಸದಿದ್ದರೆ ನಮ್ಮ ಮೇಲೆ ಗುರ್ ಗುರ್ ಮಾಡುತ್ತಾರೆ. ಅದಕ್ಕೆ ಬಂದೆವು ನಿಮ್ಮ ಮಗ ಎಲ್ಲೋ ಹೊರಟು ಹೋಗಿದ್ದಾರೆಂದು ರಿಪೋರ್ಟು ಮಾಡುತ್ತೇವೆ ಅವರನ್ನು ಹಿಡಿದು ನಮಗೇನಾಗಬೇಕು? ''

ಅವರೆಲ್ಲ ಕೆಂಪು ಮುಂಡಾಸನ್ನು ತೆಗೆದಿಟ್ಟುದುದರಿಂದ, "ನಿಮ್ಮ ಊಟ ಆಗಿದೆಯಾ?'' ಎಂದು ಕೇಳಿದರು ಗೋವಿಂದರಾಯರು.

"ಇಲ್ಲ ಸ್ವಾಮಿ.''

"ಹಾ, ಆಗಲೇ ಹೇಳಬಹುದಿತ್ತಲ್ಲ. ಊಟವಾದ ಮೇಲೆಯೇ ಮಾತನಾಡುತ್ತ ಕುಳಿತುಕೊಳ್ಳಬಹುದಿತ್ತು. ನನಗೂ ಯಾರಾದರೂ ಬೇಕು'' ಎಂದ ಗೋವಿಂದರಾಯರು ಅಡಿಗೆ ಮನೆಗೆ ತೆರಳಿದರು. ಸೀತಮ್ಮನವರು

ಅಳುತ್ತ ಕುಳಿತಿದ್ದರು. "ನೀವು ಆ ಘಟಿಂಗರೊಡನೆ ಯಾಕೆ ಆ ರೀತಿ ಮಾತ ನಾಡುತ್ತೀರಿ? ಎಲ್ಲಾದರೂ ಕೋಪದಿಂದ ಒಂದು ಹೊಡೆದರೆ ನಿಮಗಷ್ಟೇ ಸಾಕು" ಎಂದು ಅವರು ತಲೆಗೆ ಕೈಯಿಟ್ಟುಕೊಂಡರು.

"ಅದೇನು ಅಮಟೆ ಕಾಯಿ ಗೂರಟಾ? ಬಿಟ್ಟು ಬಿಡು ಅದೆಲ್ಲಾ. ಒಂದಿಷ್ಟು ಅನ್ನಮಾಡು. ಬಿಸಿಲಿಗೆ ಬಂದಿದ್ದಾನೆ. ಊಟವನ್ನೇ ಮಾಡಿಲ್ಲ ನಂತೆ!"

"ನಾನವರಿಗೆ ಈಗ ಅನ್ನಮಾಡಿ ಹಾಕುತ್ತೇನೆ! ಪಾಯಸವನ್ನು ಮಾಡ ಲೇನು?" ಎಂದು ಸೀತಮ್ಮನವರು ವ್ಯಂಗ್ಯಧ್ವನಿ ತೆಗೆದರು.

"ಛೇ. ಛೇ. ಹಾಗಂದರೆ ಹೇಗೆ? ಮನೆಗೆ ಬಂದವ ಪೋಲೀಸನಿರಲಿ, ನಮ್ಮ ನಾಯಿಯಾದಿ ಇರಲಿ, ಪಂಡಿತನಿರಲಿ, ಘಟಿಂಗನಿರಲಿ ಊಟದ ಹೊತ್ತಿಗೆ ಒಂದು ಮುಷ್ಟಿ ಹಾಕುವುದು ನಮ್ಮ ಧರ್ಮ. ಹಾಗೆಲ್ಲ ಮರುಳುತನ ಮಾಡ ಬೇಡ! ಏಳು" ಎಂದು ಬೋಧಿಸಿ ಅನ್ನಕ್ಕೆ ನೀರಿಡಿಸಿದರು.

# ೧೨ನೆಯ ಅಧ್ಯಾಯ

ಕಾಲದ ಪಕ್ಷಿ ಗರಿಗೆದರಿ ಹಾರಿತು. ಕಾಲ ಭೈರವ ಲೀಲೆ ಆಡಿದ. ಅವನ ಕುಣಿತಕ್ಕೆ, ಮೈ ಮಣಿತಕ್ಕೆ, ಕಾಲಿನ ತುಳಿತಕ್ಕೆ ಸರಿಯಾಗಿ ಹಿಟ್ಲರ್. ಮುಸ್ಸೋಲಿನಿ, ಟೋಜೋ, ಚರ್ಚಿಲ್, ರೂಜವೆಲ್ಟ್, ಸ್ಟಾಲಿನ್ನರು ಹೆಜ್ಜೆಯಿಕ್ಕಿದರು. ಇಳೆಯಲ್ಲಿ ರಣಕಹಳೆ ಮೊಳಗಿತು. ಸಾಗರದ ತೆರೆಗಳೇ ವೈತಾಳಿದಂತೆ ಇತ್ತಂಡದವರ ಯುದ್ಧ ಹಡಗಗಳು ಸಮುದ್ರ ಮಥನದಲ್ಲಿ ಭಾಗವಹಿಸಿದುವು. ಜಲಾಂತರ್ಗಾಮಿಗಳು ಸಪ್ತ ಸಮುದ್ರಗಳಲ್ಲಿ ಸುಳಿದುವು. ವಿಮಾನಗಳಿಂದ ಆಕಾಶ ಮುಚ್ಚಿ ಹೋಯ್ತು. ಅವು ಸುರಿಸಿದ ಸಿಡಿಲು ಮಳೆಗೆ ಒಂದೊಂದೇ ಗುಡಿ ಗೋಪುರಗಳು ಜರಿದುವು. ಸಾವಿರಾರು ಟ್ಯಾಂಕುಗಳ ಓಡಾಟದಿಂದ ಹೊಲ ನೆಲಸಮವಾಯಿತು. ತೋಫುಗಳ ಗರ್ಜನೆಗೆ ಭೂಮಿ ಕಂಪಿಸಿತು. ಲಕ್ಷೋಪಲಕ್ಷ ಸೈನಿಕರು ಬರ್ಬರರಿಗಿಂತಲೂ ಬರ್ಬರತನದಿಂದ ಕಾದಾಡಿದರು. ಕೋಟೆ ಕೊತ್ತಲಗಳು ಪುಡಿ. ಪೇಟೆ ಪಟ್ಟಣಗಳು ಹುಡಿ. ಆಬಾಲವೃದ್ಧರು ಬಲಿಯೋ ಬಲಿ. ಮೊದ ಮೊದಲು ಈ ಸಂಹಾರದಲ್ಲಿ ಹಿಟ್ಲರನದ್ದೇ ಮೇಲುಗೈ. ಆ ಮೇಲೆ ರಶಿಯಾ, ಬ್ರಿಟನ್ ಮತ್ತು ಅಮೇರಿಕೆಗಳೇ ಸೈ ಸೈ. ಸಬ್ ಮರೀನ್, ರಕ್ಕೆ ಬಾಂಬು, ಆಕಾಶಬಾಣ ಮೊದಲಾದ ಯಾವ ಶಸ್ತ್ರಾಸ್ತ್ರಗಳಿಂದಲೂ ಅವರನ್ನು ತಡೆಯಲಾಗಲಿಲ್ಲ. ನಾಲ್ಕೂ ಕಡೆಗಳಿಂದ ಅವರು ಮುತ್ತಿ ಜರ್ಮನಿಯನ್ನು ತಿವಿದರು. ಜರ್ಮನಿ ನಿರ್ನಾಮವಾಯ್ತು. "ಅಪ್ಪಯ್ಯ, ಜರ್ಮನಿ ಬಿತ್ತು. ಜರ್ಮನಿ ಹಾಳಾಯ್ತು. ಜರ್ಮನಿ ದೇಹೀ ಎಂದಿತು" ಎಂದು ರಾಜಾ ಬಂದು ತಿಳಿಸಿದಾಗ ಗೋವಿಂದರಾಯರ ಕಣ್ಣುಗಳು ತೊಯ್ದುವು.

"ಹಿಟ್ಲರ್ ಏನಾದ? " ಎಂದು ಅವರು ಮೆಲುಧ್ವನಿಯಲ್ಲಿ ಕೇಳಿದರು.

"ಹಿಟ್ಲರನ ಕಥೆ ದೊಡ್ಡದು. ಆತ್ಮಹತ್ಯೆ ಮಾಡಿಕೊಂಡನೆಂದು ಹೇಳುತಿದ್ದಾರೆ. ಎಷ್ಟು ನಿಜವೋ? ಎಷ್ಟು ಸುಳ್ಳೋ? ಅವರ ಕೈಗೆ ಸಿಕ್ಕಿದ್ದರೆ

ಅವರೇ ಗುಂಡು ಹೊಡೆದಿರಲೂ ಬಹುದು. ಇಲ್ಲದಿದ್ದರೆ ನೆಪೋಲಿಯನ್ನನ್ನನ್ನು ಸ್ಟೀಮರ್ ಹೆಲಿನಾಕ್ಕೆ ಕಳಿಸಿದಂತೆ ಗುಟ್ಟಿನಿಂದ ಎಲ್ಲಾದರೂ ಕಳಿಸಿರಲೂ ಸಾಕು. ಅಥವಾ ಹಿಟ್ಲರ್ ಸ್ಪೆಯಿನ್, ಅರ್ಜೆಂಟೀನಗಳಿಗೆ ಓಡಿ ಹೋದನೋ? ಅಂತೂ ಇದೊಂದು ದೊಡ್ಡ ಮಿಸ್ಟರಿ"

"ಇನ್ನು ಜಪಾನ್ ಬಹಳ ದಿನ ಬದುಕಲಿಕ್ಕಿಲ್ಲ" ಎಂದು ತಂದೆ ಉದ್ಗರಿಸಿದರು.

ಅವರ ಭವಿಷ್ಯ ಸುಳ್ಳಾಗಲಿಲ್ಲ. ಅಮೇರಿಕನ್ನರು ಹಿರೋಶಿಮಾ ನಾಗಸಾಕಿ ನಗರಗಳ ಮೇಲೆ ಅಟಂ ಬಾಂಬುಗಳನ್ನೆಸೆದರು. ಎರಡೂವರೆ ಲಕ್ಷ ಜನರಿಂದ ತುಂಬಿದ್ದ ಹಿರೊಶಿಮಾ ಪಟ್ಟಣ ಅರೆಕ್ಷಣದಲ್ಲಿ ಮರುಭೂಮಿ ಯಾಗಿ ಪರಿಣಮಿಸಿತು. ಅಳಿದುಳಿದವರೇ ವಿರಳ. ಉಳಿದವರೂ ಚಿತ್ರ ಹಿಂಸೆಗೆ ಒಳಗಾಗಿದ್ದರು. ಒಂದು ಕಟ್ಟಡವೂ ಉಳಿಯಲಿಲ್ಲ. ಅದರ ಕರುಣ ಕಥೆಯನ್ನು ರಾಜಾ ತಂದೆಯ ಮುಂದೆ ಬಂದು ವಿವರಿಸಿದಾಗ ನೀರು ಧಾರಾಕಾರವಾಗಿ ಸುರಿಯಿತು ಅವರ ಕಣ್ಣುಗಳಿಂದ.

ರಾಜಾ ಬೆರಗಾಗಿ ಕೇಳಿದ. "ಯಾಕೆ ಅಪ್ಪಯ್ಯ? ಹಿಟ್ಲರನ ಅವ ತಾರ ಮುಗಿಯಿತೆಂದು ನಾನು ಹೇಳಿದಾಗಲೂ ನಿಮಗೆ ದುಃಖವಾಯ್ತು. ಈಗ ಜಪಾನಿನ ಬಗ್ಗೆ ಕೂಡಾ ಕನಿಕರ ಪಡುತಿದ್ದೀರಿ. ಈ ನಾಝಿಗಳು ಮತ್ತು ಜಪಾನಿ ಫ್ಯಾಸಿಸ್ಟರು ಮಾಡಿದ ಅನ್ಯಾಯ ಅತ್ಯಾಚಾರಗಳು ಅಷ್ಟಿ ಷ್ಟಲ್ಲ. ಪಾಪಿಗಳಿಗೆ ತಕ್ಕ ಪ್ರಾಯಶ್ಚಿತ್ತವಾಯಿತಲ್ಲ!"

ಅವರು ಗದ್ಗದಿತ ಕಂಠದಿಂದಲೇ ಉತ್ತರ ಕೊಟ್ಟರು. "ಯಾರು ಪಾಪಿಗಳು? ಯಾರು ಪುಣ್ಯವಂತರು? ಜರ್ಮನರೂ ಜಪಾನರೂ ಅನ್ಯಾಯ ಬಗೆದರು ನಿಜ. ಆದರೆ ಆಂಗ್ಲೋ-ಅಮೇರಿಕನ್ನರು ಮಾಡಿದ ಮಹಾ ಪುಣ್ಯ ಕಾರ್ಯ ಎಂಥಾದ್ದು? ಹಿರೊಶಿಮಾ ನಗರದ ನಾಶ ಅವರ ಪುಣ್ಯ ಕಾರ್ಯವಾ? ಎಲ್ಲ ರಾಕ್ಷಸ ಕುಲ. ಬಲಾಢ್ಯಾ ಪೃಥವೀ. ಜರ್ಮನಿ, ಜಪಾನ್‌ಗಳು ಬಿದ್ದುವು. ಅವರು ಅತ್ಯಾಚಾರಿಗಳು, ಪಾಪಿಗಳು, ಬರ್ಬರರು ಎಂದೆನ್ನು ತ್ತಾರೆ. ಅವರು ವಿಜಯಿಗಳಾಗುತಿದ್ದರೆ ಇವರಿಗೂ ಅವೇ ಹೆಸರುಗಳನ್ನಿಡು ತಿದ್ದರು. ರಣಹದ್ದುಗಳ ಬಣ್ಣ ಎಲ್ಲ ಒಂದೇ. ಅದಕ್ಕಾಗಿ ನಾನು ದುಃಖ ಪಡುವುದಿಲ್ಲ. ಆದರೆ, ಜರ್ಮನಿ ಮತ್ತು ಜಪಾನ್‌ಗಳಿಗೆ ದಾಸ್ಯದ ನೊಗ

ಗಳು ಬಂದುವಲ್ಲಾ ಎಂದು ನನ್ನ ತಾಪ. ಸಾವು ಬೇಕು ಪರರ ಗುಲಾಮ ಗಿರಿಯಲ್ಲಿ. ಸ್ವಾತಂತ್ರ್ಯ ಕಳೆದುಕೊಂಡ ಒಂದು ಜನಾಂಗದ ಗತಿ ಏನಾಗುತ್ತದೆ? ನಮ್ಮ ಸ್ಥಿತಿಯೇ ಅದಕ್ಕೊಂದು ಉದಾಹರಣೆ ಸಾಕ್ಷಿ! ನಮಗೆ ಸ್ವಾತಂತ್ರ್ಯ ವಿದೆಯಾ? ”

“ಇನ್ನು ನಮಗೆ ಸ್ವಾತಂತ್ರ್ಯ ಕೊಡದೆ ಬೇರೆ ಮಾರ್ಗವಿಲ್ಲ ಬ್ರಿಟಿಶರಿಗೆ. ಯುದ್ಧದಿಂದ ನಿರ್ವೀರ್ಯರಾಗಿದ್ದಾರೆ ಅವರು. ಸಾಲ ಕುತ್ತಿಗೆಯ ವರೆಗೆ ಬಂದಿದೆ. ಗಾಂಧಿ ಜವಾಹರಲಾಲರನ್ನೆಲ್ಲ ಬಿಡುಗಡೆ ಮಾಡಿದ್ದಾರೆ ಆಗಲೇ. ಇನ್ನೊಮ್ಮೆ ಅವರು ಹೋರಾಟ ಹೂಡಿದರೆ ೧೯೪೨ರ ನೂರ್ಮಡಿ ಆದೀತು. “ಸ್ವಾತಂತ್ರ್ಯ ಕೊಡಿ ಭಾರತಕ್ಕೆ” ಎಂದು ಇಂಗ್ಲೆಂಡ್, ಅಮೇರಿಕಾ, ರಶಿಯಾಗಳಲ್ಲೂ ಅನೇಕರು ಒತ್ತಾಯ ಮಾಡುತಿದ್ದಾರೆ. ಇನ್ನು ಹೇನಷ್ಟು ಕಾಲ ಹೋಗಲಿಕ್ಕಿಲ್ಲ.”

“ಹೌದು. ಅಷ್ಟು ಕಾಲ ಕಳೆಯಲಿಕ್ಕಿಲ್ಲ. ನನ್ನ ಕಾಲದಲ್ಲೇ ಅದು ಲಭಿಸಿದರೆ ಅದೂ ಒಂದು ಮಹಾ ಭಾಗ್ಯವೇ. “ಸ್ವಾತಂತ್ರ್ಯ” ಎಂಬ ಶಬ್ದ ನನ್ನ ಕಿವಿಗೆ ಬಿದ್ದರೆ ಸಾಕು. ಅಲ್ಲೇ ನನ್ನ ಪ್ರಾಣ ಹಾರಿ ಹೋದರೂ ಅಡ್ಡಿಯಿಲ್ಲ.”

“ಅಪ್ಪಯ್ಯಾ, ಹಾಗೆ ಮಾತನಾಡ ಬೇಡಿ”

“ಹಾಂ, ಮತ್ತೇನಾಗಬೇಕು ನನಗೆ? ಅಶ್ವತ್ಥಾಮ ಬಲಿವ್ಯಾಸ ಹನುಮಶ್ಚ ವಿಭೀಷಣ. ಅವರು ಚಿರಂಜೀವಿಗಳು. ಅವರಂತೆ ನಾನೂ ಚಿರಂಜೀವಿಯೆಂದು ತಿಳಿದು ಕೊಂಡಿದ್ದೀಯಾ ಏನು? ತೋಟದಲ್ಲಿ ಪೂರ್ಣ ಫಸಲು ಎಂದು ಬಂದೀತು ಎಂದು ದಾರಿ ನೋಡುತಿದ್ದೇನೆ ನಾನು. ಗಿಡಗಳಲ್ಲಿ ಫಲ ಸಮೃದ್ಧಿಯಾಗಿ ಬಂದಾಗ ನಿನಗೆ ಸಾತಂತ್ರ್ಯ ಬಂದ ಹಾಗೆ. ನನ್ನ ಜೀವಕ್ಕೆ ಮಾತ್ರ ಸ್ವಾತಂತ್ರ್ಯವೇ. ನಾನಿದ್ದರೆ ಇದ್ದೆ. ಇಲ್ಲದಿದ್ದರೆ ಇಲ್ಲ.”

“ಅವರಿಗೆ ಎಪ್ಪತ್ತರ ಮರುಳು. ನಿನಗೂ ಮರುಳಾ ರಾಜಾ? ಬೇರೇನೂ ಕೆಲಸ ಇಲ್ವಾ ನಿನಗೆ?” ಎಂದು ಸೀತಮ್ಮನವರು ನುಡಿದುದರಿಂದ ರಾಜಾ ಎದ್ದ.

ಹೌದು. ಗೋವಿಂದರಾಯರು ಸ್ವಲ್ಪ ಮರುಳರಂತೆಯೇ ಕಾಣುತಿದ್ದಾರೆ ಸೀತಮ್ಮನವರ ಕಣ್ಣಿಗೆ. ಒಂದೊಂದು ಸಲ ಸೊಂಟದ ಬೈರಾಸ್ ಬಿಚ್ಚಿದ್ದರೂ ಅವರಿಗೆ ಗೊತ್ತಾಗುವುದಿಲ್ಲ. ಮೊದಲು ಮುಂಜಾನೆ ಸ್ನಾನ ಮಾಡದೆ

ಏನನ್ನೂ ಬಾಯಿಗೆ ಹಾಕಿಕೊಳ್ಳುತಿದ್ದಿಲ್ಲ. ಈಗ ಸ್ನಾನ ಒತ್ತಟ್ಟಿಗಿರಲಿ ಗೇರು, ಮಾವಿನ ಎಲೆಗಳಿಂದ ಹಲ್ಲುಜ್ಜಿಕೊಳ್ಳಲೂ ಇಷ್ಟವಿಲ್ಲ. ಹಾಗೆ ಬಾಯಿ ಮುಕ್ಕುಳಿಸಿ, ಕೈ ಮೈ ಬಿಸಿ ಮಾಡುವ ನೆವದಿಂದ ಒಲೆಯ ಮುಂದೆಯೇ ಬಂದು ಬಿಡುವರು. ಕಾಫಿ ಹೊಟ್ಟೆಗೆ ಬಿದ್ದ ಮೇಲೆಯೇ ಅಲ್ಲಿಂದ ಏಳುವರು. ಅಲ್ಲಿಂ ದೆದ್ದು ಮತ್ತೊಂದೆಡೆ ಕುಳಿತವರು ತಾಸುಗಟ್ಟಲೆ ಕುಳಿತು ಬಿಡುವರು. “ಸ್ನಾನ ಕ್ಕಾಯಿತು. ಏಳಿ” ಎಂದು ಸೀತಮ್ಮನವರು ಕರೆದಾಗ, “ಹೌದಾ? ಆಯ್ತಾ. ಊಟಕ್ಕೆ ಆಯ್ತಾ?” ಎಂದು ನುಡಿದು ಏಳುವರು. ಸ್ನಾನಕ್ಕಾಗಿ ಕೊಟ್ಟೆ ಗೆಯ ವರೆಗೆ ಸೀತಮ್ಮನವರು ಹಿಂಬಾಲಿಸಬೇಕು. ಅವರ ತಲೆಯ ಮೇಲೆ ತಪ್ಪಲೆ ತಪ್ಪಲೆ ಬಿಸಿ ನೀರು ಸೀತಮ್ಮನವರೇ ಸುರಿಯಬೇಕು. ಎಷ್ಟು ಬಿಸಿ ಇದ್ದರೂ ಅವರಿಗೆ ತೃಪ್ತಿಯಿಲ್ಲ. ಮೈಯಿಂದ ಆವಿ ಏಳುವಂತಹ ಸುಡು ಸುಡು ನೀರನ್ನೇ ಬಯಸುತ್ತಾರೆ. “ಬೆನ್ನು ತಿಕ್ಕು” ಎಂದು ಬಯಸಿ ನುಡಿ ಯುತ್ತಾರೆ. “ನೀವು ತೀರ ಮಗುವಿನಂತೆ ಮಾಡುತ್ತೀರಿ” ಎಂದು ಸೀತಮ್ಮ ನವರೆಂದರೆ, “ಹೌದು. ನಿನಗೇನು ನಾಚಿಕೆಯಾಗುತ್ತದಾ?” ಎಂದು ಕೇಳುವರು.

ಸ್ನಾನ ತೀರಿಸಿ ಬಂದು ಬಾಳೆಯ ಎಲೆಯ ಮುಂದೆ ಕುಳಿತು ಬಿಡುವರು. ಜಪತಪ ಎಲ್ಲ ಅಲ್ಲೇ. ಒಂದು ಚಿಟಿಕೆ ಹಾಕುವುದರೊಳಗೆ ಎಲ್ಲ ಮುಗಿದು ಬಿಡುತ್ತವೆ ಈಗ. ಮೊದಲು ತಾಸುಗಟ್ಟಲೆ ಹಿಡಿಯುತಿತ್ತು. ತೋಟದಲ್ಲಿ ನೆಟ್ಟ ಹೂ, ತುಳಸಿಗಳನ್ನೆಲ್ಲ ಹರಿವಾಣದಲ್ಲಿ ತುಂಬಿಸಿ ಮುಂಜಾನೆಯೇ ದೇವರ [illegible] ಗೆಯು ಮುಂದಿಡುತಿದ್ದುದು ನಿತ್ಯ ಕರ್ಮ. ಪೂಜೆಗೆ ಕುಳಿತವರ [illegible] ಗವಾಗುತಿತ್ತು ಸೀತಮ್ಮನವರಿಗೆ. “ಬಂದೆನೇ [illegible] ದು ಅಲ್ಲಿಂದಲೇ ಗವರಿಸುತಿದ್ದರು. ವರುಷಗಳು ಕಳೆದಂತೆ ಪೂಜಾ ಸಮಯ ಕಡಿಮೆಯಾಗುತ್ತಾ ಬಂದಿತು. ಮಕ್ಕಳು ಮರಿ ಬಂದಾಗ ಮುಂಜಾನೆ ಪೂಜೆಯ ಶಾಸ್ತ್ರ ಮುಗಿಸಿ ಸಂಜೆ ತಾಳ ತೆಗೆದುಕೊಂಡು, “ರಾಮನ ಬಂಟ ಹನುಮಂತ। ತಿರುಪತಿ ಎಂಬುದು ವೈಕುಂಠ । ತಾಳ ತಂಬೂರಿ ಕೈಯೊಳಗೆ। ರಾಮನ ಧ್ಯಾನವು ಮನದೊಳಗೆ॥ ಎಂದು ಭಜನೆಗೆ ಕುಳಿತು ಬಿಡುತಿದ್ದರು. ಈ ಭಜನೆಯ ಹುಚ್ಚೂ ಬಹಳ ಸಮಯ ಉಳಿಯಿತು. ಈಗ ಅದೊಂದೂ ಇಲ್ಲ. “ಎಲ್ಲ ಘಟ್ಟ ಹತ್ತಿತು.

ಸುಮ್ಮ ಸುಮ್ಮಗೆ ಮಕ್ಕಳಿಗೆ ಅನ್ನುತಿದ್ದಿರಲ್ಲ. ಒಂದು ಜಪವಿಲ್ಲ; ಆಹ್ನಿಕ ವಿಲ್ಲ ಎಂದು. ನೀವು ಏನು ಮಾಡುತಿದ್ದೀರಿ ಈಗ?'' ಎಂದು ಒಮ್ಮೊಮ್ಮೆ ಸೀತ ಮ್ಮನವರು ಕೇಳುವುದುಂಟು.

"ನಾನೆಲ್ಲಿ ಬಿಟ್ಟಿದ್ದೇನೆ? ಸದಾ ಅವನದೇ ಚಿಂತೆಯಾಗಿದೆ ನನಗೆ. ಅದಕ್ಕೆ ಈಗ ಮಂತ್ರ ತಂತ್ರ ಬೇಕಾ? ಮನೆಯೇ ಆಗಬೇಕಾ? ಪತ್ರ ಫಲ ಪುಷ್ಪಗಳನ್ನು ಗಿಡಗಳಿಂದ ಕೊಯ್ಯಬೇಕಾ? ಎಲ್ಲ ಅವನವನ ಭ್ರಮೆ. ಅವ ನೊಂದು ಮಾಯೆ. ಅವನು ಸಾಕಾರ. ಅವನು ನಿರಾಕಾರ. ಇಡೀ ವಿಶ್ವವೇ ಅವನ ಮನೆ. ಅಣುರೇಣುತೃಣ ಕಾಷ್ಟಗಳಲ್ಲಿದ್ದಾನೆ. ಈ ಪಂಚ ಭೂತಾತ್ಮಕವಾದ ದೇಹದಲ್ಲೂ ಇದ್ದಾನೆ. ಇದೂ ಒಂದು ಅವನ ದೇಗುಲ. ಅವನು ಭಾವಾಕಾರ. ಮನಸ್ಸೇ ಪೂಜಾ ಸಾಧನ. ಜ್ಞಾನವೇ ಅರ್ಪಿಸುವ ಮಲ್ಲಿಗೆ ಪುಷ್ಪ. ನಾನು ಎಲ್ಲಿ ಕುಳಿತಿರುತ್ತೇನೋ ಅಲ್ಲೇ ಮಾಡಿ ಬಿಡುತ್ತೇನೆ ಅವನ ಪೂಜೆ. ಅದಕ್ಕೆ ಮನೆಯಾದರೂ ಅಷ್ಟೆ. ತೋಟವಾದರೂ ಅಷ್ಟೆ.''

ಆದರೆ, ಮನೆಯಲ್ಲಿ ಅವರು ಕುಳಿತಿರುವುದೇ ಕಡಿಮೆ. ತೋಟಕ್ಕೆ ಬಂದು ತಾಳೆಗೊರಗುವರು. ತೆಂಗು ಕಂಗುಗಳ ಮಡಲುಗಳು ಬಿದ್ದಾಗ ಅವರಿಗೆ ಹರ್ಷ. ಇನ್ನೂ ಕೆಲವು ಸೋಗೆಗಳು ಬಿದ್ದಾಗ ಮರ ಎತ್ತರವಾಗಿ ಫಲ ಬರಬಹುದೆಂದು ಅವರ ನಂಬಿಗೆ. ಒಮ್ಮೊಮ್ಮೆ ಕಂಗಿನ ಸಿಂಗಾರ ಹೂ, ತೆಂಗಿನ ಹೂ, ಅವರ ತಲೆಯ ಮೇಲೆ ಉದುರುತ್ತದೆ. ಬಂಗಾರದ ಸರಿಗೆ ಗಳಲ್ಲಿ ಕಟ್ಟಿದಂತೆ ಅವು ತಲೆಗೂದಲಿನಲ್ಲಿ ತೂಗುವುವು. ಅವನ್ನು ಹೆಕ್ಕಿ ತೆಂಗು ಕಂಗುಗಳನ್ನು ದಿಟ್ಟಿಸುವರು. ಹಾಂ, ಈ ಮರ ಹೂ ಬಿಟ್ಟಿತು. ಈ ಮರಕ್ಕೆ ತೆಂಗಿನ ಕೈಗಳೆಷ್ಟೆಂದು ನೋಡಬೇಕು'' ಎಂದು ಮನಸ್ಸಿನೊ ಳಗೇ ಅಂದುಕೊಳ್ಳುವರು. ಯೋಚನೆಯಲ್ಲೇ ಕಣ್ಮುಚ್ಚಿ ತಲ್ಲೀನರಾಗುವರು. ಸೀತಮ್ಮನವರು ಬಂದು ಕೈ ಹಿಡಿದು ಕರೆದಾಗ ನಿದ್ದೆಯಿಂದೆದ್ದವರಂತೆ ಏಳು ವರು.

ಈ ಸಲ ಕರೆಯಲು ಬಂದ ಸೀತಮ್ಮನವರು ಕಣ್ಣೀರು ಸುರಿಸುತ್ತಲೇ ಬಂದರು. ಏ ಮರುಳೇ, ಯಾಕೆ ಹೀಗೆ ಸದಾ ಕಣ್ಣೀರು ತೆಗೆಯುತ್ತೀ? ನಿನ್ನ ಕಣ್ಣೀರಿನ ನೀರೇ ಸಾಕು ಈ ತೋಟಗಳಿಗೆ. ಮುಂದಿನ ವರುಷ ನಾನು ನೇತ್ರಾವತಿಗೆ ಕಟ್ಟವನ್ನೇ ಕಟ್ಟುವುದಿಲ್ಲ ನೋಡು'' ಎಂದು ಸಿಟ್ಟಾದವರು ಗೋವಿಂದರಾಯರು.

ಸೀತಮ್ಮನವರು ಅವರ ಇದಿರಿಗೆ ಬಂದು, "ಮೋಹನನಿಗೆ ಮದುವೆ ಯಾಯಿತಂತೆ!" ಎಂದು ತಿಳಿಸಿದರು.

"ಮದುವೆಯಾದರೆ ಕಣ್ಣೀರು ಸುರಿಸಬೇಕಾ ಮರುಳೇ? ಸಂತೋಷ ಪಡಬೇಕಾದ ಸುದ್ದಿ".

"ಎಲ್ಲಿಯ ಸಂತೋಷ? ಬಾಲ ವಿಧವೆಯನ್ನೇ ಮಾಡಿಕೊಂಡನಂತೆ!"

"ಯಾರು ಹೇಳಿದರು ನಿನಗೆ?"

"ರಾಜಾ. ರಾಜಾ ಬರೆದಿದ್ದಾನೆ."

"ಹಾವಾ?" ಎಂದು ಕೇಳುತ್ತ ಸೀತಮ್ಮನವರ ಕೈಹಿಡಿದು ಗೋವಿಂದ ರಾಯರು ಎದ್ದು ಹೊರಟರು. ಬಿಸಿ ನೀರು ಕೊಟ್ಟಿಗೆಯ ಬಳಿ ಹರಿವ ತೋಡು ದಾಟಲು ಮತ್ತೆ ಸೀತಮ್ಮನವರೇ ಕೈ ಹಿಡಿಯ ಬೇಕಾಯ್ತು. ರಾಜಾ ಅನ್ಯ ಮನಸ್ಕನಾಗಿ ಮುಖ ಮಂಟಪದಲ್ಲಿ ಕುಳಿತಿದ್ದ. ಹೌದು. ಸೀತಮ್ಮನ ವರು ತಿಳಿಸಿದ ಸುದ್ದಿ ನಿಜ. ಮೈಸೂರಿನ ಒಬ್ಬ ಹೋಟ್ಲು ಮಾಲಿಕರ ಮಗಳು ಸಾವಿತ್ರಿಯನ್ನು ಮೋಹನ ಮದುವೆ ಮಾಡಿಕೊಂಡಿದ್ದ. ರಾಜಾ ಪತ್ರ ಓದಿ ಹೇಳಿದ.

ಪತ್ರ ಕೇಳಿದ ಸೀತಮ್ಮನವರು ಮತ್ತೆ ಕಣ್ಣೀರ್ಗರೆದರು. "ರಾಜ ನಿಗೆ ಮದುವೆ ಮಾಡಿದಾಗ ಸುಭಾಷಿಣಿ ಪುಷ್ಪವತಿ ಕೂಡಾ ಆಗಿರಲಿಲ್ಲ. ಮನೆ ತನ ನೋಡಿ, ಜಾತಕ ನೋಡಿ, ಹುಡುಗಿ ನೋಡಿ ಹೆಣ್ಣು ತಂದೆವು. ಶಿವರಾಯ ನಿಗೆ ತಾವೇ ಹೆಣ್ಣು ಕೊಡುತ್ತೇವೆಂದು ಸುಗುಣಳ ತಂದೆ ಮೂಲ್ಕಿಯಿಂದ ಕೇಳಿಕೊಂಡು ಬಂದರು. ಹರಿ ಒಂದು ಮಾತು ಕೇಳಿದ. ಮೋಹನ ಒಂದು ಸುದ್ದಿಯನ್ನೂ ಹೇಳಲಿಲ್ಲ. ತಾಯಿ ತಂದೆ ಜೀವಂತವಿರುವಾಗಲೇ ಅವರನ್ನು ಬಿಟ್ಟು ಮಾಡಿಕೊಂಡನಲ್ಲಾ? ಅಬ್ಬಾ, ಮಕ್ಕಳ ಮನಸ್ಸೇ!"

ಅದನ್ನು ಕೇಳಿದ ಗೋವಿಂದರಾಯರು ಹೆಂಡತಿ ಕಡೆ ನೋಡಿ ಹೊರಳಿಸಿ ನುಡಿದರು. "ಏ, ನೀನು ಎದೆ ನೊಂದು ಏನೇನು ಅನಬೇಡ. ಅದು ಒಳ್ಳೆಯದಲ್ಲ. ಎಳೆ ಮಕ್ಕಳಿಗಾದರೆ ಬುದ್ಧಿ ಇಲ್ಲ. ಅವರಿಗೆ ಹೇಳುವುದು ನಮ್ಮ ಕರ್ತವ್ಯ. ಬೆಳೆದು ದೊಡ್ಡವರಾದ ಬಳಿಕ ಅವರವರ ಸ್ವಬುದ್ಧಿಗೆ ತೋಚಿದುದನ್ನು ಮಾಡುವುದೇ ಹಿತಕರ. ಮನೆ ಬಿಟ್ಟು ಊರೂರು ತಿರುಗಿ ಹೆಣ್ಣು ನೋಡಿ ಮದುವೆ ಮಾಡಿಸುವ ದೇಹ ಸಾಮರ್ಥ್ಯ ನನಗುಂಟಾ?

ಇಲ್ಲಿಂದ ಮುಂಡಾಜೆಯ ವರೆಗೆ ನಡೆಯಲೂ ಅಸಮರ್ಥ. ನನ್ನ ಕಾಲು ಬಿತ್ತು. ನನ್ನ ಕಾಲವಾಯ್ತು. ನಾವು ಜೀವಂತವಿರುವಾಗಲೇ ಮದುವೆ ಯಾವ ಸುದ್ದಿ ಕೇಳಿದೆವಲ್ಲ! ಅಷ್ಟರಿಂದಲೇ ಸಂತೋಷ ಪಡೋಣ ನಾವು. ನಮಗಿನ್ನು ಏನಾಗಬೇಕು? "

" ನಮಗಿನ್ನು ಏನೂ ಬೇಡ. ಆದರೆ, ಬೇರೆ ಹುಡುಗಿಯರೇ ಇರಲಿಲ್ವಾ ಊರಿನಲ್ಲಿ? ಅದೇ ಹೆಣ್ಣಾಗಬೇಕಿತ್ತಾ? ಜಾತಿ ಬಾಂಧವರು ಏನೆಂದಾರು?"

" ಏನನ್ನುತ್ತಾರೆ? ಯಾರವರು ಅನ್ನುವವರು? ಹೇಳುವ ಶಾಸ್ತ್ರಿ, ಪುರೋಹಿತರನ್ನು, ಆ ಮಠ ಈ ಮಠ ಗಂಜಿ ಮಠದ ಸ್ವಾಮಿಗಳನ್ನು ಕರೆದು ಕೊಂಡು ಬಾ. ಅವರ ಜಾತಿ ಯಾವುದು ಎಂದು ಕೇಳುತ್ತೇನೆ. ಅವರು ಎಲ್ಲಿಂದ ಬಂದರು? ಎಲ್ಲಿ ಹುಟ್ಟಿದರು? ಹುಟ್ಟಿದಾಗಲೇ ಅಡ್ಡ ನಾಮ, ಉದ್ದ ನಾಮ, ಮೂರು ರಸ್ತೆ ಹಣೆಗೆ ಬಳಿದುಕೊಂಡು ಬಂದಿದ್ದರೋ ಎಂದು ಕೇಳೋಣ. ಹೇಳುವುದು ಶಾಸ್ತ್ರ ಇಕ್ಕುವುದು ಗಾಳ. ಉಡುಪಿಯಲ್ಲಿ ವೇಶ್ಯೆಯರ ಒಂದೊಂದು ಮನೆ ಒಂದೊಂದು ಅರಮನೆಯಂತಿದೆ. ಯಾರು ಕಟ್ಟಿಸಿಕೊಟ್ಟರು ಅವರಿಗೆ? ಜಾತಿ! ಜಾತಿ! ದೇವರು ಯಾವ ಜಾತಿ? ಜಾತಿ ಸುಟ್ಟಿತು! ಜಾತಿ ಜಾತಿಯೆಂದೇ ನಮ್ಮ ಜನಾಂಗಕ್ಕೆ ಅದೋ ಗತಿ ಬಂತು. ಒಂದ ನ್ನು ಕಂಡರೆ ಇನ್ನೊಂದಕ್ಕೆ ವೈರ! ಒಬ್ಬರನ್ನು ಕಂಡರೆ ಮತ್ತೊಬ್ಬರಿಗೆ ಸಹನೆ ಯಿಲ್ಲ. ಒಂದೊಂದು ಮನೆಗೆ ಒಂದೊಂದು ಕಂಪೌಂಡಿದ್ದಂತೆ ಒಂದೊಂದು ಜಾತಿಯ ಸುತ್ತಲೂ ಒಂದೊಂದು ಗೋಡೆ! ಈ ಗೋಡೆ ಒಡಿ. ಪುಡಿ ಯಾಗಲಿ. ಜರಿದು ಬೀಳಲಿ ಆ ಕಲ್ಲುಗಳು. [illegible] ಯವನನ್ನು ನೋಡಲಿ. ಕೈಕೊಡಲಿ. ಕೂಡಿಕೊಳ್ಳಲಿ. [illegible]
" ನಾವೆಲ್ಲರೂ ಒಂದು. ನಾವೆಲ್ಲರೂ [illegible] ಮಂತ್ರದ ಅರ್ಥವೇನು? ಹೇಳುವುದೊಂದು ಮಾಡುವುದೊಂದಲ್ಲ. [illegible] ನಂತೆ ಕೃತಿ ಬೇಕು. ನೀತಿ ಬೇಕು. ಮೋಹನ ನೀತಿವಂತ. ಹುಡುಗಿಯನ್ನು ವಂಚಿಸದೆ ಮದುವೆಯಾದುದೇ ಅದಕ್ಕೆ ಸಾಕ್ಷಿ. ನೀತಿಯೇ ಮನುಷ್ಯ ಜಾತಿಯ ನೆಲೆಗಟ್ಟು. ಅದರ ತಳಹದಿಯಲ್ಲೇ ಸ್ವರಾಜ್ಯ ಕಟ್ಟಲು ಗಾಂಧೀ ಮಹಾತ್ಮನ ಯತ್ನ. ಅದು ಯಶಸ್ವಿಯಾದರೆ ಗಾಂಧೀ ರಾಜ್ಯ ರಾಮ ರಾಜ್ಯವಾದೀತು. ಗಾಂಧೀ ಮಾತನ್ನು ಗಾಳಿಗೆ ತೂರಿ ಜಾತಿ ಜಾತಿಯೆಂದು

ಕೋತಿಗಳ ಬುದ್ಧಿ ತೋರಿಸಿದರೆ ಅದೇ ರಾವಣನ ರಾಜ್ಯವಾಗದೇ ಇರಲಿಕ್ಕಿಲ್ಲ. ಜಾತಿ ಎಂದರೆ ನಮ್ಮ ದೇಶಕ್ಕೆ ಅಳಿಗಾಲ! ಪರಸ್ಪರ ಪ್ರೀತಿ ಎಂದರೆ ಉಳಿಗಾಲ! ಆದುದರಿಂದ ಇನ್ನೊಮ್ಮೆ ನನ್ನ ಮುಂದೆ ಹೇಳಬೇಡ ಇದನ್ನು."

"ಹೇಳದಂತೆ ದೇವರು ಮಾಡುವುದೂ ಇಲ್ಲ ಪೂರಾಯರೇ. ನಿಮ್ಮ ಕಣ್ಣೆದುರಿಗೇ ನನ್ನ ಪ್ರಾಣ ಹೋದರೆ ನನಗೆ ಮೋಕ್ಷ ಪ್ರಾಪ್ತಿ" ಎಂದು ಸೀತಮ್ಮನವರು ಕಣ್ಣುಗಳನ್ನೊರಸಿಕೊಂಡರು.

"ಅಮ್ಮ. ನೀನು ಸುಮ್ಮಗಿರು" ಎಂದು ರಾಜಾ ಹೇಳಿದುದರಿಂದ ಅವರು ಒಳಗೆ ಹೊರಟು ಹೋದರು.

ಸೀತಮ್ಮನವರು ಒಳಗೆ ತೆರಳಿದ ಬಳಿಕ ಗೋವಿಂದರಾಯರು ಮಗನನ್ನುದ್ದೇಶಿಸಿ ಹೇಳಿದರು. "ರಾಜಾ ನಾನಿನ್ನು ಬಹಳಕಾಲ ಬದುಕುವುದಿಲ್ಲ. ನಿನಗೆ ಒಂದು ವಿಷಯ ತಿಳಿಸಬೇಕೆಂದು ಮನಸ್ಸಾಗಿದೆ. ಮತ್ತೇನಿಲ್ಲ. ನಿಮಗೆಲ್ಲರಿಗೂ ಅಲ್ಪಸ್ವಲ್ಪ ವಿದ್ಯೆ ಕಲಿಸಿದೆ. ನೀನು ದೊಡ್ಡವನಾದ ಮೇಲೆ ನೀನೂ ತಮ್ಮಂದಿರಿಗೆ ಕಲಿಸಿದಿ. ಸಂಸಾರ ಭಾರಕ್ಕೂ ಹೆಗಲು ಕೊಟ್ಟವನು ನೀನೇ. ಶಿವರಾಯನ ಲಗ್ನಕ್ಕೆ, ಕಮಲೆಯ ಮದುವೆಗೆ ನಿನ್ನಿಂದಲೇ ಹಣ ಪಡೆದುಕೊಂಡೆ. ಅದನ್ನೇ ನಿನಗೆ ಮೊನ್ನೆ ಮರಳಿ ಕೊಟ್ಟು ಬಿಟ್ಟೆ. ಅದರಿಂದ ನಿನ್ನ ಸಾಲದ ಶೂಲ ತಪ್ಪಿತು. ಆದುದರಿಂದ 'ಫಂಡಿನ ಹಣ ನಮಗೇಕೆ ಕೊಡಲಿಲ್ಲ?" ಎಂದು ಯಾರೂ ಕೇಳಲು ಹಕ್ಕಿಲ್ಲ. ಆದರೆ ಒಂದು ಮಾತಿದೆ. ಮೋಹನನಿಗೆ ಮಾತ್ರ ನನ್ನಿಂದ ಏನೂ ಸಹಾಯವಾಗಲಿಲ್ಲ. ಆದಕ್ಕೆ ಒಂದು ವಿಚಾರ ಬಂದಿದೆ ನನಗೆ. ನಾನು ಕಣ್ಮುಚ್ಚಿದ ಮೇಲೆ ನಾನು ಮಾಡಿದ್ದ ಮಾತ್ರೆ ಪರಡಿ ಇದ್ದ [illegible] ಇಲ್ಲ ಅವನಿಗೆ ಮುಟ್ಟಿಸಿ ಬಿಡು. [illegible] ನನ್ನ ಆಶೆ. [illegible]

"[illegible] ಮಾಡಬೇಡಿರಿ" ಎಂದು ಹೇಳಿ ರಾಜಾ ಸಣ್ಣ ಮೋರೆ ಮಾಡಿಕೊಂಡ.

"ಏನು ನಾನು ಹಾಸಿಗೆಯಲ್ಲಿ ಬಿದ್ದು ಹೊರಳಿ ನರಳಿ ಸಾಯುವ ವರೆಗೆ ಬದುಕ ಬೇಕಂತಿಯೇನು? ಥೂ, ಹಾಗೆ ಬದುಕಿರ ಬಾರದು. ನಗುತ್ತ ನಗುತ್ತ ಪ್ರಾಣ ಬಿಡಬೇಕು. ಅಂದರೆ ಸುಖ ಮರಣ. ಮಹಾತ್ಮರ ಮರಣವೇ ಹಾಗೆ. ಆದರೆ ನನ್ನನ್ನು ಹೇಗೆ ಎಳೆದೊಯ್ಯುತ್ತಾನೋ? ಆ ಸಚ್ಚಿದಾನಂದ ಸ್ವರೂಪನಿಗೇ ಗೊತ್ತು."

ರಾಜಾ ಬೇಸರದಿಂದ ಎದ್ದು ತೋಟದ ಕಡೆ ನಡೆದ. ಸ್ವಲ್ಪ ಹೊತ್ತಿನ ಮೇಲೆ ಗೋವಿಂದರಾಯರೂ ಅಲ್ಲಿಗೆ ಬಂದರು. ತೆಂಗಿನ ಸಸಿ ನೆಡಲು ರಾಜಾ ಹಾರೆಯಿಂದ ಮಣ್ಣನ್ನಗೆಯುತ್ತಿದ್ದ. ಗದ್ದೆಯ ಹುಣಿಯಲ್ಲಿ ಒಂದು ತಾಳೆ ಗೊರಗಿ ಕುಳಿತ ಗೋವಿಂದರಾಯರು, "ರಾಜಾ, ಇನ್ನೂ ಅಗೆ. ಅಲ್ಲಿ ಕೊಪ್ಪರಿಗೆಯಿದೆ'' ಎಂದು ನುಡಿದರು.

ರಾಜಾ ಹಾರೆಯನ್ನು ಕೆಳಗಿಟ್ಟು ತಲೆ ಎತ್ತಿ ತಂದೆಯವರನ್ನು ವಿಸ್ಮಿತ ನೇತ್ರಗಳಿಂದ ನೋಡಿದ. ಏಕೆ ಹೀಗೆ ವಿಚಿತ್ರವಾಗಿ ವರ್ತಿಸುತ್ತಿದ್ದಾರೆಂದು ಅವನಿಗೆ ಅರ್ಥವೇ ಆಗಲೊಲ್ಲದು. " ಈ ಗದ್ದೆಯ ಹುಣಿಯಲ್ಲಿ ಕೊಪ್ಪರಿಗೆ ಯುಂಟಾ? ಅಮ್ಮ ಹೇಳಿದಂತೆ ಅಪ್ಪಯ್ಯನಿಗೆ ಸಂಪೂರ್ಣ ಎಪ್ಪತ್ತರ ಮರುಳು ಹಿಡಿಯಿತಾ ಹೇಗೆ?'' ಎಂಬ ಆಶ್ಚರ್ಯದ ಭಾವ ಅವನ ಮೋರೆ ಯಲ್ಲಿ ಎದ್ದು ಕಾಣುತ್ತಿತ್ತು.

" ಏನು ನನ್ನ ಮಾತಿನಲ್ಲಿ ನಂಬಿಗೆಯಿಲ್ಲಾ ನಿನಗೆ? ನಾನು ತೋರಿ ಸುತ್ತೇನೆ ಚಿನ್ನ'' ಎಂದು ಹೇಳುತ್ತ ಅವರು ಆ ಹೊಂಡದ ಕಡೆ ಬಂದರು. ರಾಜಾ ಅಗೆದಿದ್ದ ಒಂದು ಹಿಡಿ ಮಣ್ಣನ್ನು ಕೈಯಲ್ಲಿ ಹಿಡಿದು, " ಹಿಡಿ ಹಿಡಿ. ಇಕೋ ಹಿಡಿ. ಇದೇ ಕೊಪ್ಪರಿಗೆ. ಇದೇ ಚಿನ್ನ '' ಎಂದು ಅವನ ಕೈಗೆ ಸುರಿ ದರು.

ಮಣ್ಣಿನ ಅಣು ಕಣುಗಳು ಉದುರಿದವು.

ಅವರು ಮಗನನ್ನು ಕಣ್ತುಂಬ ನೋಡಿ ನುಡಿದರು. " ಮಗನೇ, ಇದು ಮಣ್ಣಲ್ಲ. ಇದೇ ಚಿನ್ನ. ಈ ಮಣ್ಣಿನಲ್ಲೇ ತೆಂಗು ಕಂಗು ಭತ್ತಗಳ ಚಿನ್ನದ ಸರಿಗೆಗಳಂತಹ ಬೇರುಗಳು ಪಸರಿಸಿದುವು. ಅವೇ ಪುಷ್ಪ ಫಲಗಳನ್ನೆಲ್ಲ ಮಣ್ಣಿ ನಿಂದಲೇ ಎತ್ತಿಕೊಂಡು ಮರಕ್ಕೆ ಮುಡಿಸಿವೆ. ಆ ಕಾಯಿಗಳನ್ನು ಮಾರಿ ಬಂದಾಗಲೇ ನಿನ್ನ ಕೈಗೆ ಹಣ. ಆದುದರಿಂದ ಮಣ್ಣಿನಿಂದಲೇ ಹೊನ್ನು. ಇದು ಬಂಗಾರ ಭೂಮಿ, ಇದರಲ್ಲಿ ಚಿನ್ನವಿದೆ, ಇದರಲ್ಲಿ ಕೊಪ್ಪರಿಗೆಯಿದೆ ಎಂದು ನಾನು ಹಿಂದೆ ಹೇಳಿದ್ದುದು ಸುಳ್ಳಾ? ಅಕೋ, ಆ ತೆಂಗು ಕಂಗುಗಳನ್ನು ನೋಡು. ಆ ಒಂದೊಂದು ಗೊನೆ, ಒಂದೊಂದು ಗೊಂಚಲು ಕೊಪ್ಪರಿಗೆಯ ಮದನ ಕೈಗಳು! ''

ಅಷ್ಟು ಹೇಳಿ ತಂದೆ ಮನೆಯ ಕಡೆ ಹೊರಟರು. ತಬ್ಬಿಬ್ಬಾದ ರಾಜಾ
ನರ ಬೆನ್ನು ಕಾಣುವ ವರೆಗೂ ಅಲ್ಲೇ ಎವೆಯಿಕ್ಕದೆ ನಿಂತು ನೋಡಿದ.
[illegible]ಾರಿಗೆ ಮರುಳು! ಅವರಿಗೋ ನನಗೋ ? " ಎಂದು ಅವನು ಭಾವಿಸಿ,
[illegible]ನ್ನ ಕೈ ಮೇಲೆ ಸುರಿದ ಹಿಡಿ ಮಣ್ಣನ್ನು ತಲೆಯ ಮೇಲೆ ಚೆಲ್ಲಿ

[illegible] ನಾರ ಮಂಗಳೂರಿನಿಂದ ಬಂದ ರಾಜಾ ಮನೆ
ಏರುವಾ[illegible] [illegible]ಪ್ಪಯ್ಯ. ಅಪ್ಪಯ್ಯ" ಎಂದು ಗಟ್ಟಿಯಾಗಿ
ತ್ತ ಬಂದ. ಕಾಲುಗಳಿಗೆ ಎಣ್ಣೆ ತಿಕ್ಕಿಕೊಂಡು ಕೊಟ್ಟಿಗೆಯ ಒಲೆಯ
ಕುಳಿತಿದ್ದ ಗೋವಿಂದರಾಯರು ಗಾಬರಿಯಾಗಿ ಮುಖಮಂಟಪಕ್ಕೆ
[illegible]ದರು.

ಅಪ್ಪಯ್ಯ, ಬ್ರಿಟಿಷರು ನಮಗೆ ಸ್ವರಾಜ್ಯ ಕೊಡುವರಂತೆ. ಬ್ರಿಟಿಶ್
ಘೋಷಣೆ ಹೊರಡಿಸಿದೆ. ಸ್ವಾತಂತ್ರ್ಯ ಬಂತು. ಬಂತು." ಎಂದು
[illegible]ಂಟ್ ದೊರೆತ ಮಕ್ಕಳಂತೆ ಹರ್ಷ ಪಟ್ಟ.

ಹೌದಾ ಮಗನೇ ?''

ಹೌದು."

[illegible]ಗಲಿ ದೇವರು ದಯೆದೋರಿದ'' ಎಂದು ಗೋವಿಂದರಾಯರು
[illegible]ಷ್ಪಗಳನ್ನು ಸುರಿಸಿದರು. "ಹೆಣ್ಣು ಕೊಡುತ್ತೇವೆಂದು ಒಪ್ಪಿಕೊಂಡ
[illegible]ನ್ನ ಮಗಲು ಇನ್ನು ಬಹಳ ಸಮಯ ಹಿಡಿಯಲಿಕ್ಕಿಲ್ಲ. ಸ್ವಾತಂತ್ರ್ಯ
[illegible]ರಿಯಾವುದು. ಹಿಟ್ಲರನ ಪಾಶವೀ ಶಕ್ತಿಗೂ ಕುಗ್ಗದ ಬ್ರಿಟಿಶರು
[illegible]ದರಲ್ಲ. ಆಹಾ, ಆಹಾ, ದೈವ ಬಲಂ ಬಲಂ
[illegible]ಹಾತ್ಮರಲ್ಲಿ. [illegible] ಸಾಕ್ಷಾತ್ ಪರಮಾತ್ಮ.'' ಎಂದು
ಗೋವಿಂದರಾಯರು ಸೀತಮ್ಮನವರನ್ನು ಕರೆದರು.

[illegible] ನಮ್ಮ ಮಾಣಿ ಗಾಂಧೀ ಪಾರ್ಟಿಗೆ ಸೇರಿದಾಗ ಅಳುತ್ತಿದ್ದೀಯಲ್ಲ
[illegible]ಡು ಏನಾಯ್ತು? ನಮಗೆ ಸ್ವಾತಂತ್ರ್ಯ ಬಂತು. ಇನ್ನು ಮುಂದೆ
[illegible]ಾತನಾಡಬೇಡ. ರಾಷ್ಟ್ರ ಸೇವೆಗೆ ಹೊರಟವರನ್ನು ತಡೆಯುವುದು
[illegible]ಡುವುದು ಮಹಾ ಪಾಪ. ಮನಸ್ಸಿನಲ್ಲಿ ಬಯಸುವುದು ಘೋರ
[illegible]ಪ್ಪಾಯ್ತು ಅನ್ನು."

"ತಪ್ಪಾಯ್ತು ಮಾರಾಯರೆ" ಎಂದ ಸೀತಮ್ಮನವರು ನಗುತ್ತ ಸಾಷ್ಟಾಂಗ ನಮಸ್ಕಾರ ಮಾಡಿದರು.

ಗೋವಿಂದರಾಯರು ಮಗನಿಗೆ ಹೇಳಿದರು. "ರಾಜಾ, ನಾಲ್ಕು ಸಿಂಯ್ಯಾಳ ಕ್ಕೊ. ಕ್ಕೊನಾಲ್ಕು ಗೆಂಥಾಳಿ ಸಿಂಯ್ಯಾಳ. ಎರಡು ದೇವರಿಗಾಯ' ಎರಡು ನಮಗೆ. ಇಂದು ಕುಡಿದು ಬಿಡೋಣ.. ನನ್ನ ಮನಸ್ಸಿಗೆ ಆ ನಂದವಾಗಿದೆ. ಹುಟ್ಟಿದಂದಿನಿಂದ ಇಷ್ಟರವರೆಗೆ ಇಂಥ ಆನಂದವನ್ನು ನಾ ಅನುಭವಿಸಿಲ್ಲ. ಇವಳನ್ನು ಲಗ್ನವಾದಾಗ ಸಂತೋಷವಾಯ್ತು. ಸೀನ ಹುಟ್ಟಿದಾಗ ಪುತ್ರ ಜನನದ ಹರ್ಷವಾಯಿತು. ಈ ಮಣ್ಣಿನಲ್ಲಿ ನೆಟ್ಟ ಗಿ ಗಳಲ್ಲಿ ಹೂ ಹೋಗಿ ಕಾಯಿ ಬಂದಾಗ ಮತ್ತೊಮ್ಮೆ ಆನಂದವಾಯ್ತು. ಆದ ಇಂದಿನ ಈ ಸುಖ ಎಲ್ಲಕ್ಕಿಂತಲೂ ಹೆಚ್ಚಾದುದು. ನನ್ನ ಚಿತ್ತ ಕ್ಷೇ ಕುಣಿಯಲಾರಂಭಿಸಿದೆ. ತಾ. ತಾ. ಸಿಂಯ್ಯಾಳ ತಾ"

ತಂದೆ ವಿಚಿತ್ರವಾಗಿ ತೋರಿದರು ರಾಜನಿಗೆ. ಯಾಕೆ ಹೀಗೆ ಮಾ ನಾಡುತಿದ್ದಾರೆಂಬುದೇ ಅವನಿಗೆ ಅರ್ಥವಾಗಲಿಲ್ಲ. ಎಂದಿನಂತೆಯೇ ಇಂ ಮರುಳು ಬುದ್ಧಿ ಇರಬೇಕೆಂದು ಭಾವಿಸಿದ. ಸಿಂಯ್ಯಾಳ ಕುಡಿದರೆ ಶಿ ವಾದೀತೆಂದು ಸೀತಮ್ಮನವರು ತಡೆದರೂ ಅವರು ಕೇಳಲಿಲ್ಲ. ಗೆಂಥಾ ಸಿಂಯ್ಯಾಳಕ್ಕೇ ಬಾಯಿ ಕೊಟ್ಟರು. "ಆಹಾ, ಇದು ಎಷ್ಟು ಸವಿ? ಇದರೊಳ ದೇವರು ಸಕ್ಕರೆ ಸುರಿದನಾ ಹೇಗೆ? ಅಥವಾ ಮಣ್ಣಿನಲ್ಲೇ ಬೆಲ್ಲ ಬೆ ನಾ? ಇದು ಅಮೃತ. ಅಮೃತ" ಎಂದು ಪೂರಾ ಕುಡಿದು ಬಿಟ್ಟರು.

ಸೀತಮ್ಮನವರು ಮೊದಲೇ ಎಚ್ಚರಿಕೆ ಕೊಟ್ಟುದುದು ಸತ್ಯವಾಯ್ತು ಸಿಂಯ್ಯಾಳದ ನೀರು ಗೋವಿಂದರಾಯರಿಗೆ ಹಿಡಿಯಲಿಲ್ಲ. ಸಂ "ಛಳಿ" ಎಂದು ಕಂಬಳಿ ಹೊದೆದು ಮಲಗಿಕೊಂಡರು. 'ಅಮ್ಮಾ, ಕಪ್ ಸ್ಟ್ರಾಂಗ ಕಾಫಿ ಮಾಡು. ಅದರೊಂದಿಗೆ ಕ್ವಿನಿನ್ ಗುಳಿಗೆ ನು ಅವರು" ಎಂದು ರಾಜಾ ತಿಳಿಸಿದ. "ಕಾಫಿಯಾದರೆ ಒಂದು ಸಿ ಏಕೆ? ಒಂದು ತಂಬಿಗೆ ಕೊಡು. ಅಮೃತ ಕುಡಿದು ಸವಿಯಾದ ಈ ನಾ ಯನ್ನು ಕ್ವಿನಿನ್ ವಿಷದಿಂದ ಕಹಿ ಮಾಡಬೇಡ" ಎಂದು ತಂದೆ ನುಡಿ "ಆಗಲಿ. ಆಗಲಿ. ಕಾಫಿ ಆಗಲಿ" ಎಂದು ಅವನು ಸುತ್ತೈಸಿದ. ಕಾಫಿಗೆ ಕರೆಯಲು ಸೀತಮ್ಮನವರು ಮುಸ್ಸಂಜೆಗೆ ಹಟ್ಟಿಗೆ ತೆರಳಿದರು. ಹಟ್ಟಿಗ

ಬಾಗೀರಥಿಯ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿದ್ದು
ಅವರು ಕಂಡರು. "ನಿನಗೇನಾಗಿದೆ ಬಾಗೀರಥಿ? ಯಾಕೆ ಅಳುತ್ತಿದ್ದೀ?"
ಅವರು ಕೇಳುತ್ತ ಅದರ ಹಣೆ, ಕೆನ್ನೆ, ಕುತ್ತಿಗೆಯ ನಿರಿಗಳನ್ನು
ದ ತೀಡಿದರು. ಹಾಗೆ ಸೀತಮ್ಮನವರು ಬಗ್ಗಿದಾಗ ಬಾಗೀರಥಿ ಅವರ
ಕೈನೆಕ್ಕಿ ಹಣೆಯಲ್ಲಿದ್ದ ಕುಂಕುಮವನ್ನೂ ನೆಕ್ಕಿತು. "ಆಂ" ಎಂದು
ದ ಸರಿದರು ಸೀತಮ್ಮ. ಅವರ ಎದೆಯಲ್ಲಿ ಬಿರುಗಾಳಿಗೆದ್ದ ಸಾಗರದ
ಅನಂತ ತೆರೆಗಳಂತೆ ಹೊಯ್ದಾಟ ನಡೆಯಿತು. ಕಣ್ಣುಗಳಿಂದ ಅಶ್ರುಧಾರೆ
ಸುರಿಯಿತು. ಅಲ್ಲೇ ಬೈಪಣೆಯಲ್ಲಿ ಸ್ವಲ್ಪ ಸಮಯ ತಲೆಗೆ ಎರಡೂ ಕೈಗಳನ್ನಿ
ಟ್ಟುಕೊಂಡು ಅವರು ಮೌನವಾಗಿ ರೋಧಿಸಿದರು. "ಹಟ್ಟಿಗೆ ಹೋದವಳು
ಅಲ್ಲೇ ಮುಳುಗಿದಳಾ?" ಎಂದು ಗೋವಿಂದರಾಯರು ಆಡಿದುದು ಕಿವಿಗೆ
ಬಿದ್ದುದರಿಂದ ಮತ್ತೆ ಎದ್ದು ತಂಬಿಗೆಯಿಂದಲೇ ಬಾಗೀರಥೀಯ ಬೆನ್ನಿಗೆ
ಗುದ್ದಿದರು. ಕಾಫಿ ಕೊಡಲು ಬಂದಾಗ ಗಂಡನನ್ನೇ ಬಹಳ ಹೊತ್ತು ದಿಟ್ಟಿ
ಸಿದರು. ನುಂಡಗಾದ ಆ ತಲೆಯಲ್ಲಿ ಬೆಳ್ಳಿ ಬಂಗಾರದ ಸರಿಗೆಗಳಂತೆ ಕೆಲವು
ಕೂದಲುಗಳಿದ್ದುವು. ಉನ್ನತವಾದ ನೊಸಲು. ಹುಬ್ಬು ಹಣ್ಣಾಗಿದೆ. ಕಣ್ಣು
ಗಳು ಆಳವಿದ್ದರೂ ಮುಕ್ಕಳಂತಹ ನಗುವಿನ ನೋಟ. ಎಪ್ಪತ್ತು ವರುಷ
ವಾಗಿದ್ದರೂ ಕೆನ್ನೆಗಳಲ್ಲಿ ಹೊಂಡ ಬಿದ್ದಿಲ್ಲ. ಉದ್ದವಾದ ಕೈಕಾಲುಗಳು.
ವಿಶಾಲವಾದ ಎದೆ. ವಯೋವೃದ್ಧರಾದರೂ ಬಂಗಾರದಂತೆ ಥಳಿಸುತ್ತಿದೆ
ಬಣ್ಣ. ಒಂದೊಂದೇ ಅಂಗ ಸರ್ವಾಂಗ ನೋಡಿದರು ಸೀತಮ್ಮ. ಅವರು
ಹಳದೇ ಇದ್ದುದರಿಂದ ಗೋವಿಂದರಾಯರ ದೃಷ್ಟಿ ಹೆಂಡತಿಯ ಕಡೆ ಹೊರ
[illegible] ಆಶ್ಚರ್ಯವಾಯಿತು ಅವರಿಗೆ.

[illegible] ಯಾಕೆ? ನಿನಗೇನಾಗಿದೆ ಈ ಹೊತ್ತು? ಎಂದಿನಂತಿಲ್ಲ ನೀನು.
[illegible]ನ ರೀತಿಯೇ ಬೇರೆ. ಗುಂಡಿನ ಪೆಟ್ಟು ತಾಗಿ ಬಿದ್ದು ಒದ್ದಾಡುವ ಹರಿ
[illegible] ನೇತ್ರಗಳಂತೆ ನನ್ನನ್ನು ನೋಡುತ್ತಿದ್ದೀಯಲ್ಲ! ಯಾಕೆ ಹಾಗೆ ನೋಡು
[illegible]? ನನ್ನನ್ನು ನೀನು ನೋಡಿಯೇ ಇಲ್ಲವೇನು? ನಿನಗೇನಾಗಿದೆ? ನಿನ್ನ
[illegible]ಯಲ್ಲಿ ಜೀವಕಳೆಯಿಲ್ಲ"

"ಜೀವವೇ ಇಲ್ಲ. ಮತ್ತೆ ಜೀವ ಕಳೆ ಎಲ್ಲಿಂದ ಬರಬೇಕು? ನನಗೆ ದಿನ

ಬರಲಿಲ್ಲ. ದೇವರು ಇನ್ನು ಬರೆದಿದ್ದಾನೆ ಹಣೆಯಲ್ಲಿ''
ಗುಟ್ಟುತ್ತಾ ಅವರು ಎದ್ದು ಹೋದರು.

"ನಿನಗೆ ಮರುಳು! ಮರುಳು" ಎಂದು ಗೋವಿಂದರಾಂ
ಹೊದೆದು ಕೊಂಡರು.

ರಾತ್ರಿ ಗೋವಿಂದರಾಯರ ಮೈಗೆ ಕೈ ಇಡುವಂತಿರಲಿಲ್ಲ.
ಒತ್ತುತಿದ್ದಾಗಲೇ ಸೀತಮ್ಮನವರ ಎದೆ ಜುಂ ಜುಂ ಎಂದಿತು.
ರಿಗೆ ವಿಶೇಷ ನಿದ್ದೆಯೂ ಬರಲಿಲ್ಲ. ಬೆಳಗಿನ ಜಾವಕ್ಕೆ ತೂ
"ಹೋಯಿ, ಹೋಗಬೇಡ್ರಿ. ನಿಲ್ಲಿ. ನಿಲ್ಲಿ. ಕಾಫಿ ಕುಡಿದು ಹೋಗ್ರಿ''
ಬೆಳಗಿನ ಜಾವಕ್ಕೆ ಗೋವಿಂದರಾಯರು ಬಡಬಡಿಸಿದರು. ಸೀತಮ್ಮ
ದೀಪ ಬೆಳಗಿಸಿ ಗಂಡನ ಮೈಯನ್ನು ಹಿಡಿದು ಅಲುಗಿಸಿ "ಏನದು?
ಮಕ್ಕಳ ಹಾಗೆ ಬಡಬಡಿಸುತಿದ್ದೀರಲ್ಲಾ'' ಎಂದು ಮಾತನಾಡಿಸಿ
ರಾಜನಿಗೂ ಎಚ್ಚರವಾದುದರಿಂದ ಅವನು ಹಾಸಿಗೆಯಲ್ಲಿ ಕುಳಿತ. ಗೋ
ರಾಯರು ಗೋಡೆಗೊರಗಿ ಕುಳಿತು "ಘಟ್ಟಕ್ಕೆ ತೆರಳುವ ನಾಲ
ಬ್ರಾಹ್ಮಣರು ಬಂದಿದ್ದರು. ಕಾಫಿ ಕುಡಿದು ಹೋಗ್ರಿ ಎಂದರೆ, "ಇಲ್ಲ
ಎಂದು ಹೊರಟರು. ಅದಕ್ಕೆ ಅವರನ್ನು ಕರೆದು ನಿಲ್ಲಿಸಿದೆ" ಎಂದು
ವಿವರಿಸಿದರು.

"ಎಂಥದು ಅಪ್ಪಯ್ಯ? ನೀವು ಹೀಗೆ ಮಾತನಾಡಿದರೆ ಹೇ
ರಾಜಾ ಧೈನ್ಯಭಾವದಿಂದ ನುಡಿದ.

"ಬಿಡು. ಬಿಡು. ಒಂದು ಉದಯರಾಗ ಹಾಡಿಬಿಡುತ್ತೇನೆ
ಕೃಪೆ ಮಾಡು ಎನಗೆ। ನೊಂದೆ ನಾ ಸತ್ತುಹುಟ್ಟುವ ಕೊ
ನೊಂದೆ ನಾ ಪಂಚೇಂದ್ರಿಯಗಳ ಬಾಧೆಗಳಿಂದ। ನೊಂದೆ ನಾ ಷಡ್ವ
ಟ್ಟುಳಿಯಿಂದ। ನೊಂದೆನಾ ಹರಿ ಎನ್ನದೆ ಕೃಷ್ಣಾ।....'' ಎಂದು ಬ
ವರೆಗೂ "ಕೃಷ್ಣಾ, ಕೃಷ್ಣಾ" ಎಂದು ಅನೇಕಸಲ ರಾಗ ಎಳೆದರು
ಮೇಲೆ ಏಳುವ ಬದಲು ಮತ್ತೆ ಚಾಪೆಯಲ್ಲೇ ಮಲಗಿಕೊಂಡರು
ಕೊಡಲುಬಂದಸೀತಮ್ಮನವರು "ಇನ್ನೂ ಮಲಗಿದ್ದೀರಲ್ಲ. ಬೇ
ಎದ್ದು ಕುಳಿತು ಕೊಳ್ಳಿ. ಕಾಫಿ ತಂದಿದ್ದೇನೆ" ಎಂದರು.

"ನೀನೇ ಬಾಯಿಗೆ ಹೊಯ್ದು ಬಿಡು. ಏಳಲು ಆಗುವುದಿಲ್ಲ. ಕಾಲು [illegible]ಲ್ಲಿ ಬಲವಿಲ್ಲ."

ಕಾಲುಗಳನ್ನು ಮುಟ್ಟಿದ ಸೀತಮ್ಮನವರು ಹೌಹಾರಿದರು. ಮುಖ [illegible]ಟಪಕ್ಕೆ ಬಂದು, "ರಾಜಾ, ರಾಜಾ, ರಾಜಾ, ರಾಜಾ" ಎಂದು ಮೇಲಿಂದ [illegible]ಲೆ ಗಟ್ಟಿಯ[illegible] ಕೂಗಿಬಿಟ್ಟರು. "ಏನವ್ವಾ ಏನವ್ವಾ?" ಎಂದು [illegible]ವನು ಓಡುತಾ ಬಂದ. [illegible]ಲೆ ಬಗ್ಗಿಸಿಕೊಂಡು, ಸೀತಮ್ಮನವರು ಗಂಡನ [illegible]ವರು. ರಾಜಾ ತಂದೆಯ ಬಳಿಯಲ್ಲೇ ಕುಳಿತು "ಏನಾಗುತ್ತದಪ್ಪಯ್ಯಾ? [illegible] ಕೇಳಿದ.

"ಏನಿಲ್ಲ. ಸ್ವಲ್ಪ ತುಳಸಿ ನೀರು ತಾ"

"ಯಾಕೆ ನೀವು ನಮ್ಮನ್ನು ಹೆದರಿಸುತಿದ್ದೀರಿ?"

"ಹೆದರಿಸುತಿದ್ದೇನಾ? ಥೂ, ಮರುಳಾ. ಸತ್ಯಸಂಗತಿ ಹೇಳುತಿದ್ದೇನೆ ನೋಡು ಕಾಲು ತಣ್ಣಗಾಯ್ತು. ಸೊಂಟದ ವರೆಗೆ ಬಂತು. ಇನ್ನು ಬಹಳ ಹೊತ್ತಿಲ್ಲ. ತಾ"

ಮುಟ್ಟಿ ನೋಡಿದ ರಾಜಾ ಮರುಮಾತನಾಡದೆ ಅಂಗಳಕ್ಕೆ ಬಂದು ತುಳಸಿ ಕಟ್ಟೆಯ ಗಿಡದಿಂದ ಕೆಲವು ಕುಡಿಗಳನ್ನು ಹರಿದು ಒಂದು ಲೋಟ ನೀರು ತಂದ. "ಹತ್ತಿರ ಕುಳಿತುಕೋ" ಎಂದು ಕೈಯೆತ್ತಿ ತಂದೆ ಕರೆದರು.

ಮೆಲುಧನಿಯಲ್ಲೇ ಅವರು ಹೇಳಿದರು. "ರಾಜಾ, ನಾನಿನ್ನು ಬದುಕು ವುದಿಲ್ಲ. ಬದುಕಬೇಕೆಂಬ ಆಸೆಯೂ ಇಲ್ಲ. ಸ್ವರಾಜ್ಯದ ಸುದ್ದಿ ಕೇಳಿದಾಗಲೇ ಆ ಆಶೆ ಮುಗಿಯಿತು. ಆನಂದ ಲಹರಿಯಲ್ಲೇ ಪ್ರಾಣ ಬಿಡುವುದು ಒಳ್ಳೇ [illegible] ಏಕೆಂದ[illegible] ರಾಜ್ಯ[illegible]ದ ಮೇಲೆ ಏನೇನು ಅನರ್ಥ [illegible]ತ್ತದೋ? ಎಷ್ಟು ರಕುತ ಪಾತವಾಗುತ್ತದೋ? 'ದುರ್ದಿನಗಳೂ ಬರಲಿವೆ ಸ್ವಲ್ಪ ಕಾಲದ ವರೆಗೆ'' ಎಂದು ಹರಿ ಒಮ್ಮೆ ಹೇಳಿದ್ದ. ಒಂದು ವೇಳೆ ಹಾಗಾದರೆ ಅವನ್ನು ಕೇಳಿ ಬದುಕಲಾರೆ. ದುಃಖ ದಿಂದ ಎದೆಯೊಡೆದೀತು. ಅದಕ್ಕಿಂತ ಈಗ ಮರಣ ಬಂದುದೇ ಲೇಸು. ನೀನು ಅವಳನ್ನು ಬಿಟ್ಟು ಹಾಕಬೇಡ'' ಎಂದು ಸೀತಮ್ಮನವರ ಕಡೆ ಕೈತೋರಿಸಿ ದರು. ಆ ಮೇಲೆ "ತೀರ್ಥ ಹೊಯ್'' ಎಂದು ಸಂಜ್ಞೆಮಾಡಿದರು. ನಡುವೆ ತಡೆದು "ಮಕ್ಕಳಿಗೆಲ್ಲ ನನ್ನ ಆಶೀರ್ವಾದ ತಿಳಿಸು'' ಎಂದು ಹರಸುವ

ವರಂತೆ ಕೈ ಎತ್ತಿದರು. ಮತ್ತೂ ಸ್ವಲ್ಪ ತೀರ್ಥ ಜ
ಸಾಕು, "ನಾನು ಮುದುಕನಲ್ವಾ. ಶೀತ ಆದೀತು" ಎಂದರು. '
ಸೀತಾ........" ಅವರ ಕೊನೆಯ ಉಚ್ಚಾರ. ಮತ್ತೆ ಮೌನ.

ರಾಜಾ ಬಿಕ್ಕಿ ಬಿಕ್ಕಿ ಅಳುತ್ತಾ ಮುಖಮಂಟಪಕ್ಕೆ ಬಂದ. "
ರೊಂಯ್" ಎಂದು ಗಾಳಿ ಬೀಸಿತು. ಒಣಗಿದ ತೆಂಗಿನ ಮಡಲುಗ
ಬಡ ಬಿದ್ದುವು. ತೆಂಗಿನ ಮರಕ್ಕೆ ಹಗ್ಗ ಕಟ್ಟಿ ಬಿಗಿದಿದ್ದ ಬಾಗೀರಥಿ, "
ಎಂದು ಬೊಬ್ಬೆ ಎಬ್ಬಿಸಿತು. ಎಲ್ಲಿಂದಲೋ ದೂರದಿಂದ ಹಾರಿ ಬಂದ
ತೆಂಗಿನ ಗರಿಯ ಮೇಲೆ ಕುಳಿತು, "ಕಾ, ಕಾ, ಕಾ, ಕಾ" ಎಂದು ಕೂಗಿ
"ಕಾ, ಕಾ, ಕಾ, ಕಾ," ಅಪಸ್ವರ!

"ಓ, ರಾಯರೇ, ಓಯ್" ಎಂದು ಕರೆಯುತ್ತ ಮುಂದಾಣೆಯಿಂದ
ಎಳ್ನೀರ್ ಘಟ್ಟಕ್ಕೆ ಹೊರಟಿದ್ದ ನಾಲ್ವರು ಬ್ರಾಹ್ಮಣರು ಅಗಳು ದಾಟಿ
ಮುಖಮಂಟಪಕ್ಕೆ ಏರಿಬಂದರು.